# ಕೆಂಪು ಅಕ್ಷರ

## (SCARLET LETTER)

ಮೂಲ: ನಥೇನಿಯಲ್ ಹಾಥಾರ್ನ್.

ಅನುವಾದ: 'ಬಾಲು'




ನವ್ಯ ಸಾಹಿತ್ಯ ಪ್ರಕಾಶನ
ರಾಮಸ್ವಾಮಿ ಸರ್ಕಲ್ : : ಮೈಸೂರು.

*First Print* : 2000 Copies, APRIL 1957

*Original Title* : **SCARLET LETTER**
*Original Author* : **Nathaniel Hawthorne**
*Original Publisher* : **Public Domain**

ಬೆಲೆ: ೦ ೧೫ ೦ [ನ.ಪೈ. ೯೪]

This Kannada Translation of *Nathaniel Hawthorne's* novel '**The Scarlet Letter**' is Published by *Navya Sahitya Prakashana,* Ramaswamy Circle, Mysore, under the assistance of U S I S, Madras.

ಮುದ್ರಕರು:

ಪಿ. ಆರ್. ಸೀತಾರಾಮ್, ಬಿ. ಎಸ್ಸಿ., ಎಲ್. ಎ. ಎಂ. ಎಸ್.
ಶ್ರೀ ಸೀತಾರಾಘವ ಪ್ರೆಸ್, ರಾಮಸ್ವಾಮಿ ಸರ್ಕಲ್, ಮೈಸೂರು.

# ಮುನ್ನುಡಿ

ಈ ಕಾದಂಬರಿ ಹೊರಬಂದು ಈಗಾಗಲೇ ಬಹಳ ದಿನಗಳಾಗಬೇಕಿತ್ತು. ಆದರೆ ಕಾರಣಾಂತರಗಳಿಂದ ಹೀಗೆ ಹೊರಬರಲು ಸಾಧ್ಯವಾಗಲಿಲ್ಲ. ಎಷ್ಟೇ ಎಡರು ತೊಡರುಗಳು ಬಂದರೂ ಎದುರಿಸಿ ಇಂದು ಈ ಪುಸ್ತಕವನ್ನು ಹೊರಹಾಕುತ್ತಿದ್ದೇವೆ. ಇದಕ್ಕೆ ಕನ್ನಡ ಜನತೆಯ ಆದರ ಸ್ವಾಗತ ದೊರೆಯುತ್ತದೆಂದು ನಂಬಿದ್ದೇವೆ.

ನೆಥೇನಿಯಲ್ ಹಾಥಾರ್ನ್ ತಮಿಳುನಾಡಿನ ಸೇಲಂನಲ್ಲಿ ಕೆಲಸದಲ್ಲಿದ್ದು ತನ್ನ ೪೫ನೆಯ ವಯಸ್ಸಿನಲ್ಲಿ ಕೆಲಸದಿಂದ ಹೊರದೂಡಲ್ಪಟ್ಟ. ಹಾಗೆ ಹೊರದೂಡಲ್ಪಟ್ಟಾಗ 'ದೇವರು ನನ್ನ ಶತ್ರುಗಳನ್ನು ಹರಸಲಿ' ಎಂದು ಹೇಳಿ ಹೊರಬಂದನಂತೆ. ಏಕೆಂದರೆ ಹೀಗೆ ಹೊರಬಂದ ಮೇಲೆಯೇ–'ಮಾನವನ ಕಲಾಸೃಷ್ಟಿಯ ಉನ್ನತ ಶಿಖರದಲ್ಲಿ ರಾರಾಜಿಸುತ್ತಿರುವ ಏಕೈಕ ಅಮೆರಿಕನ್ ಕಾದಂಬರಿ' ಎಂದು ಸುಪ್ರಸಿದ್ಧ ವಿಮರ್ಶಕ ಅರ್ನಾಲ್ಡ್ ಬೆನೆಟ್‌ನ ಕೈಲಿ ಹೊಗಳಿಸಿಕೊಂಡಿರುವ–ಈ ಪುಸ್ತಕ (Scarlet Letter) ವನ್ನು ಆತ ಬರೆದದ್ದು. ಈ ಕಾದಂಬರಿ ವಿಶ್ವದ ಅತ್ಯುತ್ತಮ ಕಾದಂಬರಿಗಳಲ್ಲೊಂದು ಎಂದು ಪರಿಗಣಿಸಲ್ಪಟ್ಟಿದೆ.

ಅಂಥಹ ಒಂದು ಕೃತಿಯನ್ನು ಕನ್ನಡ ಜನತೆಗೆ ಕನ್ನಡ ಭಾಷೆಯಲ್ಲೇ ಒದಗಿಸುವ ಭಾಗ್ಯ ನವ್ಯಸಾಹಿತ್ಯ ಪ್ರಕಾಶನಕ್ಕೆ ಲಭ್ಯವಾದದ್ದು ನಮ್ಮ ಸುಕೃತಫಲ. ಈ ಅತ್ಯುತ್ತಮ ಕಾದಂಬರಿಯನ್ನು ನಮ್ಮ ಜನತೆ ಓದಿ, ತಣಿಯುವರೆಂಬ ಆಸೆ ನಮಗಿದೆ.

ಈ ಕೃತಿಯನ್ನು ಕನ್ನಡಕ್ಕೆ ಭಾಷಾಂತರ ಮಾಡಿಕೊಟ್ಟವರು ನಮ್ಮ ಆತ್ಮ ಗೆಳೆಯ–ಬಾಂಧವ ಶ್ರೀ 'ಬಾಲು.' 'ಭಾಷಾಂತರಕಾರರು ಕೊಲೆಗಾರರು' ಎಂಬ ಸಾಹಿತ್ಯಲೋಕದ ನಾಣ್ಣುಡಿಗೆ ವ್ಯತಿರಿಕ್ತವಾಗಿ ಹೇಳುವಂತೆ, ಸುಂದರ–ಸರಳವಾದ ಭಾಷೆಯಲ್ಲಿ ಭಾಷಾಂತರಿಸಿ ಕೊಟ್ಟಿದ್ದಾರೆ–ಈ ಅಮರ ಕಲಾಕೃತಿಯನ್ನು. ಮೂಲ ಲೇಖಕನ ಕೃತಿಯ ಹಿರಿಮೆ–ಸೌಂದರ್ಯಗಳನ್ನು ಆದಷ್ಟೂ ಪ್ರಾಮಾಣಿಕವಾಗಿ–ಸಹಜವಾಗಿ ಭಾಷಾಂತರಿಸಿ ಈ ಕೃತಿಗೆ ಕನ್ನಡ ಜನತೆಯ ಗೌರವ ಇಮ್ಮಡಿಸುವಂತೆ ಮಾಡಿದ್ದಾರೆ. ನಮ್ಮ ತೊಂದರೆಗಳನ್ನೆಲ್ಲಾ ಮನ್ನಿಸಿ ಈ ಅದ್ಭುತ ಕಲಾಕೃತಿಯನ್ನು ಭಾಷಾಂತರಿಸಿ

ಕೊಟ್ಟ ಗೆ. ಬಾಲುವಿಗೆ ಕೃತಜ್ಞತೆಯನ್ನರ್ಪಿಸಲು ಅಸಾಧ್ಯವೆಂದೇ ನಮ್ಮ ಭಾವನೆ.

ಎಷ್ಟೇ ತಡಮಾಡಿದರೂ ತಾಳ್ಮೆಗೆಡದೆ ತಾವು ಕೊಟ್ಟ ಸಹಾಯ ಮತ್ತು ಪ್ರೋತ್ಸಾಹಗಳನ್ನೂ ನೂರ್ಮಡಿಸಿ ಉತ್ತೇಜನವಿತ್ತು ಈ ಕೃತಿ ಕನ್ನಡದಲ್ಲಿ ಅರಳುವಂತೆ ಮಾಡಿದ ಗೌರವ ಮದರಾಸಿನ U.S.I.S. ರವರಿಗೆ ಸಲ್ಲಬೇಕು. ಅವರಿಗೂ ಅಷ್ಟೆ–ನಾವು ಕೃತಜ್ಞತೆಯನ್ನರ್ಪಿಸಲು ಅಸಾಧ್ಯ.

'ತಾವು ಮಾಡಿದ ಕೆಲಸಕ್ಕೆ ಬೆಲೆ ಕಟ್ಟಿ ಮಾಡುವ ಕಲೆಗಾರರು, ಬ್ಲಾಕ್ ಮೇಕರ್ ಮತ್ತು ಪ್ರಿಂಟರುಗಳಿಗೆ ಧನ್ಯವಾದಗಳನ್ನೇಕೆ ಅರ್ಪಿಸಬೇಕೆಂಬ' ಮಾತು ಕೇಳಿಬರುತ್ತಿದೆ. ತಮ್ಮ ಕೆಲಸಕ್ಕೆ ಬೆಲೆ ಕಟ್ಟಬಹುದು. ಆದರೆ ಅದನ್ನು ಶ್ರದ್ಧೆಯಿಟ್ಟು, ಕೆಡದಂತೆ, ಸುಂದರವಾಗಿ ಮಾಡಿಕೊಡುವುದು ಕಷ್ಟ. ಹಾಗೆ ಅಚ್ಚುಕಟ್ಟಾಗಿ ನಮ್ಮ ಮನವೊಪ್ಪುವಂತೆ ಕೆಲಸ ಮಾಡಿಕೊಟ್ಟ ಶ್ರೀ 'ಮೂರ್ತಿ,' ಧಾರವಾಡ, ಮೆಸರ್ಸ್ ಪ್ರಸಾದ್ ಪ್ರೋಸೆಸ್ ಸ್ಟುಡಿಯೋ, ಮದರಾಸು ಮತ್ತು ಶ್ರೀ ಸೀತಾರಾಘವ ಮುದ್ರಣಾಲಯದ ಕೆಲಸಗಾರರು–ಇವರುಗಳಿಗೆ ನಮ್ಮ ನೆನಕೆಗಳು.

—**ಪ್ರಕಾಶಕರು.**

# ಕೆಂಪು ಅಕ್ಷರ

೧

ಹದಿನೈದು ಇಪ್ಪತ್ತು ವರ್ಷಗಳು ಒಂದೇ ಸಮನೆ ಗಾಳಿ-ಬಿಸಿಲು ಗಳಿಗೆ ತೆರೆದಿದ್ದ ಆ ಮರದ ಬಂದೀಖಾನೆ ಬಹಳ ಹಳೆಯದರಂತೆ ಕಾಣಿಸು ತ್ತಿತ್ತು. ಆ ದೊಡ್ಡ ದೊಡ್ಡ ಬಾಗಿಲುಗಳಲ್ಲಿ ಕಂಡುಬರುತ್ತಿದ್ದ ತುಕ್ಕು ಹಿಡಿದ ಭಾರೀ ಕಬ್ಬಿಣದ ಮೊಳೆಗಳು, ಆ ಬಂಧೀಖಾನೆ, ಒಂದಾನೊಂದು ಕಾಲದಲ್ಲಿ ಹೊಸದಾಗಿತ್ತೆಂಬ ಭಾವನೆಯನ್ನೂ ಉಂಟುಮಾಡುತ್ತಿರಲಿಲ್ಲ. ಅಸಹ್ಯವಾಗಿ ಕಾಣುತ್ತಿರುವ ಈ ಬಂಧೀಖಾನೆಗೂ ರಸ್ತೆಗೂ ಮಧ್ಯೆ ಕುರೂ ಪವಾದ ಕಾಡು ಗಿಡಗಳು, ನಾಗರೀಕತೆಗೆ ಕಳಂಕ ಪ್ರಾಯವಾದ ಜೈಲಿ ನಂತೆಯೇ, ಅಧಿಕವಾಗಿ ಬೆಳೆದು ನಿಂತಿದ್ದುವು. ಅಷ್ಟಾದರೂ ಬಾಗಿಲಿನ ಬಳಿಯೇ, ಹೊಸಲಿಗೆ ಹೊಂದಿಕೊಂಡಂತೆಯೇ ಬೆಳೆದಿದ್ದ ಗುಲಾಬಿಯ ಗಿಡ ತನ್ನ ಅನೇಕ ಮುತ್ತುಗಳಂತಹ ಗುಲಾಬಿ ಹೂಗಳೊಡನೆ ತನ್ನ ಜೀವ ಮಾನವನ್ನೇ ಬಂದೀಖಾನೆಯಲ್ಲಿ ಕಳೆಯಲು ಬಂದಿರುವ ಮತ್ತು ಬರುವ ಖೈದಿಗಳಿಗೆ ತನ್ನ ಸುಗಂಧವನ್ನು ಬೀರಿ, ಪ್ರಕೃತಿ ಮಾತ್ರ ಅವನಲ್ಲಿ ಕನಿಕರ ವುಳ್ಳದ್ದಾಗಿಯೇ ಇದೆಯೆಂಬುದನ್ನು ಸೂಚಿಸುತ್ತಿತ್ತು; ಮತ್ತು ಪ್ರಕೃತಿಯ ಪ್ರೀತಿಗೆ ಭೇದವಿಲ್ಲವೆಂಬಂತೆ ತಾನೂ ಆ ಖೈದಿಗಳಿಗೆ ಸಂತೋಷವನ್ನುಂಟು ಮಾಡುವಂತಿತ್ತು.

ಈ ಗುಲಾಬಿಯಪೊದೆ, ಆ ಜಾಗದಲ್ಲೆಲ್ಲಾ ಹರಡಿಕೊಂಡು ಮಿಕ್ಕ ಗಿಡ ಗಳಂತೆಯೇ ಹಾಳಾಗದೇ, ಇಷ್ಟೊಂದು ದಿನ ಹೀಗೆ ಬದುಕಿದ್ದು ಇನ್ನೂ ಹೂಬಿಡುತ್ತಿದೆಯೆಂಬುದು ಮಾತ್ರ ಇನ್ನೂ ಆಶ್ಚರ್ಯಕರವಾದ ಸಂಗತಿ. ತಿಳಿದವರು ಹೇಳುವಂತೆ ಆ ಗಿಡ ಆನಾ ಹರ್ಚಿಸನ್‌ಳು ಇದೇ ಬಂದೀಖಾನೆಯ ಬಾಗಿಲುಗಳನ್ನು ಹೊಕ್ಕಾಗ ಅವಳ ಕಾಲು ಧೂಳಿನ ಪ್ರಭಾವದಿಂದ ಇಷ್ಟೊಂದು ದಿನ ಬದುಕಿದೆಯೋ, ಇಲ್ಲವೆ ಇನ್ನಾವ ಕಾರಣದಿಂದಲಾದರೂ ಬದುಕಿದೆಯೋ—ಇದರ ಬಗ್ಗೆ ಜಿಜ್ಞಾಸೆ ಮಾಡುವುದು ಬೇಡ. ಆದರೆ ಈ ಕಥೆ ಆರಂಭವಾಗುವ ಸ್ಥಳದ ಈ ಕತ್ತಲು ಮನೆಯ ಹೊಸಲಿನಮೇಲೇ ಬೆಳೆದು ನಿತಂತಿರುವ ಈ ಗುಲಾಬಿ ಪೊದೆಯಿಂದ ಒಂದೇ ಒಂದು ಹೂವನ್ನು ಕಿತ್ತು ಓದುಗರಿಗೆ ಕೊಡೋಣ. ಆ ಹೂ,—ಆ ಹೂ ಆ ಓದುಗನ ಜೀವ ನದ ಅರಳುವಿಕೆಯ ಹೆಗ್ಗುರುತಾಗಿರಬಹುದು; ಇಲ್ಲವೆ ಅವನ ದುಃಖ ಪೂರಿತ ಕತ್ತಲ ಕಥೆಯ ಅಂತಿಮ ತೆರೆಯಾಗಿರಬಹುದು. ಯಾರಿಗೆಗೊತ್ತು?

ಎರಡು ಶತಮಾನಗಳ ಹಿಂದೆ, ಒಂದು ಬೇಸಿಗೆಯ ಬೆಳಿಗ್ಗೆ, ಇದೇ ಸೆರಮನೆಯ ಮುಂದೆ ಬಾಸ್ಟನ್ನಿನ ನಿವಾಸಿಗಳ ಒಂದು ದೊಡ್ಡ ಗುಂಪೇ ಸೇರಿತ್ತು. ಪ್ರತಿಯೊಬ್ಬರ ದೃಷ್ಟಿಯೂ ಆ ಕಬ್ಬಿಣದ ಚಿಲಕ ಹಾಕಿದ್ದ ಸೆರಮನೆಯ ತೇಗದ ಬಾಗಿಲಿನ ಮೇಲೆಯೇ ನೆಟ್ಟಿತ್ತು. ಈಗಿನವರಾರಾದರೂ ಆ ಜನರ ಗಂಭೀರ ಮುಖಭಾವವನ್ನು ನೋಡಿದ್ದರೆ ಯಾವುದೋ ಒಂದು ಘೋರವಾದ ವಿಷಯ ಅವರ ಮುಂದಿದೆಯೋ ಎಂದಂದುಕೊಳ್ಳುವಂತ್ತಿತ್ತು. ಯಾವುದಾದರೂ ಒಬ್ಬ ಪ್ರಖ್ಯಾತ ಅಪರಾಧಿಗೆ ನ್ಯಾಯಾಸ್ಥಾನದವರು, ಜನತೆಯ ಇಚ್ಛೆಗನುಸಾರವಾಗಿಯೇ ಮರಣದಂಡನೆ ವಿಧಿಸುವುದನ್ನು ನೋಡಲು ಬಂದಂತಿತ್ತು—ಅಲ್ಲಿ ನೆರೆದಿರುವ ಜನತೆಯ ಮುಖಭಾವ. ಆದರೆ ಆ ಪುರಾತನ ಕಟ್ಟುನಿಟ್ಟಾದ ಧರ್ಮಶುದ್ಧಿಯಿಂದಿದ್ದ ಕಾಲದಲ್ಲಿ ಈ ರೀತಿಯ ತೀರ್ಮಾನಕ್ಕೆ ಅಷ್ಟು ನಿಸ್ಸಂದೇಹವಾಗಿ ಬರುವುದು ಸಾಧ್ಯವಿದ್ದಿಲ್ಲ. ಸೋಮಾರಿಯಾದ ಗುಲಾಮನೊಬ್ಬನನ್ನು ಕಟ್ಟಿಹಾಕಿ ಛಡಿಯಿಂದ ಹೊಡೆದು ದಾರಿಗೆ ತರುವುದಕ್ಕಾಗಲೀ ಇಲ್ಲವೇ ಅವಿಧೇಯ ಮಗುವನ್ನು ಶಿಕ್ಷಿಸುವ ಸಲುವಾಗಿಯಾಗಲೀ ಸೇರಿದ್ದಿರಬಹುದು. ಇಲ್ಲವೆ ಯಾವನಾದರೂ ಒಬ್ಬ ಭಾವವಿರೋಧಿಯನ್ನಾಗಲೀ, ಸಂಪ್ರದಾಯ ವಿರುದ್ಧಿಯನ್ನಾಗಲೀ, ಊರಿನ ಹೊರಗೆ ಅಟ್ಟುವುದಕ್ಕಾಗಿ ನೆರೆದಿದ್ದಿರಬಹುದು. ಅಥವಾ ಅಲ್ಲಿನ ನ್ಯಾಯಾಧಿಪತಿಯ ವಿಧವೆ ತಹಿಸ್ವಭಾವದ ಮುದುಕಿ ಮಾಟಗಾರ್ತಿ ಹಿಬ್ಬಿನ್ಸ್‌ಳನ್ನು ಗಲ್ಲಿಗೇರಿಸುವುದನ್ನು ನೋಡುದವುಕ್ಕಾದರೂ ಇರಬಹುದು. ಹೇಗೇ ಆಗಲಿ ತಮ್ಮ ಮತಕ್ಕೂ ಮತ್ತು ಕಾನೂನಿಗೂ ಹೆಚ್ಚು ವ್ಯತ್ಯಾಸವನ್ನು ಕಂಡರಿಯದ ಆ ಜನರ ಮುಖ ಭಾವವು ಬಹಳ ಗಂಭೀರವಾಗಿತ್ತು. ಆ ಗಲ್ಲಿನ ಅಟ್ಟದ ಬಳಿ ನೆರೆದ ಜನರಿಂದ ಸಹಾನುಭೂತಿಯನ್ನು ಯಾವ ಅತಿಕ್ರಮಿಯೂ ನಿರೀಕ್ಷಿರುವಂತಿರಲಿಲ್ಲ. ಅದಕ್ಕೆ ಬದಲಾಗಿ ಈಗಿನ ಕಾಲದಲ್ಲಿ ಯಾವ ಅಪರಾಧವನ್ನು ಅವಮಾನ ಮತ್ತು ಅವಹೇಳನಗಳಿಂದ ಶಿಕ್ಷಿಸಬಹುದೋ ಆ ಕಾಲದಲ್ಲಿ ಅದೇ ಅಪರಾಧಕ್ಕೆ ಸಾವಿಗೆ ಸಮನಾದ ಶಿಕ್ಷೆ ವಿಧಿಸಲ್ಪಡುತ್ತಿತ್ತು.

ಅಲ್ಲಿ ಸೇರಿದ್ದ ಜನಸಂದಣಿಯಲ್ಲಿದ್ದ ಅನೇಕ ಮಂದಿ ಹೆಂಗಸರು ಅಂದು ವಿಧಿಸಲಿದ್ದ ಯಾವುದೇ ತರದ ದಂಡನೆಯಲ್ಲಿ ಒಂದು ರೀತಿಯ ವಿಶೇಷ ಆಸಕ್ತಿಯನ್ನು ವ್ಯಕ್ತಪಡಿಸುತ್ತಿದ್ದರು. ಅಂದಿನ ಕಾಲ ಇಂದಿನಷ್ಟು ನಾಜೂಕಾಗಿರಲಿಲ್ಲ. ರಸ್ತೆಯಲ್ಲಿ ಓಡಾಡುವುದೂ, ವಧ್ಯಸ್ಥಾನ

ದಲ್ಲಿ ಜನಸಂದಣಿ ಇದ್ದರೆ ಅದರ ಮಧ್ಯೆ ತಮ್ಮ ಸ್ಥೂಲ ಕಾಯವನ್ನು ತಳ್ಳಿಕೊಂಡು ವಧ್ಯವೇದಿಕೆಯವರೆಗೂ ನುಗ್ಗುವುದೂ ಸಾಮಾನ್ಯವಾಗಿತ್ತು. ಆ ಕಾಲದ ಹೆಂಗಸರು ಈಗಿನವರಂತೆ ನೈತಿಕವಾಗಿಯಾಗಲೀ, ಭೌತಿಕವಾಗಿಯಾಗಲೀ ಸುಸಂಸ್ಕೃತರಾಗಿರಲಿಲ್ಲ. ಏಕೆಂದರೆ ಈ ಆರೇಳು ತಲೆಮಾರುಗಳಲ್ಲಿ ಸ್ತ್ರೀಯರು ಅಂದಿನವರಷ್ಟೇ ವೈಶಿಷ್ಟ್ಯ ಮತ್ತು ಘನತೆಗಳನ್ನು ಹೊಂದಿಲ್ಲದಿದ್ದರೂ ಅಂದವಾದ ಬಣ್ಣ, ಕೋಮಲವಾದ, ಆಹ್ಲಾದಕರವಾದ ಸೌಂದರ್ಯ ಮತ್ತು ಕೃಶಕಾಯವನ್ನು ಪಡೆದಿದ್ದರು. ಆ ಸೆರೆಮನೆಯ ಮುಂದಿದ್ದ ಹೆಂಗಸರು ಮುಂದಿನ ಐವತ್ತು ವರ್ಷಗಳಲ್ಲಿ ಆಳಿದ ಸ್ತ್ರೀ ಜಾತಿಯ ಪ್ರತಿನಿಧಿ ಎಲಿಜಬತ್‌ಳಂತೆಯೇ ಗಂಡುಭೀರಿಗಳಾಗಿದ್ದರು. ಅವರು ಆಕೆಯ ದೇಶಕ್ಕೆ ಸೇರಿದವರು. ಅವರ ತಾಯಿನಾಡಿನ ಆಹಾರ ಪಾನೀಯಗಳ ಶಕ್ತಿ ಅವರ ಅಂಗಾಗಗಳಲ್ಲಿ ಕಂಡುಬರುತಿತ್ತು. ದೂರದ ದ್ವೀಪದಲ್ಲಿ ಪರಿಪಕ್ವವಾದ ಅವರ ಮಿರುಗೆಂಪಿನ ತುಂಬುಗೆನ್ನೆಗಳ ಮತ್ತು ಪುಷ್ಟವಾಗಿ ಬೆಳೆದಿದ್ದ ಎದೆಗಳ ಮೇಲೆ ಎಳೆಬಿಸಿಲು ಬೆಳಗುತ್ತಿತ್ತು. ಆ ಹೆಂಗಸರ ಛಾತಿ, ಮಧುರವಾದ ಮಾತುಗಾರಿಕೆ–ಉದ್ದೇಶದಲ್ಲಾಗಲೀ, ಧನಿಯ ಘನತೆಯಲ್ಲಾಗಲೀ– ಇಂದಿನವರನ್ನು ಚಕಿತಗೊಳಿಸುವಂತಿತ್ತು.

'ಗೃಹಿಣಿಯರೇ, ನನ್ನ ಮನಸ್ಸಿನಲ್ಲಿರುವುದನ್ನು ಸ್ವಲ್ಪ ಹೇಳುತ್ತೇನೆ. ಈ ಹೆಸ್ಟರ್ ಪ್ರೈನ್‌ಳಂಥಾ ದುಷ್ಕರ್ಮಿಗಳನ್ನು, ಚರ್ಚಿನ ಸೇವಕರೂ, ಗಣ್ಯರೂ ಆದ ನಮ್ಮಂತಹ ಸ್ತ್ರೀಯರು ವಿಚಾರಣೆ ಮಾಡಿದರೆ ಸಾರ್ವಜನಿಕರಿಗೆ ಪ್ರಯೋಜನವಾಗುತ್ತದೆ. ಗೆಳತಿಯರೇ ಏನು ಹೇಳುವಿರಿ? ಈ ಮಾನಗೆಟ್ಟವಳು ಇಲ್ಲಿರುವ ನಮ್ಮೈವರ ಮುಂದೆ ವಿಚಾರಣೆಗೆ ಬಂದಿದ್ದರೆ ಪೂಜ್ಯರಾದ ನ್ಯಾಯಾಧೀಶರ ಈ ಅಲ್ಪ ಶಿಕ್ಷೆಗೆ ಒಳಪಡುತ್ತಿದ್ದಳೇ? ಸರಿ ಸರಿ, ನಾನು ಬೇರೆ ಕಾಣೆ' ಎಂದಳು ಸುಮಾರು ಐವತ್ತು ವರ್ಷದ ವಿಕಾರಳಾದ ಒಬ್ಬ ಹೆಂಗಸು.

'ಧರ್ಮಾಧಿಕಾರಿಗಳಾದ ರೆವರೆಂಡ್ ಡಿಮ್ಸ್‌ಡೇಲ್‌ರವರು ತಮ್ಮ ಶಿಷ್ಯ ತಂಡಕ್ಕೆ ಬಂದ ಈ ಕಳಂಕದಿಂದ ಬಹಳನೊಂದುಕೊಂಡಿದ್ದಾರೆ ಎಂದು ಜನರು ಅನ್ನುತ್ತಾರೆ' ಎಂದಳು ಮತ್ತೊಬ್ಬಾಕೆ.

'ನ್ಯಾಯಾಧಿಪತಿಗಳು ದೈವ ಭೀತಿಯುಳ್ಳವರೆಂಬುದು ನಿಜ. ಅವರಲ್ಲಿ ಕಡೆಯ ಪಕ್ಷ ಹೆಸ್ಟರ್ ಪ್ರೈನ್‌ಳ ಹಣೆಯ ಮೇಲೆ ಕಬ್ಬಿಣ ಕಾಯಿಸಿ ಬರೆಯನ್ನಾದರೂ ಇಡಬೇಕಾಗಿತ್ತು. ಆಗ ಹೆಸ್ಟರ್ ನಿಜವಾಗಿಯೂ ಬೆದರುತ್ತಿದ್ದಳೆಂಬುದು ಖಂಡಿತ. ಅವಳ ಕುಪ್ಪಸದ ಮೇಲೆ ಏನು ಹಾಕಿದರೂ

ಆ ನೀತಿಗೆಟ್ಟವಳಿಗೆ ಅದೊಂದು ಲಕ್ಷ್ಯವಿಲ್ಲ. ನೀವೇ ನೋಡಿ, ಏನಾದರೂ ಒಂದು ಹೊಸ ಒಡವೆಯಿಂದ ಅದನ್ನು ಮುಚ್ಚಿಕೊಂಡು ಎಂದಿನಂತೆ ಧೈರ್ಯವಾಗಿ ಬೀದಿ ಬೀದಿ ಅಲೆಯುತ್ತಾಳೆ' ಎಂದಳು ಮೂರನೆಯ ಮುದುಕಿಯೊಬ್ಬಳು.

'ಒಂದುವೇಳೆ ಅವಳು ಆ ಮುದ್ರೆಯನ್ನು ಮುಚ್ಚಿಕೊಂಡರೂ ತನ್ನ ಹೃದಯದಲ್ಲಿ ಅವಳು ಅದರ ಯಾತನೆಯನ್ನನುಭವಿಸುತ್ತಿದ್ದಾಳೆ' ಎಂದಳು, ಮಗುವನ್ನು ಹಿಡಿದುಕೊಂಡಿದ್ದ ಕಿರಿಯ ವಯಸ್ಸಿನಾಕೆ.

ಆ ಸ್ವಯಂನಿಯೋಜಿತ ತೀರ್ಪುಗಾರ್ತಿಯರಲ್ಲಿ ಅತ್ಯಂತ ಕುರೂಪಿಯೂ, ಕ್ರೂರಿಯೂ ಆದ ಮತ್ತೊಬ್ಬಳು, 'ಅವಳ ಕುಪ್ಪಸದ ಮೇಲೋ, ಹಣೆಯ ಮೇಲೋ ಇರುವ ಮುದ್ರೆಗಳನ್ನೋ ಬರೆಗಳನ್ನೋ ಕಟ್ಟಿಕೊಂಡು ನಮಗೇನಾಗಬೇಕು? ಅವಳು ಹೆಣ್ಣುಜಾತಿಗೇ ಕಳಂಕ ತಂದಿದ್ದಾಳೆ. ಆದ್ದರಿಂದ ಅವಳು ಸಾಯಬೇಕು. ಅದಕ್ಕೇನು ಕಾನೂನಿಲ್ಲದೆ ಇಲ್ಲ; ಕ್ರೈಸ್ತವೇದದಲ್ಲೂ, ಧರ್ಮಶಾಸನ ಗ್ರಂಥದಲ್ಲಿಯೂ ಇದೆ. ಅದನ್ನು ಜಾರಿಗೆ ತರದೆ ಇರುವ ಈ ನ್ಯಾಯಾಧಿಪತಿಗಳ ಹೆಂಡಿರು ಮಕ್ಕಳು ನಾಳೆ ದಾರಿ ತಪ್ಪಿದರೆ ಆಗ ಅವರು ಬೆನ್ನುತಟ್ಟಿಕೊಳ್ಳಲಿ!' ಎಂದು ಒದರಿದಳು.

'ಚೆನ್ನಾಗಿ ಹೇಳಿದೆ ತಾಯಿ! ಪಾಶಿಕಂಬದ ಭಯವೊಂದಿಲ್ಲದಿದ್ದರೆ, ಹೆಣ್ಣಿನಲ್ಲಿ ಪಾತಿವ್ರತ್ಯವೇ ಇಲ್ಲವೇ? ಹುಶ್, ಸುಮ್ಮನಿರಿ ಈಗ. ಬಂಧೀಖಾನೆಯ ಬಾಗಿಲು ತೆಗೆಯುತ್ತಿದ್ದಾರೆ. ಆದೊ, ಹೆಸ್ಟರ್ ಪ್ರೈನ್‌ಳೇ ಈಚಗೇ ಬರುತ್ತಿದ್ದಾಳೆ' ಎಂದ ಗುಂಪಿನಲ್ಲಿದ್ದ ಒಬ್ಬಾತ.

ಸೆರೆಮನೆಯ ಬಾಗಿಲು ಹಾರುಹೊಡೆದ ತಕ್ಷಣ, ಖಡ್ಗಧರಿಸಿ, ಕೈಯಲ್ಲಿ ಅಧಿಕಾರದಂಡವನ್ನು ಹಿಡಿದ ಉಛಿವೋರೆಯ ಜವಾನನೊಬ್ಬನು ಮೊದಲು ಹೊರ ಹೊರಟ. ಅಪರಾಧಿಗೆ ಸುಧಾರಕರ ಕಾಯಿದೆ ವಿಧಿಸಿದ ಶಿಕ್ಷೆಯನ್ನು ಚಾಚೂತಪ್ಪದಂತೆ ನಿರ್ವಹಿಸುವುದು ಅವನ ಕರ್ತವ್ಯ. ಆ ಶಿಕ್ಷೆಯ ಭೀಕರ ವಿಷಣ್ಣತೆಯೇ ಮೂರ್ತಿವೆತ್ತಂತಿದ್ದ ಅವನು. ಎಡಗೈಯ್ಯಿಂದ ತನ್ನ ಅಧಿಕಾರ ದಂಡವನ್ನು ಚಾಚಿ, ಬಲಗೈಯ್ಯಿಂದ ಒಬ್ಬ ತರುಣಿಯನ್ನು ಸೆರೆಮನೆಯ ಬಾಗಿಲವರೆಗೆ ತಳ್ಳಿಕೊಂಡು ಬಂದ. ಬಾಗಿಲ ಬಳಿ ಆಕೆ ತನ್ನ ಸ್ವಭಾವ ಸಹಜವಾದ ಗಾಂಭೀರ್ಯದಿಂದ ಅವನನ್ನು ಹಿಮ್ಮೆಟ್ಟಿ, ತಾನೇ ಹೊರಗಿನ ಆವರಣಕ್ಕೆ ಬಂದಳು. ಅವಳ ತೋಳತಕ್ಕೆಯಲ್ಲಿ ಪುಟ್ಟ ಮಗುವೊಂದಿತ್ತು. ಅದಕ್ಕಿನ್ನೂ ಮೂರು ತಿಂಗಳು. ಇಷ್ಟರವರೆಗೆ ಸೆರೆಮನೆಯ ಕತ್ತಲೆಯ ಗವಿಯ ನಸುಬೆಳಕನ್ನೇ ಕಂಡಿದ್ದ ಆ ಮಗು

ಹೊರಗಿನ ಈ ಬೆಳಕಿನ ಪ್ರಕಾಶವನ್ನು ತಡೆಯಲಾರದೆ ಕಣ್ಣುಮುಚ್ಚಿ ತನ್ನ ಪುಟ್ಟ ಮುಖವನ್ನು ಪಕ್ಕಕ್ಕೆ ಹೊರಳಿಸಿತು.

ಆ ಜನಸಂದಣಿಯನ್ನು ಕಂಡ ತಕ್ಷಣ ಮೊದಲು ತನ್ನ ಮಗುವನ್ನು ಎದೆಗೆ ಅಪ್ಪಿಕೊಳ್ಳಬೇಕೆನ್ನಿಸಿತು ಆಕೆಗೆ. ವಾತ್ಸಲ್ಯಕ್ಕಿಂತ ಹೆಚ್ಚಾಗಿ ತನ್ನ ಕುಪ್ಪಸಕ್ಕೆ ಹೊಲಿದಿದ್ದ ಗುರುತನ್ನು ಮುಚ್ಚಿಕೊಳ್ಳುವುದು ಅವಳ ಉದ್ದೇಶ ವಾಗಿತ್ತು. ಆದರೆ ತನ್ನ ಒಂದು ಅಪಮಾನದ ಕುರುಹಿನಿಂದ ಮತ್ತೊಂದನ್ನು ಮುಚ್ಚಿಕೊಂಡರೆ ಏನೂ ಪ್ರಯೋಜನವಿಲ್ಲವೆಂದು ಒಂದು ಕ್ಷಣದಲ್ಲಿ ಆಕೆಗೆ ಅರಿವಾಯಿತು. ಮಗುವನ್ನು ಸರಿಯಾಗಿ ಎತ್ತಿಕೊಂಡು ಮುಖ ಕೆಂಪೇರಿದ್ದರೂ, ಮುಖ ತಗ್ಗಿಸದೆ, ಬಿಗುಮಾನದ ನಗುವನ್ನು ಬೀರುತ್ತಾ, ತನ್ನ ಸುತ್ತ ನೆರೆದಿದ್ದವರ ಕಡೆ ಕಣ್ಣು ಹೊರಳಿಸಿ ನೋಡಿದಳು. ನಯವಾದ ಕೆಂಪು ಬಟ್ಟೆಯ ಮೇಲೆ, ಅತ್ಯುತ್ತಮವಾಗಿ ಕಸೂತಿ ಕೆಲಸದ, 'A' ಎಂಬ ಅಕ್ಷರ ಆಕೆಯ ಕುಪ್ಪಸದ ಮೇಲೆ ಕಾಣುತ್ತಿತ್ತು. ಸಮೃದ್ಧಿ ಯಾದ ಕಲ್ಪನೆ ಮತ್ತು ಕುಶಲತೆಯಿಂದ ಕಸೂತಿ ಮಾಡಿದ ಆ ಅಕ್ಷರ ಅಚ್ಚರಿಗೊಳಿಸುತ್ತಿತ್ತು. ಅದು ಆಕೆ ತೊಟ್ಟಿದ್ದ ಬಟ್ಟೆಗೆ ತಕ್ಕ ಅಲಂಕಾರ ದಂತಿತ್ತು. ಅಲ್ಲದೆ ಆ ಕಾಲದ ಅಭಿರುಚಿಗೆ ತಕ್ಕಂತೆ ವೈಭವಪೂರ್ಣವಾಗಿ ದ್ದರೂ, ಆ ನಾಡಿನ ವ್ಯಯನಿಯಂತ್ರಣ ಶಾಸನವು ನಿಯೋಜಿಸಿದ ಬೆಲೆ ಯನ್ನು ಮೀರಿತ್ತು.

ಎತ್ತರವಾಗಿದ್ದ ಆ ತರುಣಿಯ ಮನಮೋಹಕ ರೂಪವು ಎಲ್ಲ ವಿಧ ದಲ್ಲೂ ಪರಿಪೂರ್ಣವಾಗಿತ್ತು. ಬಿಸಿಲಿಗೆ ಮಿರುಗುತ್ತಿದ್ದ ಯಥೇಷ್ಟವಾದ ಕೂದಲು, ಸ್ವಚ್ಛವಾದ ಬಣ್ಣ, ವಿಶಾಲವಾದ ಕಣ್ಣುಗಳು, ಎದ್ದು ಕಾಣುವ ಹಣೆ, ಇವು ಮನಮುಟ್ಟುವಂತಿದ್ದವು. ಅಷ್ಟೇ ಅಲ್ಲ, ವರ್ಣಿಸಲಸದಳ ವಾದ, ಅವಳ ಲಲಿತವಾದ ರಮ್ಯತೆಗಿಂತ ಹೆಚ್ಚಾಗಿ ಅವಳ ಗಾಂಭೀರ್ಯ ದಿಂದ ದೊಡ್ಡ ಮನುಷ್ಯರ ಮನೆ ಹೆಂಗಸಿನಂತೆ ಕಾಣುತ್ತಿದ್ದಳು. ಹೆಸ್ಟರ್ ಪ್ರೈನ್ ಸೆರೆಮನೆಯಿಂದ ಹೊರಕ್ಕೆ ಬರುವಾಗ ಕಂಡುಬಂದಷ್ಟು ದೊಡ್ಡ ಸ್ಥಿಗೆ ಮತ್ಯಾವಾಗಲೂ ಕಂಡುಬಂದಿರಲಿಲ್ಲ. ತನಗೊದಗಿದ ಆಪತ್ತಿನ ಚಿಂತೆಯಿಂದ ಮಂಕಾಗಿ ಹೊರಬರುವಳೆಂದು ಭಾವಿಸಿದ್ದ ಅವಳ ಪರಿಚಯ ಸ್ಥರೆಲ್ಲರಿಗೂ, ಕಳಂಕ ಮತ್ತು ದೌರ್ಭಾಗ್ಯಗಳಿಂದ ಮುಚ್ಚಿಕೊಂಡಿದ್ದರೂ, ಅವಳ ರೂಪವು ಬೆಳಗುತ್ತಿರುವುದನ್ನು ಕಂಡು ಅಚ್ಚರಿಯಾಯಿತು. ಆದರೆ ಸೂಕ್ಷ್ಮವಾಗಿ ನೋಡುವವರಿಗೆ ಅದರಲ್ಲಡಗಿದ್ದ ತೀವ್ರವಾದ ಯಾತನೆ ವ್ಯಕ್ತ ವಾಗುತ್ತಿತ್ತು. ಇದೇ ಸಂದರ್ಭಕ್ಕಾಗಿ ಹೊಲಿದುಕೊಂಡ ಆಕೆಯ ಉಡಿಗೆ

ತೊಡಿಗೆಗಳು, ಕಣ್ಣಿಗೆ ಕಟ್ಟುವಂಥ ವಿಲಕ್ಷಣತೆಯಿಂದ ಕೂಡಿ, ಆಕೆಯ ಅಂತರ್ಯದ ನಿರಾಶೆಯ ಹುಚ್ಚು ಧೈರ್ಯವನ್ನು ಸೂಚಿಸುತ್ತಿತ್ತು. ಎಲ್ಲರ ಕಣ್ಣುಗಳನ್ನೂ ಸೆಳೆದದ್ದು ಅವಳ ಎದೆಯಮೇಲೆ ಬೆಳಗುತ್ತಿದ್ದ ಕೆಂಪು ಅಕ್ಷರ. ಅದರಿಂದಾಗಿ ಪರಿಚಯಸ್ಥರಿಗೂ ಕೂಡ ಹೆಸ್ಟರ್ ಪ್ರೈನ್‌ಳನ್ನು ಮೊದಲನೆಯ ಬಾರಿಗೆ ನೋಡುತ್ತಿರುವವರಂತೆ ಭಾಸವಾಗುತ್ತಿತ್ತು. ಅದು ಎಲ್ಲರನ್ನೂ ಮಂತ್ರಮುಗ್ಧರನ್ನಾಗಿ ಮಾಡಿ, ಅವಳು ಮಾನವ ಕುಲಕ್ಕೇ ಸೇರಿದವಳಲ್ಲವೆಂಬ ಭಾವನೆಯನ್ನುಂಟುಮಾಡಿತ್ತು.

'ಕಸೂತಿ ಕೆಲಸದಲ್ಲಿ ಬಹಳ ನಿಪುಣಳೆಂದು ಕಾಣುತ್ತದೆ. ಆದರೆ ಅದನ್ನು ತೋರಿಸಿಕೊಳ್ಳುವುದಕ್ಕೆ ಇಂತಹ ಮಾರ್ಗವನ್ನು ಯಾವ ಹೆಂಗಸು ಅನುಸರಿಸಿಯಾಳು! ನಮ್ಮ ನ್ಯಾಯಾಧಿಪತಿಗಳನ್ನು ನೋಡಿ ನಗಬೇಕೋ ಬೇಡವೋ, ಆ ಗಣ್ಯ ಮನುಷ್ಯರು ವಿಧಿಸಿದ ಶಿಕ್ಷೆಯನ್ನು ಕಂಡು ಹೆಮ್ಮೆ ಪಟ್ಟುಕೊಳ್ಳಬೇಕು ಅಷ್ಟೆ' ಎಂದಳು ಒಬ್ಬಾಕೆ.

ಅವರೆಲ್ಲರಿಗಿಂತ ಗಡಸು ಮುಖದ ಮುದುಕಿಯೊಬ್ಬಳು 'ಅವಳ ಬೆಲೆ ಬಾಳುವ ಬಟ್ಟೆ ಕಿತ್ತೆಸೆದು ಬೆತ್ತಲೆ ನಿಲ್ಲಿಸಬೇಕಾಗಿತ್ತು. ಆದರೆ ಅವಳು ಅಷ್ಟು ಚೆನ್ನಾಗಿ ಹೊಲಿದುಕೊಂಡಿರುವ ಕೆಂಪು ಅಕ್ಷರಕ್ಕೆ ಅದರ ಯೋಗ್ಯತೆಗೆ ಸರಿಹೊಂದುವ ಹಳೆಯ ಚಿಂದಿಯೊಂದನ್ನು ಕೊಡುತ್ತೇನೆ' ಎಂದಳು.

'ಶಾಂತವಾಗಿರಿ, ನೆರೆಯವರೇ ಶಾಂತವಾಗಿರಿ! ಅವಳಿಗೆ ಕೇಳುವಂತೆ ಮಾತನಾಡಬೇಡಿರಿ! ಆ ಅಕ್ಷರದಿಂದೇನು. ಅದರ ನೋವು ಅವಳ ಹೃದಯಕ್ಕೆ ನಾಟಿದೆ' ಎಂದು ಪಿಸುಗುಟ್ಟಿದಳು ಕಿರಿಯಾಕೆ.

ಜವಾನನು ತನ್ನ ದಂಡವನ್ನು ಬೀಸುತ್ತಾ, 'ಮಾನ್ಯರೇ, ದೊರೆಯ ಹೆಸರಿನಲ್ಲಿ ದಾರಿಬಿಡಿ. ಈಗಿನಿಂದ ಮಧ್ಯಾಹ್ನ ಒಂದು ಗಂಟೆಯವರೆಗೂ ಹೆಸ್ಟರ್ ಪ್ರೈನ್‌ಳ ಆಭರಣವನ್ನು ಎಲ್ಲರೂ ಸುಲಭವಾಗಿ ಈಕ್ಷಿಸಬಹುದಾದ ಸ್ಥಳದಲ್ಲಿ ನಿಲ್ಲುತ್ತಾಳೆ. ಇಂತಹ ದುಷ್ಕೃತ್ಯಗಳು ಬಯಲಿಗೆ ಬಂದ ನಮ್ಮ ನಾಡು ಧನ್ಯವಾಗಲಿ. ಹೀಗೆ ಬಾ, ಹೆಸ್ಟರ್, ನಿನ್ನ ಕೆಂಪು ಅಕ್ಷರವನ್ನು ಮಾರುಕಟ್ಟೆಯಲ್ಲಿ ಎಲ್ಲರಿಗೂ ತೋರಿಸು' ಎಂದನು.

ಜನಸಂದಣಿಯ ಮಧ್ಯೆ ಒಂದು ಸಣ್ಣ ದಾರಿಯನ್ನು ಬಿಡಿಸಲಾಯಿತು. ಹೆಸ್ಟರ್‌ಪ್ರೈನ್ ದಂಡನೆಯ ಸ್ಥಾನದೆಡೆಗೆ ಹೆಜ್ಜೆ ಹಾಕಿದಳು. ಮುಂದೆ ಜವಾನನಿದ್ದ. ಹಿಂದೆ ಗಡಸುಮುಖದ ಕೆಲವು ಗಂಡಸರು ಮತ್ತು ಹೆಂಗಸರಿಂದ ಕೂಡಿದ ಪುಟ್ಟ ಗುಂಪೊಂದು ಹಿಂಬಾಲಿಸುತ್ತಿತ್ತು. ಬಾಲಕರ ಗುಂಪೊಂದು ಇವರಿಗಿಂತ ಮುಂದಾಗಿ ಸಾಗಿತ್ತು. ಅಂದಿನ ಅರ್ಧ ದಿನದ ರಜೆಯ ಹೊರತು ಅವರಿಗೆ ಮತ್ತೇನೂ ಗೊತ್ತಿರಲಿಲ್ಲ. ಆಗಾಗ ಮುಖ

ತಿರುಗಿಸಿ, ಅವಳನ್ನೂ, ಅವಳ ತೋಳುಗಳಲ್ಲಿದ್ದ ಮಗುವನ್ನೂ, ಎದೆಯ ಮೇಲಿದ್ದ ಕಳಂಕಪ್ರಾಯ ಅಕ್ಷರವನ್ನೂ ಪಿಳಿಪಿಳಿ ನೋಡುತ್ತಾ ಮುಂದು ವರಿದಿದ್ದರು. ಸೆರೆಮನೆಯಿಂದ ಮಾರುಕಟ್ಟೆಗೆ ಅಷ್ಟೇನೂ ದೂರವಿರಲಿಲ್ಲ ವಾದರೂ, ಕೈದಿಯ ದೃಷ್ಟಿಯಿಂದ ಸ್ವಲ್ಪ ದೂರವಿದ್ದಂತೆಯೇ ಎಣಿಸ ಬಹುದು. ಹೆಸ್ಟರ್‌ಪ್ರೈನ್‌ಳ ಮುಖದಲ್ಲಿ ಬಿಗುವಾನ ಕಾಣುತ್ತಿದ್ದರೂ ಹೆಜ್ಜೆಹೆಜ್ಜೆಗೂ ಅವಳ ಹೃದಯ, ಆ ಗುಂಪಿನ ಕಾಲಿನಡಿಗೆ ಸಿಕ್ಕಿ ನುಚ್ಚು ನುರಿಯಾದಷ್ಟು ನೋವನ್ನನುಭವಿಸುತ್ತಿದ್ದಳು. ವೇದನೆಯನ್ನು ಸಹನಾ ಪೂರ್ವಕವಾಗಿ ಅನುಭವಿಸುತ್ತಿರುವಾಗ ಅದರ ತೀವ್ರತೆ ತಾಳಿದ್ದರೂ, ಅನಂತರ ಮನಸ್ಸನ್ನು ಕೊರೆಯುತ್ತಿರುವ ಅದರ ಮಹಾ ಯಾತನೆಯನ್ನು ಅನುಭವಿ ಸುವುದು ಮನುಷ್ಯನ ಸ್ವಭಾವ. ಶಾಂತಳಾಗಿಯೇ ಹೆಸ್ಟರ್ ಮಾರು ಕಟ್ಟೆಯ ಪಶ್ಚಿಮಕ್ಕಿದ್ದ ಒಂದು ವೇದಿಕೆಯ ಬಳಿಗೆ ಬಂದಳು. ಬಾಸ್ಟನ್ ನಗರದ ಹಿಂದಿನ ಚರ್ಚಿನ ಸೂರಿನ ಕೆಳಗೆ ಆ ವೇದಿಕೆ ನಿರ್ಮಿಸಲ್ಪಟ್ಟಿತ್ತು.

ಎರಡು ಮೂರು ತಲೆಮಾರುಗಳಿಂದಲೂ ಈ ವಧ್ಯವೇದಿಕೆ ದಂಡ ನೆಯ ಸ್ಥಾನವಾಗಿ ಉಪಯೋಗಿಸಲ್ಪಡುತಿತ್ತು. ಫ್ರೆಂಚ್ ಕ್ರಾಂತಿಕಾರರು ಉಪಯೋಗಿಸುತ್ತಿದ್ದ ಶಿರಚ್ಛೇದಕ ಯಂತ್ರದಷ್ಟೇ ಇದೂ ಸಹ ಪೌರ ಜನರನ್ನು ಸನ್ಮಾರ್ಗದಲ್ಲಿ ನಡೆಸಲು ಸಾಧಕವಾಗಿತ್ತು. ಒಟ್ಟಿನಲ್ಲಿ, ಅದು ಅಪಮಾನಕ್ಕೀಡುಮಾಡುವ ವೇದಿಕೆಯಾಗಿತ್ತು. ಅದರ ಮೇಲೆ ಶಿಸ್ತಿನ ಚೌಕಟ್ಟು–ತಪ್ಪಿತಸ್ಥನಿಗೆ ಬಹಿರಂಗವಾಗಿ ಅಪಮಾನ ಮಾಡಲು ಅವನ ತಲೆಯನ್ನೂ ಕೈಗಳನ್ನೂ ತೂರಿಸಲು ಮಾಡಿರುವ ಮರದ ಚೌಕಟ್ಟು ನಿರ್ಮಿತವಾಗಿತ್ತು. ಅಪಕೀರ್ತಿಯೇ ಮೂರ್ತಿವೆತ್ತಂತಿತ್ತು ಆ ಯಂತ್ರ. ಅಪರಾಧಿ ನಾಚಿಕೆಯಿಂದ ತನ್ನ ಮುಖವನ್ನು ಮುಚ್ಚಿಕೊಳ್ಳದೆ ಇರ ಲೆಂಬುದೇ ಈ ಶಿಕ್ಷೆಯ ಗುರಿ. ಅಪರಾಧಿ ಏನೇ ತಪ್ಪು ಮಾಡಿರಲಿ, ಇದಕ್ಕಿಂತ ಕುತ್ಸಿತ ಘಾತಕತನ ಮತ್ತೊಂದಿರಲಾರದು. ಹೆಸ್ಟರ್ ಪ್ರೈನ್ ಮಾತ್ರ ಎಂದಿನಂತೆ ಆ ಭೀಷಣವಾದ ಯಂತ್ರದಲ್ಲಿ ತಲೆ ಸಿಕ್ಕಿಸಿಕೊಂಡು ನಿಲ್ಲ ಬೇಕಾಗಿರಲಿಲ್ಲ. ಸುಮ್ಮನೆ ಒಂದು ನಿಯಮಿತ ಕಾಲ ಮಾತ್ರ ಆ ವೇದಿ ಕೆಯ ಮೇಲೆ ನಿಂತುಕೊಳ್ಳಬೇಕಾಗಿತ್ತು. ಭುಜದ ಎತ್ತರಕ್ಕೆ ಬರುವ ಆ ವೇದಿಕೆಯ ಮೆಟ್ಟಿಲನ್ನು ಹತ್ತಿ ಹೆಸ್ಟರ್ ಪ್ರೈನ್, ತನ್ನ ಸುತ್ತಲೂ ಸೇರಿದ್ದ ಗುಂಪಿಗೆ ಕಾಣುವಂತೆ ನಿಂತಳು.

ಆ ಸುಧಾರಕರ ಗುಂಪಿನಲ್ಲಿ ಯಾವನಾದರೂ ಒಬ್ಬ ರೋಮನ್ ಕ್ಯಾಥೊಲಿಕ್ ಪಂಗಡದವನಿದ್ದಿದ್ದರೆ ಅಂದವಾದ ಉಡುಪನ್ನು ಧರಿಸಿ ಮಗು

ವನ್ನು ತನ್ನೆದೆಗೆ ಅಪ್ಪಿಕೊಂಡು ನಿಂತಿದ್ದ ಆ ಸುಂದರಿಯನ್ನು ನೋಡಿ ಅನೇಕ ಸುಪ್ರಸಿದ್ಧ ಚಿತ್ರಕಾರರು ಪೈಪೋಟಿಯಿಂದ ಚಿತ್ರಿಸಿರುವ—ಪವಿತ್ರ ವಾದ ತಾಯಿ–ಮಗು ಚಿತ್ರವನ್ನು ನೆನಪಿಗೆ ತಂದುಕೊಳ್ಳುತ್ತಿದ್ದ. ಆದರೆ ಇವೆರಡಕ್ಕೂ ಒಂದು ವ್ಯತ್ಯಾಸವಿತ್ತು—ಆ ತಾಯ್ತನ ಪಾಪರಹಿತವಾಗಿ, ಪವಿತ್ರವಾಗಿದ್ದುದಲ್ಲದೆ, ಆಕೆಯ ಮಗು ಪ್ರಪಂಚವನ್ನು ಉದ್ಧಾರ ಮಾಡಲು ಜನಿಸಿತ್ತು. ಈಕೆಯ ತಾಯ್ತನ ಪಾಪಪೂರಿತವಾಗಿದ್ದುದಲ್ಲದೆ, ಈಕೆಯ ಮಗುವೂ ಕೂಡ ಪ್ರಪಂಚದಿಂದ ದೂರವಿರಬೇಕಾಗಿತ್ತು.

ಆ ದೃಶ್ಯ, ಸನ್ನಿವೇಶಕ್ಕೆ ತಕ್ಕಂತೆ ಗಂಭೀರ ಭೀಷಣತೆಯಿಂದ ಕೂಡಿತ್ತು. ಮತ್ತೊಬ್ಬರ ಕಳಂಕ ಮತ್ತು ಅಪಮಾನ ಕಂಡು ಅನುಕಂಪ ತೋರುವ ಬದಲು ನಗುವಷ್ಟು ಕೆಟ್ಟಿರಲಿಲ್ಲ ಸಮಾಜ. ಆ ಪ್ರೇಕ್ಷಕ ರೆಲ್ಲರೂ ಬಹಳ ಸಾಮಾನ್ಯರು. ಒಂದು ವೇಳೆ ಹೆಸ್ಟರ್ ಪ್ರೈನ್‌ಳಿಗೆ ಮರಣದಂಡನೆಯನ್ನೇ ವಿಧಿಸಿದ್ದರೂ ಅವರಾರೂ ಅದರ ಭೀಕರತೆಗೆ ಗೊಣಗುಟ್ಟದೆ ನೋಡುವಷ್ಟು ಬಿಗುಮನಸ್ಸಿನವರಾದರೂ, ಇಂತಹ ದೃಶ್ಯ ವನ್ನು ಕಂಡು ಹಾಸ್ಯ ಮಾಡುವಷ್ಟು ಕರುಣಾರಹಿತರಾಗಿರಲಿಲ್ಲ. ಒಂದು ವೇಳೆ ಅವಹೇಳನ ಮಾಡುವ ಮನಸ್ಸಿದ್ದರೂ ಸಹ ಅಲ್ಲಿ ಸೇರಿದ್ದ ಪುರ ಪ್ರಮುಖರಿಂದಾಗಿ ತಮ್ಮ ಭಾವನೆಗಳನ್ನು ಅಡಗಿಸಿಟ್ಟುಕೊಂಡಿದ್ದರು. ಗವರ್ನರರು, ಅವರ ಸಲಹೆಗಾರರೂ, ನ್ಯಾಯಾಧೀಶರೂ, ಸೈನ್ಯಾಧಿಕಾರಿ ಗಳೂ, ಪಾದ್ರಿಗಳು ಮೊದಲಾಗಿ ಎಲ್ಲರೂ ಸಭಾಭವನದ ಉಪ್ಪರಿಗೆಯ ಮೊಗಸಾಲೆಯ ಮೇಲೆ ಕುಳಿತಿದ್ದರು. ಇಂತಹ ಮಹನೀಯರೆಲ್ಲರೂ ತಮ್ಮ ಗೌರವಕ್ಕಾಗಲೀ, ಅಧಿಕಾರಕ್ಕಾಗಲೀ ಕಡಮೆಯೆಂದು ಭಾವಿಸದೆ ವೀಕ್ಷಿಸಲು ಬಂದಿದ್ದರಿಂದ, ಕಾನೂನು ವಿಧಿಸುತ್ತಿದ್ದ ಶಿಕ್ಷೆಗೆ ಒಂದು ತೂಕ ಬರುತ್ತಿತ್ತು. ಅದರಂತೆಯೇ ಆ ಗುಂಪೂ ಕೂಡ ಗಂಭೀರವಾಗಿ ನಿಶ್ಶಬ್ದವಾಗಿತ್ತು. ಎಲ್ಲರ ದೃಷ್ಟಿಯೂ ವಧ್ಯವೇದಿಕೆಯ ಮೇಲೆ ನಿಂತಿದ್ದ ಅಪರಾಧಿಯ ಎದೆಯ ಮೇಲೇ ನೆಟ್ಟಿತ್ತು. ಆ ದೃಷ್ಟಿಯ ಭಾರವನ್ನು ಆಕೆ ತನ್ನ ಕೈಲಾದಷ್ಟು ಮಟ್ಟಿಗೆ ಸಹಿಸಿಕೊಂಡಿದ್ದಳು. ಆದರೆ ಅದು ಸಹಿಸಲಸ ದಳವಾಗಿತ್ತು. ದುಡುಕುಸ್ವಭಾವದವಳಾದ ಆಕೆ ಅವರೆಲ್ಲರ ವಿಷಪೂರಿತ ನೋಟದ ತೀಕ್ಷ್ಣತೆ ಮತ್ತು ವಿವಿಧವಾದ ಅಪಮಾನಗಳನ್ನು ತಾತ್ಸಾರದಿಂದ ಎದುರಿಸಲು ಸಿದ್ಧಳಾಗಿ ಬಂದಿದ್ದಳು. ಆದರೆ ಅವರ ನಿಶ್ಶಬ್ದ ಗಂಭೀರತೆ ಅದಕ್ಕಿಂತ ಭೀಷಣವಾಗಿತ್ತು. ಆ ಗಡಸು ಮುಖಗಳೆಲ್ಲ ತನ್ನನ್ನು ಕಂಡು ಅಪಹಾಸ್ಯ ಮಾಡಿ ಸುಲಿದು ನಲಿಯಬಾರದೇಕೆ ಎಂದು ಹಾತೊರೆಯಿತು

ಅವಳ ಮನ. ಅಲ್ಲಿದ್ದ ಗಂಡಸು, ಹೆಂಗಸು, ಮಗು ಮೊದಲ್ಗೊಂಡು ಪ್ರತಿಯೊಬ್ಬರೂ ನಗೆಗಡಲನ್ನೇ ಹರಿಸಿದ್ದರೂ, ಹೆಸ್ಟರ್ ಪ್ರೈನ್, ತನ್ನ ಕಠಿಣ, ಮತ್ತು ತುಚ್ಛೀಕರಿಸುವ ನಗೆಯಿಂದ ಮುಯ್ಯಿಗೆ ಮುಯ್ಯಿ ತೀರಿಸಿ ಕೊಳ್ಳುತ್ತಿದ್ದಳು. ಆದರೆ ಈ ನಿಶ್ಯಬ್ದತೆಯ ಭಾರದ ಶಿಕ್ಷೆ ಅವಳಿಗೆ ಸಹಿಸಲ ಶಕ್ಯವಾಯಿತು. ಕೆಲವೊಮ್ಮೆ, ತನ್ನ ಬಲವನ್ನೆಲ್ಲ ಸೇರಿಸಿ ಗಟ್ಟಿಯಾಗಿ ಕಿರಿಚಿ ವೇದಿಕೆಯಿಂದ ಕೆಳಗೆ ಬಿದ್ದು ಹುಚ್ಚಳಾಗಿಬಿಡೋಣವೇ ಎಂದು ಅನ್ನಿಸುತ್ತಿತ್ತು ಅವಳಿಗೆ.

ಮಧ್ಯೆ ಮಧ್ಯೆ, ತಾನೇ ಗಮನಸೆಳೆಯುವ ವಸ್ತುವಾಗಿದ್ದ ಆ ಗುಂಪೇ ಮಾಯವಾದಂತೆ ತೋರುತ್ತಿತ್ತು. ಮತ್ತೆ ಕೆಲವು ವೇಳೆ ತನ್ನ ಸುತ್ತು ಮುತ್ತಲಿನವರೆಲ್ಲರೂ, ವಿಕಾರವಾಗಿ ಮಸುಕುಮಸಕಾಗಿ ಪ್ರೇತಗಳ ಬಿಂಬ ದಂತೆ ಅವಳ ಮನಸ್ಸು ಮಾತ್ರ ಎಂದಿಗಿಂತಲೂ ಚುರುಕಾಗಿತ್ತು. ಹಳೆಯ ದೃಶ್ಯಗಳೆಲ್ಲ—ಯಾವುದೋ ಪುಟ್ಟ ಊರು, ಬೇರೆ ಮುಖಗಳು—ನೆನಪಿಗೆ ಬರತೊಡಗಿದವು. ಬಾಲ್ಯ, ಶಾಲೆ, ಆಟ, ಜಗಳ, ಮನೆಯಲ್ಲಿನ ಸಣ್ಣಪುಟ್ಟ ತೊಂದರೆಗಳು, ಪ್ರತಿಯೊಂದೂ, ಅನಂತರದ ಅವಳ ಜೀವನದಲ್ಲಿನ ವಿಷಮ ಘಟನೆಗಳೂ ನೆನಪಿನೊಂದಿಗೆ ಬೆರೆತು ಅವಳ ಮನಸ್ಸನ್ನು ಆವರಿಸಿದುವು. ಪ್ರತಿಯೊಂದು ಘಟನೆಯೂ ವಿವರವಾಗಿ ಸಮಾನವಾಗಿ ನಾಟಕದಲ್ಲಿನ ದೃಶ್ಯ ಗಳಂತೆ ಕಣ್ಣ ಮುಂದೆ ಹಾದುಹೋಗುತ್ತಿದ್ದುವು. ವಾಸ್ತವಿಕತೆಯ ಕಠಿಣತೆ ಯನ್ನು ಮರೆಯಲೆತ್ನಿಸಲು ಈ ದೃಶ್ಯಪರಂಪರೆಗಳ ಕಲ್ಪನೆ ಅವಳ ಸಹಜ ಪ್ರವೃತ್ತಿಯಾಗಿದ್ದಿರಬಹುದು.

ಅದು ಹೇಗಾದರೂ ಇರಲಿ. ಆ ವಧ್ಯವೇದಿಕೆ ಹೆಸ್ಟರ್ ಪ್ರೈನ್‌ಳಿಗೆ ತಾನು ಬಾಲ್ಯದಿಂದ ಬೆಳೆದು ಬಂದ ದಾರಿಯನ್ನೆಲ್ಲಾ ಚಾಚೂ ತಪ್ಪದೆ ನೆನಪು ಮಾಡಿಕೊಟ್ಟಿತು. ಓಲ್ಡ್ ಇಂಗ್ಲೆಂಡಿನಲ್ಲಿ ಇದ್ದ ತನ್ನ ಸ್ವಂತ ಹಳ್ಳಿ, ಬಡತನದ ಬೇಗೆಗೆ ಸಿಕ್ಕಿದ್ದರೂ, ತಮ್ಮ ಗತವೈಭವವನ್ನು ಸೂಚಿಸಲು ಬಾಗಿಲ ಮುಂದೆ ಹಾಕಿದ್ದ ಆಯುಧಗಳಿಂದ ಕೂಡಿದ ಬೂದಿಗಲ್ಲಿನ ಮುರು ಕಲು ಮನೆ, ಇವೆಲ್ಲಾ ಎತ್ತರವಾದ ಆ ವೇದಿಕೆಯ ಮೇಲೆ ನಿಂತಿದ್ದಂತೆಯೇ ಅವಳಿಗೆ ಕಾಣಿಸಿದವು. ಬೊಕ್ಕತಲೆ, ನೀಳವಾದ ಬಿಳಿಯ ಗಡ್ಡಗಳಿಂದ ಕೂಡಿದ ತನ್ನ ತಂದೆಯ ಮುಖ, ವಾತ್ಸಲ್ಯಪೂರಿತವಾದ ತನ್ನ ತಾಯಿಯ ಮುಖ ಸಹ ಕಾಣಿಸಿತು. ಆಕೆಯ ಮರಣಾನಂತರ ಕೂಡ ಆ ಮುಖ ನೆನಪಿಗೆ ಬಂದು ತನ್ನ ಮಗಳನ್ನು ಆಗಿಂದಾಗ್ಗೆ ಎಚ್ಚರಿಸುತಿತ್ತು. ಹೆಸ್ಟರ್ ಪ್ರೈನ್‌ಳಿಗೆ ತಾನು ಹುಡುಗಿಯಾಗಿದ್ದಾಗ ಮಂಕು ಕವಿದ ಕನ್ನಡಿಯಲ್ಲಿ

ನೋಡುಕೊಳ್ಳುತ್ತಿದ್ದ ತನ್ನ ಮುಗ್ಧ ಸೌಂದರ್ಯಪೂರಿತವಾದ ಮುಖ ಕೂಡ ಕಾಣಿಸಿತು. ಅನಂತರ ಮತ್ತೊಬ್ಬ ಮುದುಕನ ಚಿತ್ರ ಆಕೆಯ ಕಣ್ಣೆದುರಿಗೆ ಬಂದು ನಿಂತಿತು. ತೆಳುವಾದ ದೇಹ, ವಿದ್ವಾಂಸನಂತಿದ್ದ ಮುಖ, ಹಗಲು ರಾತ್ರಿ ಎಣ್ಣೆ ಉರಿಸಿ ದೊಡ್ಡ ದೊಡ್ಡ ಪುಸ್ತಕಗಳನ್ನು ಓದಿ ಓದಿ ಕಳೆಗುಂದಿದ ಕಣ್ಣುಗಳು—ಆದರೂ ಆ ಮಂಕಾದ ಕಣ್ಣುಗಳಲ್ಲಿ ಬಯಸಿದಾಗ, ಎದೆ ಯನ್ನು ಕೊರೆದು ಅಂತರಾಳವನ್ನು ಹೊಕ್ಕು ಮರ್ಮವನ್ನು ಅರಿಯುವ ತೀಕ್ಷ್ಣತೆ ಅಡಗಿತ್ತು. ಆತನ ಎಡಭುಜ ಬಲಭುಜಕ್ಕಿಂತ ಕೊಂಚ ಎತ್ತರ ವಾಗಿದ್ದು, ವಿಕಾರವಾಗಿತ್ತು. ಅನಂತರ ಮತ್ತೆ ಕೆಲವು ಚಿತ್ರಗಳು ಅವಳ ಸ್ಮೃತಿಪಥದ ಮೇಲೆ ಹಾದು ಹೋದುವು. ಇಕ್ಕಟ್ಟಾದ ರಸ್ತೆಗಳು, ಎತ್ತರ ವಾದ ಬೂದು ಬಣ್ಣದ ಮನೆಗಳು, ಭಾರಿ ಇಗರ್ಜಿಗಳು, ಪುರಾತನ ಕಟ್ಟಡ ಗಳಿಂದ ಕೂಡಿದ ಯಾವುದೋ ಪರದೇಶದ ಪುರಾತನ ಪಟ್ಟಣದಲ್ಲಿ ಆಕೆಗೆ ಹೊಸಬಾಳುವೆ ಕಾದಿತ್ತು. ಆ ಬಾಳುವೆಗೂ ವಿಕೃತರೂಪದ ಆ ವಿದ್ವಾಂಸ ನಿಗೂ ಸಂಬಂಧವಿತ್ತು; ಆ ಹೊಸ ಬಾಳುವೆ ಮುರುಕಲು ಗೋಡೆಯ ಮೇಲೆ ಕಟ್ಟಿರುವ ಪಾಚಿಯ ಮೇಲೆ ಜೀವಿಸಬೇಕಾಯಿತು. ಕೊನೆಯದಾಗಿ ಮಗುವನ್ನೆತ್ತಿಕೊಂಡು, ಎದೆಯ ಮೇಲೆ ಕೆಂಪು ಅಕ್ಷರವನ್ನು ಧರಿಸಿ ನಿಂತಿದ್ದ ತನ್ನನ್ನೇ ದಿಟ್ಟಿಸಿ ನೋಡುತ್ತಿದ್ದ ಜನ, ಮಾರುಕಟ್ಟೆ ಇವೆಲ್ಲ- ನೆನಪಿಗೆ ಬಂದವು.

ಇದು ನಿಜವೇ ? ತೋಳಲ್ಲಿದ್ದ ಮಗು ಕಿರಿಚಿಕೊಳ್ಳುವಷ್ಟು ಬಲವಾಗಿ ತನ್ನ ಎದೆಗೆ ಅಪ್ಪಿಕೊಂಡಳು. ತನ್ನ ದೃಷ್ಟಿಯನ್ನು ತಗ್ಗಿಸಿ ಕೆಂಪು ಅಕ್ಷರ ವನ್ನು ನೋಡಿ, ತನ್ನ ಮಗು ಮತ್ತು ಅಪಮಾನ ಎರಡೂ ನಿಜವೆಂದು ಖಚಿತ ಮಾಡಿಕೊಳ್ಳಲು ಆ ಕೆಂಪು ಅಕ್ಷರವನ್ನು ಮುಟ್ಟಿ ನೋಡಿದಳು. ಹೌದು!—ಇವೆಲ್ಲ ನಿಜ—ಉಳಿದುದೆಲ್ಲಾ ಮಾಯವಾಗಿತ್ತು !

ಆ ಗುಂಪಿನ ಅಂಚಿನಲ್ಲಿ ನಿಂತಿದ್ದ ಒಬ್ಬಾತ, ಎಲ್ಲರೂ ಎಡೆಬಿಡದೆ ನೆಟ್ಟ ದೃಷ್ಟಿಯಿಂದ ನೋಡುತ್ತಿರುವ ವಸ್ತುವಾಗಿದ್ದ ಹೆಸ್ಟರ್ ಪ್ರೈನ್‌ಳ ದೃಷ್ಟಿಗೆ ಬಿದ್ದು ಅವಳ ಮನ ಅವನನ್ನೇ ಕುರಿತು ಯೋಚಿಸತೊಡಗಿತು. ದೇಶೀಯ ಉಡುಪನ್ನು ಧರಿಸಿದ್ದ ರೆಡ್ ಇಂಡಿಯನ್ ಒಬ್ಬ ನಿಂತಿದ್ದ. ಹೆಸ್ಟರ್ ಪ್ರೈನ್‌ಳ ಗಮನ ಸೆಳೆಯುವಷ್ಟುಮಟ್ಟಿಗೆ ಆಗಿನ ಕಾಲದಲ್ಲಿ ದೇಶೀಯರು ವಿರಳವಾಗಿರಲಿಲ್ಲ. ಅವಳ ಗಮನ ಸೆಳೆದದ್ದು ಅವನ ಪಕ್ಕದಲ್ಲಿದ್ದ ಆವನ ಸಂಗಾತಿ—ನಾಗರಿಕತೆ ಮತ್ತು ಅನಾಗರಿಕತೆಗಳು ಬೆರೆತ ವಿಚಿತ್ರ

ಉಡುಪನ್ನು ಧರಿಸಿದ್ದ ಬಿಳಿಯ ಮನುಷ್ಯ

ಅವನು ಗಿಡ್ಡಾಗಿದ್ದ, ಮುಖ ಸುಕ್ಕು ಬಿದ್ದಿದ್ದರೂ ಮುದುಕನೆಂದು ಹೇಳುವಂತಿರಲಿಲ್ಲ. ಅವನ ಆಕಾರದಲ್ಲಿ ಅಸಾಧಾರಣವಾದ ಚುರುಕು ಬುದ್ಧಿ ಎದ್ದು ಕಾಣುತ್ತಿತ್ತು. ಅವನ ಮನಸ್ಥೈರ್ಯದಿಂದ ತನ್ನ ಬುದ್ಧಿ ಶಕ್ತಿಯ ಕುರುಹುಗಳು ಎದ್ದು ಕಾಣುವಂತೆ ತನ್ನ ಆಕಾರವನ್ನು ಅಳವಡಿಸಿ ಕೊಂಡಂತೆ ತೋರುತ್ತಿತ್ತು. ತನ್ನ ಅಸ್ತವ್ಯಸ್ತವಾದ ಬಟ್ಟೆಗಳಿಂದ ತನ್ನ ವಿಕಾರವನ್ನು ಮುಚ್ಚಿಕೊಳ್ಳಲು ಪ್ರಯತ್ನ ಪಟ್ಟಿದ್ದರೂ ಸಹ ಹೆಸ್ಟರ್ ಪ್ರೈನ್‌ಳಿಗೆ ಅವನ ಒಂದು ಭುಜ ಮತ್ತೊಂದಕ್ಕಿಂತ ಎತ್ತರವಾಗಿರುವುದು ಗೊತ್ತಾಯಿತು. ಆತನ ಬತ್ತಿದ ಮುಖ ಕಂಡ ಕೂಡಲೇ ಹೆಸ್ಟರ್ ಪ್ರೈನ್ ಮತ್ತೊಮ್ಮೆ ತನ್ನ ಮಗುವನ್ನು—ಅದು ನೋವಿನಿಂದ ಕಿರಿಚಿಕೊಳ್ಳುವಷ್ಟು ಬಲವಾಗಿ—ಎದೆಗೆ ಅಪ್ಪಿಕೊಂಡಳು. ಅದು ಅತ್ತದ್ದು ಅವಳ ಕಿವಿಗೆ ಬೀಳಲಿಲ್ಲ.

ಹೆಸ್ಟರ್ ಪ್ರೈನ್ ಅವನನ್ನು ನೋಡುವುದಕ್ಕೆ ಸ್ವಲ್ಪ ಹೊತ್ತಿಗೆ ಮುಂಚೆ ತಾನೇ ಅವನು ಅಲ್ಲಿಗೆ ಬಂದಿದ್ದ. ಮೊದ ಮೊದಲು ತನಗೂ ಅದಕ್ಕೂ ಏನೂ ಸಂಬಂಧವಿಲ್ಲವೆಂಬಂತೆ ಉದಾಸೀನ ಭಾವನೆಯಿಂದಲೇ ಅವಳ ಕಡೆಗೆ ನೋಡಿದ್ದ. ಬಹಳ ಬೇಗ ಅವನ ದೃಷ್ಟಿ ತೀಕ್ಷ್ಣವಾಯಿತು. ಮೈಮೇಲೆ ಹಾವು ಹರಿದಂತಾಯಿತು. ಮೈ ಅದುರಿತು. ಉದ್ವೇಗದಿಂದ ಮುಖ ಕಪ್ಪಿಟ್ಟಿತು. ಆದರೆ ಅವನ ಮನಸ್ಥೈರ್ಯದಿಂದ ಆವೇಗ ಸ್ಥಿಮಿತಕ್ಕೆ ಬಂತು. ಸ್ವಲ್ಪ ಹೊತ್ತಿನ ನಂತರ ಅವನ ಉದ್ವೇಗ ಮುಖದಲ್ಲಿ ಕಾಣುತ್ತಲೇ ಇರಲಿಲ್ಲ. ಅದು ಹೃದಯದ ಅಂತರಾಳಕ್ಕೆ ಇಳಿದು ಹೋಗಿತ್ತು. ಹೆಸ್ಟರ್ ಪ್ರೈನ್ ತನ್ನ ಗುರುತು ಹಿಡಿದು ತನ್ನನ್ನೇ ನೋಡುತ್ತಿರುವುದನ್ನು ಕಂಡ ಕೂಡಲೇ, ಶಾಂತನಾಗಿ, ನಿಧಾನವಾಗಿ ತನ್ನ ಕೈಯೆತ್ತಿ ಸಂಜ್ಞೆ ಮಾಡಿ, ತುಟಿಯ ಮೇಲೆ ಬೆರಳಿಟ್ಟುಕೊಂಡ.

'ಅಯ್ಯಾ, ಆಕೆ ಯಾರು? ಏತಕ್ಕಾಗಿ ಈ ಬಹಿರಂಗವಾಗಿ ಅಪಮಾನ ಮಾಡುವ ಸ್ಥಳದಲ್ಲಿ ನಿಲ್ಲಿಸಿದ್ದಾರೆ?' ಎಂದು ಅತಿವಿನಯದಿಂದ, ತನ್ನ ಪಕ್ಕದಲ್ಲಿದ್ದ ಆ ಊರಿನವನೊಬ್ಬನನ್ನು ಕೇಳಿದ.

ಆತ, ಪ್ರಶ್ನೆ ಕೇಳಿದವನನ್ನೂ ಅವನ ಅನಾಗರೀಕ ಸಂಗಾತಿಯನ್ನೂ ಆಶ್ಚರ್ಯದಿಂದ ನೋಡುತ್ತ,—'ಓಹೋ ನೀವಿಬ್ಬರೂ ಈ ಊರಿಗೆ ಹೊಸಬರಿರಬೇಕು. ಇಲ್ಲದಿದ್ದರೆ ಹೆಸ್ಟರ್ ಪ್ರೈನ್‌ಳ ದುರ್ನಡತೆ ನಿಮ್ಮ ಕಿವಿಗೆ ಬೀಳದೆ ಇರುತ್ತಿರಲಿಲ್ಲ. ಅವಳು ದೈವಸಮಾನರಾದ ಮಾಸ್ಟರ್

ಡೀಮ್ಸ್‌ಡೇಲ್ ರವರ ಇಗರ್ಜಿಗೆ ಲೋಕಾಪವಾದ ತಂದಿದ್ದಾಳೆ' ಎಂದು ಹೇಳಿದ.

'ಹೌದು ನೀವು ಹೇಳುವುದು ನಿಜ. ನಾನು ಇಲ್ಲಿಗೆ ಹೊಸಬ. ನನಗೆ ಇಷ್ಟವಿಲ್ಲದಿದ್ದರೂ ಸಹ ದೇಶಪರ್ಯಟನ ಮಾಡುತ್ತಿದ್ದೇನೆ. ಭೂಮಿಯ ಮೇಲೂ, ಸಮುದ್ರದ ಮೇಲೂ ಘೋರ ಕಷ್ಟನಷ್ಟಗಳಿಗೆ ಸಿಕ್ಕಿ, ಇಲ್ಲಿಗೆ ದಕ್ಷಿಣದಲ್ಲಿರುವ ಅನಾಗರಿಕರ ಸೆರೆಯಲ್ಲಿದ್ದೆ. ಈ ರೆಡ್ ಇಂಡಿಯನ್ ನನ್ನನ್ನು ಸೆರೆಯಿಂದ ಬಿಡುಗಡೆ ಮಾಡಲು ಇಲ್ಲಿಗೆ ಕರೆತಂದಿದ್ದಾನೆ. ನಿಮಗೆ ಬೇಸರವಾಗದಿದ್ದಲ್ಲಿ ದಯವಿಟ್ಟು ನನಗೆ ಈ ಹೆಸ್ಟರ್ ಪ್ರೈನ್‌ಳು (ಅವಳ ಹೆಸರು ಸರಿ ತಾನೆ?) ಮಾಡಿದ ಅಪರಾಧವೇನು. ಅವಳನ್ನು ಈ ವಧ್ಯವೇದಿಕೆಗೆ ಏಕೆ ಕರೆತಂದರೆಂಬುದನ್ನು ಹೇಳುತ್ತೀರಾ?'

'ಆಗಲಿ ಅದಕ್ಕೇನಂತೆ. ಇಷ್ಟು ಕಾಲ ಕಷ್ಟಗಳಿಗೆ ಸಿಕ್ಕಿ, ಅನಾಗರಿಕರ ಸೆರೆಯಲ್ಲಿದ್ದು ಕ್ಷೋಭೆಗೊಂಡಿರುವ ನಿಮ್ಮ ಹೃದಯಕ್ಕೆ, ಅಪರಾಧವನ್ನು ಹುಡುಕಿ ಎಲ್ಲರೆದುರಿಗೆ ಶಿಕ್ಷಿಸುವ ಈ ನಮ್ಮ ಸುಭಿಕ್ಷವಾದ ದೇಶ ಶಾಂತಿಯನ್ನಿತ್ತೀತು. ಅಲ್ಲಿ ನಿಂತಿರುವವಳು, ಆಕೆ ಒಬ್ಬ ಆಂಗ್ಲೇಯ ವಿದ್ವಾಂಸನ ಹೆಂಡತಿ. ಆತ ಬಹಳ ಕಾಲದಿಂದ ಅಮ್‌ಸ್ಟರ್ ಡ್ಯಾಮ್‌ನಲ್ಲಿ ವಾಸವಾಗಿದ್ದ. ಆತನಿಗೂ ಮೆಸ್ಸಾಚುಸೆಟ್ಸ್ ದೇಶಕ್ಕೆ ಬಂದು ವಾಸ ಮಾಡಲು ಮನಸ್ಸಾಯಿತು. ತನಗೇನೋ ಬೇರೆ ಕೆಲಸವಿದ್ದ ಕಾರಣ ಹೆಂಡತಿಯನ್ನು ಮೊದಲು ಇಲ್ಲಿಗೆ ಕಳುಹಿಸಿದ. ಈಗ್ಗೆ ಎರಡು ವರ್ಷಗಳಿಂದಲೂ ಈಕೆ ಬಾಸ್ಟನ್ ನಗರದಲ್ಲಿಯೇ ವಾಸವಾಗಿದ್ದಾಳೆ. ಇದುವರೆಗೂ ಈಕೆಯ ಗಂಡನ ಸುದ್ದಿ ಬಂದಿಲ್ಲ. ಸರಿ, ಸಣ್ಣ ವಯಸ್ಸಿನ ಈಕೆ ಸ್ವೇಚ್ಛೆಯಿಂದ—'

'ಸರಿ ಸರಿ! ಅರ್ಥವಾಯಿತು.' ಎಂದು ಆಗಂತುಕ ಕಹಿ ಬೆರೆತ ದನಿಯಲ್ಲಿ ನುಡಿದು ಕಿರುನಗೆ ಬೀರಿ ಮುಂದುವರಿಸಿದ—'ಹೌದು, ನೀವು ಹೇಳುವ ಆ ವಿದ್ವಾಂಸನು ಈ ವಿಷಯವನ್ನು ಪುಸ್ತಕಗಳಿಂದ ತಿಳಿದಿದ್ದಿರಬೇಕಲ್ಲವೆ? ಆಕೆ ಎತ್ತಿಕೊಂಡಿರುವ ಮಗುವಿಗೇನು ಮೂರು ನಾಲ್ಕು ತಿಂಗಳಿರಬೇಕು. ಆ ಮಗುವಿನ ತಂದೆ ಯಾರು ಸ್ವಾಮಿ?'

'ಅದೇ ನೋಡಿ ಈಗ ದೊಡ್ಡ ಸಮಸ್ಯೆಯಾಗಿರೋದು. ಅದನ್ನು ಕಂಡುಹಿಡಿಯುವ ಬುದ್ಧಿವಂತನೇ ಇನ್ನೂ ಸಿಕ್ಕಿಲ್ಲ. ಹೆಸ್ಟರ್ ಪ್ರೈನ್ ಬಾಯೇ ಬಿಡುವುದಿಲ್ಲ. ನ್ಯಾಯಾಧೀಶರುಗಳೂ ಯೋಚಿಸಿ ಉಪಾಯ ಕಾಣದಾಗಿದ್ದಾರೆ. ಒಂದು ವೇಳೆ ಮನುಷ್ಯನಿಗೆ ಗೊತ್ತಿಲ್ಲದಂತೆ, ದೇವರು

ತನ್ನನ್ನು ನೋಡುತ್ತಿರುವನೆಂಬುದನ್ನು ಮರೆತು ಆ ಅಪರಾಧಿ ಈ ಶೋಚನೀಯ ದೃಶ್ಯವನ್ನು ನೋಡುತ್ತಿರಬಹುದು.'

'ಈ ರಹಸ್ಯವನ್ನು ಭೇದಿಸಲು ಆ ವಿದ್ವಾಂಸನೇ ಬರಬೇಕು' ಎಂದ ಆಗಂತುಕ.

'ಹೌದು ಇನ್ನೂ ಬದುಕಿದ್ದರೆ ಅವನು ಆಗತ್ಯವಾಗಿ ಮಾಡಬೇಕಾದ ಕೆಲಸವದು. ನೋಡಿ ಸ್ವಾಮಿ, ಗಂಡನನ್ನು ಕಳೆದುಕೊಂಡು ಯೌವ್ವನ, ರೂಪು ಇವುಗಳಿಂದ ಪ್ರೇರಿತಳಾಗಿ ದಾರಿ ತಪ್ಪಿದಳೆಂದು ಭಾವಿಸಿ ನಮ್ಮ ಮೆಸ್ಸಾಚುಸ್ಸೆಟ್ಸ್ ನ್ಯಾಯಾಧೀಶರುಗಳು ಈ ಶಿಕ್ಷೆಯನ್ನು ವಿಧಿಸಿದ್ದಾರೆ. ಕಾನೂನಿನ ಪ್ರಕಾರ ಇವಳಿಗೆ ಮರಣದಂಡನೆಯನ್ನೇ ವಿಧಿಸಬೇಕಾಗಿತ್ತು. ಆದರೆ ಕರುಣಾಮೂರ್ತಿಗಳೂ, ದಯಾರ್ದ್ರ ಹೃದಯರೂ ಆದ ನ್ಯಾಯಾಧೀಶರು ಮೂರು ಗಂಟೆಗಳ ಕಾಲ ಮಾತ್ರ ವಧ್ಯ ವೇದಿಕೆಯ ಮೇಲೆ ನಿಂತಿದ್ದು, ಬದುಕಿರುವವರೆಗೂ ಅವಳ ಎದೆಯ ಮೇಲೆ ಅಪಮಾನದ ಚಿಹ್ನೆಯನ್ನು ಧರಿಸಿರಬೇಕೆಂದು ಆಜ್ಞೆ ಮಾಡಿದ್ದಾರೆ' ಎಂದ ಊರಿನವ.

'ಬಹಳ ಯೋಗ್ಯವಾದ ಶಿಕ್ಷೆ' ಎಂದು ತಲೆದೂಗುತ್ತಾ ಹೇಳಿದ ಆಗಂತುಕ. 'ಆ ಕಳಂಕದ ಚಿಹ್ನೆಯನ್ನು ಅವಳ ಸಮಾಧಿಯ ಮೇಲೆ ಕೆತ್ತುವವರೆಗೂ ಅವಳು ಪಾಪ ಭೀತಿಯನ್ನು ಪ್ರಚಾರ ಮಾಡುವ ವಸ್ತುವಾಗುತ್ತಾಳೆ. ಆದರೆ ಈ ಪಾಪದಲ್ಲಿ ಅವಳ ಪಾಲುಗಾರ ಮಾತ್ರ ಬಂದು ವೇದಿಕೆಯ ಮೇಲೆ ಅವಳ ಪಕ್ಕದಲ್ಲಿ ನಿಲ್ಲದೆ ಇರುವುದು ನನಗೆ ಬಹಳ ಜಿಗುಪ್ಸೆಯನ್ನುಂಟು ಮಾಡಿದೆ. ಆದರೆ ಅವನ ಗುಟ್ಟು ಹೊರಬೀಳುತ್ತದೆ!....ಹೊರಬೀಳುತ್ತದೆ! ಹೊರಬೀಳುತ್ತದೆ!....'

ಬಹಳ ವಿನಯದಿಂದ ತನಗೆ ಸಮಾಚಾರ ಹೇಳಿದಾತನಿಗೆ ವಂದಿಸಿ, ತನ್ನ ರೆಡ್‌ಇಂಡಿಯನ್ ಆಳಿನ ಕಿವಿಯಲ್ಲಿ ಏನೋ ಪಿಸುಗುಟ್ಟಿದ. ಇಬ್ಬರೂ ಗುಂಪಿನಲ್ಲಿ ದಾರಿ ಮಾಡಿಕೊಂಡು ಮುಂದೆ ಹೊರಟರು.

ಇಷ್ಟೆಲ್ಲಾ ನಡೆಯುತ್ತಿರುವಾಗ ಹೆಸ್ಟರ್ ಪ್ರೈನ್ ಎವೆಯಿಕ್ಕದೆ ಆಗಂತುಕನ ಕಡೆಯೇ ನೋಡುತ್ತಿದ್ದಳು. ಅವಳ ದೃಷ್ಟಿ ಎಷ್ಟರ ಮಟ್ಟಿಗೆ ನೆಟ್ಟಿತ್ತೆಂದರೆ, ಸುತ್ತಲಿನ ಪ್ರಪಂಚವೆಲ್ಲ ಮಾಯವಾಗಿ ತಾನು ಅವನು ಇಬ್ಬರೇ ಉಳಿದುಕೊಂಡಿರುವಂತೆ ಭಾಸವಾಗುತ್ತಿತ್ತು ಅವಳಿಗೆ. ಮನೆಯ ಶಾಂತವಾತಾವರಣದಲ್ಲಿ ಆನಂದದಿಂದ ಬೆಳಗುತ್ತಿರಬೇಕಾದ ಅವಳು, ತನ್ನನ್ನು ನೋಡಲು ಜಾತ್ರೆ ಸೇರಿದ್ದ ಆ ಜನಜಂಗುಳಿಯಲ್ಲಿ, ಉರಿಬಿಸಿಲಿನಲ್ಲಿ ಆ ಪಾಪದ ಮಗುವನ್ನು ಎತ್ತಿಕೊಂಡು, ಕಳಂಕಪೂರಿತವಾದ ಕೆಂಪು ಅಕ್ಷರ

ವನ್ನು ಧರಿಸಿ, ಅಪಮಾದಿಂದ ತಲೆ ತಗ್ಗಿಸಿ ನಿಲ್ಲಬೇಕಾಯಿತು. ಇಷ್ಟೆಲ್ಲ ಭಯಂಕರವಾಗಿದ್ದರೂ ಆ ಸಾವಿರಾರು ವೀಕ್ಷಕರಿರುವುದು ಅವಳಿಗೆ ಒಂದು ವಿಧವಾದ ಆಸರೆಯಂತಿತ್ತು. ಏಕೆಂದರೆ ಅವಳೊಬ್ಬಳೇ ಅವನೊಡನೆ ಮುಖ ತೋರಿಸಿ ಮಾತನಾಡುವ ಬದಲು, ಅವರಿಬ್ಬರ ನಡುವೆ ಆ ಗುಂಪು ಸೇರಿದ್ದುದು ಅವಳಿಗೆ ಹಿತವೆನಿಸಿತ್ತು. ಬಹಿರಂಗವಾದ ಅಪ ಮಾನವೇ ಹಿತವೆನಿಸಿ, ಆದರ ಆಸರೆ ಯಾವಾಗ ತಪ್ಪುವುದೋ ಎಂದು ಭಯವಾಗುತ್ತಿತ್ತು ಅವಳಿಗೆ. ಈ ಯೋಚನೆಗಳ ಸಾಗರದಲ್ಲಿ ಮುಳುಗಿದ್ದ ಅವಳಿಗೆ, ಹಿಂದಿನಿಂದ ತನ್ನ ಹೆಸರಿಟ್ಟು ಕರೆದುದು ಕೇಳಿಸಲೇ ಇಲ್ಲ. 'ಹೆಸ್ಟರ್ ಪ್ರೈನ್, ಇಲ್ಲಿ ಕೇಳು' ಎಂದು ಆ ಗುಂಪಿಗೇ ಕೇಳಿಸುವಷ್ಟು ಜೋರಾಗಿ ಅನೇಕ ಭಾರಿ ಕೂಗಿದ ಮೇಲೆಯೇ ಅವಳಿಗೆ ತನ್ನನ್ನು ಕೂಗು ತ್ತಿರುವುದರ ಅರಿವಾದದ್ದು.

ಈ ಮೊದಲೇ ಹೇಳಿದ್ದಂತೆ ವಧ್ಯವೇಧಿಕೆಯ ಮೇಲಕ್ಕಿದ್ದ ಸಭಾ ಭವನದಉಪ್ಪರಿಗೆಯ ಮೊಗಸಾಲೆಯ ಮೇಲೆ ಗೌರ್‍ನರ್ ಬೆಲಿಂಗ್‌ಹ್ಯಾಮ್ ರವರು ಕುಳಿತಿದ್ದರು. ಸುತ್ತ ನಾಲ್ಕು ಮಂದಿ ಸಿಪಾಯಿಗಳು ಖಡ್ಗಧರಿಸಿ ನಿಂತಿದ್ದರು. ಆತ ಮೊಪ್ಪಿಗೆಯಲ್ಲಿ ಕರಿಯ ಗರಿಯೊಂದನ್ನು ಧರಿಸಿ, ಕಸೂತಿ ಕೆಲಸ ಮಾಡಿದ ಮೇಲಂಗಿಯನ್ನು ಧರಿಸಿದ್ದನು. ವೃದ್ಧನಾಗಿದ್ದ ಆತನ ಮುಖದ ಸುಕ್ಕುಗಳಲ್ಲಿ ಅನುಭವ ಎದ್ದು ಕಾಣುತ್ತಿತ್ತು. ಆ ಜನಾಂಗದ ಏಳಿಗೆ, ಬೆಳವಣಿಗೆ ಎಲ್ಲ ಮುಖ್ಯಸ್ಥನಾದ ಆತನಿಗೇ ಸಲ್ಲ ತಕ್ಕದ್ದು. ಆತನ ಸುತ್ತಮುತ್ತಲೂ ಆಗಿನ ಕಾಲದಲ್ಲಿ ಪ್ರಸಿದ್ಧ ಪುರುಷ ರಾಗಿದ್ದ ಇಗರ್ಜಿಯ ಮುಖ್ಯಾಧಿಕಾರಿಗಳು ಕುಳಿತಿದ್ದರು. ಅವರೆಲ್ಲರೂ ಯೋಗ್ಯರೂ ಪ್ರಾಜ್ಞರೂ ಎನ್ನುವುದರಲ್ಲಿ ಸಂಶಯವಿಲ್ಲ. ಅಪರಾಧಿನಿಯಾದ ಒಬ್ಬ ಹೆಂಗಸಿನ ಹೃದಯದ ಪಾಪಪುಣ್ಯಗಳ ಬಲೆ ಬಿಡಿಸಿ, ಅತಿನಿಷ್ಠೆಯಿಂದ ನ್ಯಾಯ ತೀರ್ಮಾನವನ್ನು ಕೊಡಲು ಯೋಗ್ಯರಾದ ಇಷ್ಟೊಂದು ಜನ ಪ್ರಾಜ್ಞರಾದ ಧರ್ಮಾತ್ಮರನ್ನು ಮಾನವ ಕುಲದಿಂದಲೇ ಆರಿಸುವುದು ಕಷ್ಟ ಸಾಧ್ಯವಾದದ್ದು. ಹೆಸ್ಟರ್ ಪ್ರೈನ್‌ಳಿಗೂ ಅದರ ಅರಿವಾಗಿತ್ತು. ಯಾವ ವಿಧವಾದ ಅನುಕಂಪವನ್ನು ಅವಳು ಬಯಸಿದ್ದರೂ ಅದು ಆ ಗುಂಪಿನಿಂದ ದೊರೆಯುತ್ತಿತ್ತೇ ಹೊರತು, ಇವರಿಂದ ನಿರೀಕ್ಷಿಸುವಂತಿರಲಿಲ್ಲ. ಆ ಅಭಾ ಗಿನಿ ಮೊಗಸಾಲೆಯ ಕಡೆಗೆ ದೃಷ್ಟಿ ಬೀರಿದಾಗ, ಮುಖ ವಿವರ್ಣವಾಗಿ ದೇಹ ಕಂಪಿಸಿತು.

ಆಕೆಯನ್ನು ಕರೆಯುತ್ತಿದ್ದಾತ, ಬಾಸ್ಟನ್ ನಗರದಲ್ಲೆಲ್ಲಾ ಹಿರಿಯ

ಪಾದ್ರಿ ರೆವರೆಂಡ್ ಜಾರ್ಜ ವಿಲ್ಸನ್. ತನ್ನ ಸಹಾಧಿಕಾರಿಗಳಂತೆಯೇ ಆತನೂ ಒಬ್ಬ ದೊಡ್ಡ ವಿದ್ವಾಂಸನಾಗಿದ್ದುದಲ್ಲದೆ ದಯಾಳುವೂ ಸ್ನೇಹಪರನೂ ಆಗಿದ್ದರೂ ಅದನ್ನು ಬೆಳೆಸಿಕೊಂಡು ಬಂದಿರಲಿಲ್ಲ. ನಿಜವಾಗಿಯೂ ಹೇಳುವುದಾದರೆ ಆತನಿಗೆ ಅದು ಹೆಮ್ಮೆಗಿಂತ ನಾಚಿಕೆಯ ವಿಷಯವಾಗಿತ್ತು. ಟೊಪ್ಪಿಗೆಯಿಂದ ಹೊರಬಂದಿರುವ ನರೆಗೂದಲಿನ ಕುರುಳುಗಳು, ಜ್ವಾಜ್ವಲ್ಯಮಾನವಾದ ಬೆಳಕಿಗೆ ಹೊಂದಿಕೊಳ್ಳಲಾಗದೆ ಮಿಟುಕಿಸುತ್ತಿದ್ದ ಬೂದುಬಣ್ಣದ ಕಣ್ಣುಗಳು ಇವುಗಳಿಂದ ಆತ ಯಾವುದೋ ಹಳೆಯ ಧರ್ಮೋಪದೇಶದ ಪುಸ್ತಕದ ಮೇಲಿರುವ ಚಿತ್ರದಂತೆ ಕಾಣುತ್ತಿದ್ದ. ಮಾನವನ ಅಪರಾಧ, ರಾಗ, ಬೇಗುದಿಗಳಲ್ಲಿ ಕೈ ಹಾಕಲು ಆತನಿಗೆ ಆ ಚಿತ್ರಕ್ಕಿಂತ ಹೆಚ್ಚು ಅಧಿಕಾರವಿರಲಿಲ್ಲ.

ತನ್ನ ಪಕ್ಕದಲ್ಲಿದ್ದ ಯುವಕನ ಭುಜದ ಮೇಲೆ ಕೈಯಿಡುತ್ತಾ ಮಿ. ವಿಲ್ಸನ್ ಹೇಳಿದರು—'ಹೆಸ್ಟರ್ ಪ್ರೈನ್ ನೀನು ಕುಳಿತುಕೊಳ್ಳಲು ಒಪ್ಪುವಂತೆ ಇಲ್ಲಿರುವ ನಮ್ಮ ಸೋದರನನ್ನು ಒಡಂಬಡಿಸಿದ್ದೇನೆ. ಅಷ್ಟೇ ಅಲ್ಲ ತೇಜಸ್ವಿಯಾದ ಈತನೇ, ದೇವರೆದುರಿಗೆ, ಮೇಧಾವಿಗಳೂ, ನ್ಯಾಯಪರರೂ ಆದ ಅಧಿಕಾರ ವರ್ಗದವರೆದುರಿಗೆ ಮತ್ತು ಇಲ್ಲಿ ಸೇರಿರುವ ಎಲ್ಲ ಜನರೆದುರಿಗೆ, ನಿಕೃಷ್ಟವಾದ ಪಾಪದ ಮಸಿಯಿಂದ ಮುಚ್ಚಿದ ನಿನ್ನನ್ನು ವಿಚಾರಿಸಿಕೊಳ್ಳುವಂತೆ ಬೇಡಿಕೊಂಡಿದ್ದೇನೆ. ಏಕೆಂದರೆ ನನಗಿಂತ ಚೆನ್ನಾಗಿ ಆತನಿಗೆ ನಿನ್ನ ಸ್ವಭಾವ ತಿಳಿದಿದೆ. ಅದರಂತೆ ಆತ ಕರುಣೆಯಿಂದಲೋ, ಹೆದರಿಸಿಯೋ, ನಿನ್ನ ಮೊಂಡಾಟಕ್ಕೆ ತಕ್ಕಂತೆ ವಾದಿಸಬಲ್ಲ. ಒಟ್ಟಿನಲ್ಲಿ ನಿನ್ನನ್ನು ಈ ಪರಮ ಪಾತಕದ ಕೂಪಕ್ಕೆ ಬೀಳುವಂತೆ ಮಾಡಿದವನ ಹೆಸರನ್ನು ನೀನು ಹೊರಗೆಡಹಬೇಕೆಂಬುದೇ ನಮ್ಮ ಉದ್ದೇಶ. ಹೆಂಗಸಿನ ಹೃದಯದ ರಹಸ್ಯವನ್ನು ಅಚ್ಚ ಬೆಳಕಿನಲ್ಲಿ ಇಷ್ಟೊಂದು ಜನರೆದುರಿಗೆ ಹೊರಗೆಡಹಲು ಬಲವಂತ ಮಾಡುವುದು ಸ್ತ್ರೀತ್ವಕ್ಕೆ ಅಪಮಾನ ಮಾಡಿದಂತೆ ಎನ್ನುವ ಭಾವನೆಯಿಂದ ಆತ ನನ್ನನ್ನು ವಿರೋಧಿಸುತ್ತಿದ್ದಾನೆ. ಆದರೆ ಪಾಪವನ್ನು ಮಾಡುವುದರಲ್ಲಿ ನಾಚಿಕೆಯಿರಬೇಕೇ ಹೊರತು, ಅದನ್ನು ಒಪ್ಪಿಕೊಳ್ಳುವುದಕ್ಕೆ ನಾಚಿಕೆ ಪಡಬೇಕಾಗಿಲ್ಲ ಎಂದು ಆತನನ್ನು ನಾನು ಒಪ್ಪಿಸಬೇಕಾಯಿತು. ಏನು ಹೇಳುತ್ತೀಯ, ಸೋದರ ಡಿಮ್ಸ್‌ಡೇಲ್? ಈ ಕಳಂಕರೂಪಿಯ ಆತ್ಮವನ್ನು ನಮ್ಮಿಬ್ಬರಲ್ಲಿ ಯಾರು ವಿಚಾರಿಸಿಕೊಳ್ಳೋಣ?'

ಮೊಗಸಾಲೆಯಲ್ಲಿ ಕುಳಿತಿದ್ದವರಲ್ಲೇ ಗುಜುಗುಜು ಮಾತಿಗೆ ಆರಂಭ

ವಾಯಿತು. ಅದಕ್ಕೆ ದನಿಗೊಟ್ಟಂತೆ ಗವರ್ನರ್ ಬೆಲಿಂಗ್‌ಹ್ಯಾಮ್‌ರವರು ಮರ್ಯಾದೆಯಿಂದ ಕೂಡಿದ್ದರೂ ಅಧಿಕಾರವಾಣಿಯಿಂದ ಸಣ್ಣವಯಸ್ಸಿನ ಆ ಪಾದ್ರಿಯನ್ನು ಕುರಿತು, 'ಮಾಸ್ಟರ್ ಡಿಮ್ಸ್‌ಡೇಲ್, ಈ ಹೆಂಗಸಿನ ಆತ್ಮದ ಜವಾಬ್ದಾರಿ ನಿಮಗೆ ಸೇರಿದ್ದು. ಅವಳು ತನ್ನ ಪಾಪವನ್ನು ಒಪ್ಪಿಕೊಂಡು, ಅದಕ್ಕೆ ಪಶ್ಚಾತ್ತಾಪ ಪಡುವಂತೆ ಮಾಡುವುದು ನಿಮ್ಮ ಯೋಗ್ಯತೆಗೆ ತಕ್ಕ ದಾಗಿದೆ' ಎಂದರು.

ಈ ಮಾತನ್ನು ಕೇಳಿ ಗುಂಪಿನ ದೃಷ್ಟಿಯೆಲ್ಲಾ ರೆವರೆಂಡ್ ಡಿಮ್ಸ್‌ಡೇಲ್ ರವರ ಕಡೆಗೆ ಹೊರಳಿತು. ಆ ಪಾದ್ರಿಗಿನ್ನೂ ಸಣ್ಣ ವಯಸ್ಸು. ಇಂಗ್ಲೀಷ್ ವಿಶ್ವವಿದ್ಯಾಲಯದಲ್ಲಿ ಘನಪಾಂಡಿತ್ಯವನ್ನು ಸಂಪಾದಿಸಿ ತನ್ನ ದೇಶಕ್ಕೆ ಬಂದಿದ್ದ. ಆತನ ನಿರರ್ಗಳವಾದ ಮಾತುಗಾರಿಕೆ ಮತ್ತು ಧರ್ಮನಿಷ್ಠೆ ಗಳು ಆತನಿಗೆ ಬಹಳ ಗೌರವವನ್ನು ಸಂಪಾದಿಸಿಕೊಟ್ಟಿತ್ತು. ಆತನ ಆಕಾರ ಬಹಳ ಆಕರ್ಷಕವಾಗಿತ್ತು. ಅಗಲವಾದ ಮತ್ತು ಎತ್ತರವಾದ ಹಣೆ, ಉದ್ವೇಗಪೂರಿತವಾದ ಅಗಲವಾದ (ಕಂದುಬಣ್ಣದ) ಕಣ್ಣುಗಳು, ಆತ್ಮ ಸಂಯಮದಿಂದಲೂ ಮನಸ್ಸಿನ ಆವೇಗದಿಂದಲೂ ಕೂಡಿ ಆತನ ತುಟಿಗಳು ಕಂಪಿಸುತ್ತಿದ್ದವು. ಪಾಂಡಿತ್ಯ ಪೂರ್ಣವಾಗಿದ್ದ ಆತನ ಮುಖದಲ್ಲಿ ಏನೋ ಒಂದು ವಿಧವಾದ ಗಾಬರಿ, ಭಯ—ಜೀವನದ ದಾರಿಯಲ್ಲಿ ದಿಕ್ಕುಗಾಣದೆ ತೊಳಲುತ್ತಿರುವ ನೋಟ ಏಕಾಂತದಲ್ಲಿದ್ದಾಗ ಮಾತ್ರ ಹಿತವೆನಿಸುವ ನೋಟ—ಅಡಗಿತ್ತು. ಆದ್ದರಿಂದ ಆತ ತನಗೆ ಅವಕಾಶ ದೊರೆತಾಗ ಲ್ಲೆಲ್ಲಾ ಅಲ್ಲಿ ಇಲ್ಲಿ ಗಿಡಮರಗಳ ನೆಳಲಲ್ಲಿ ತಿರುಗಾಡುತ್ತಿರುತ್ತಾನೆ. ಯಾವಾ ಗಲೂ ಮಗುವಿನಂತೆ ಸರಳ ಮನಸ್ಸಿನಿಂದ, ಸಂದರ್ಭ ಒದಗಿದಾಗಲೆಲ್ಲಾ ಮುಂದೆ ಬಂದು ತನ್ನ ಭಾವಪೂರ್ಣವಾದ ಮಾತಿನಿಂದ ನವ ಪರಿಮಳದ ಹೊಸ ಚೇತನವನ್ನು ಜನರಿಗೆ ನೀಡುತ್ತಾನೆ. ಆತನ ಭಾಷಣವನ್ನು ಕೇಳಿ ದಾಗಲೆಲ್ಲಾ ದೇವಪುರುಷನೊಬ್ಬನ ಅಮೃತ ವಚನವನ್ನು ಕೇಳಿದಷ್ಟು ಹಿತವಾಗುತ್ತದೆ ಅನ್ನುತ್ತಾರೆ ಜನ.

ಅಪರಿಶುದ್ಧವಾಗಿದ್ದರೂ ಪವಿತ್ರವಾದ ಹೆಸ್ಟರ್ ಪ್ರೈನ್‌ಳ ಆತ್ಮವನ್ನು ಉದ್ಧಾರ ಮಾಡಲು ಗವರ್ನರರೂ ಮತ್ತು ರೆವರೆಂಡ್ ವಿಲ್ಸನ್‌ರವರೂ ತನ್ನನ್ನು ನೇಮಿಸಿದಾಗ ಆ ಯುವಕನ ಮುಖ ವಿವರ್ಣವಾಯಿತು, ತುಟಿ ಕಂಪಿಸತೊಡಗಿತು.

'ಮಾನ್ಯ ಗವರ್ನರ್‌ರವರು ಹೇಳಿದಂತೆ ಅದು ಆಕೆಯ ಆತ್ಮೋ ದ್ಧಾರಕ್ಕೆ ಮುಖ್ಯವಾದದ್ದು. ಅಂತೆಯೇ ಅವಳ ಆತ್ಮ ನಿನ್ನ ವಶದಲ್ಲಿರುವು

ದರಿಂದ ಅದು ನಿನಗೆ ಬಹುಮುಖ್ಯವಾದದ್ದು. ಆದ್ದರಿಂದ ಸತ್ಯವನ್ನು ಒಪ್ಪಿಕೊಳ್ಳುವಂತೆ ಅವಳಿಗೆ ಬುದ್ಧಿ ಹೇಳು' ಎಂದರು, ರೆವರೆಂಡ್ ವಿಲ್ಸನ್‌ರವರು.

ರೆವರೆಂಡ್ ಡಿಮ್ಸ್‌ಡೇಲ್ ತಲೆತಗ್ಗಿಸಿ ಸ್ವಲ್ಪ ಹೊತ್ತು ಮೌನವಾಗಿ ಪ್ರಾರ್ಥನೆ ಮಾಡುವಂತೆ ನಿಂತಿದ್ದು ಮುಂದೆ ಬಂದ. ಗೋಡೆಯನ್ನು ಆಸರೆಯಾಗಿ ಹಿಡಿದುಕೊಂಡು ಹೆಸ್ಟರ್ ಪ್ರೈನ್‌ಳ ಮುಖವನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಾ ಮಾತನಾಡತೊಡಗಿದ.

'ಹೆಸ್ಟರ್ ಪ್ರೈನ್ ಅವರು ಹೇಳಿದುದನ್ನೆಲ್ಲಾ ಕೇಳಿದೆಯಲ್ಲ. ನಾನು ಯಾವ ಕಷ್ಟದಲ್ಲಿ ಸಿಕ್ಕಿ ತೊಳಲುತ್ತಿದ್ದೇನೆ ಎನ್ನುವುದನ್ನು ನೀನೇ ನೋಡುತ್ತಿದ್ದೀಯೆ. ನಿನ್ನ ಆತ್ಮೋದ್ಧಾರವಾಗಬೇಕಾದರೆ, ಭೂಮಿಯ ಮೇಲಿನ ಶಿಕ್ಷೆಯಿಂದಲೇ ನಿನಗೆ ಮುಕ್ತಿ ದೊರೆಯಬೇಕಾದರೆ ನಿನ್ನೊಡನೆ ಪಾಪ ಮಾಡಿ ಸಂಕಟಪಡುತ್ತಿರುವ ಆ ಮನುಷ್ಯನ ಹೆಸರನ್ನು ಹೇಳಿಬಿಡು. ಅವನ ಮೇಲಿನ ಕರುಣೆಯಿಂದ, ದಯೆಯಿಂದ ಸುಮ್ಮನಿದ್ದುಬಿಡಬೇಡ. ಉನ್ನತ ಪದವಿಯಲ್ಲಿರುವ ಅವನು ಅಪಮಾನದ ವೇದಿಕೆಯ ಮೇಲೆ ನಿನ್ನೊಡನೆ ನಿಲ್ಲಬೇಕಾಗಬಹುದು. ಆದರೆ ಬದುಕಿದರುವವರೆಗೂ ಅಪರಾಧ ಕಲುಷಿತವಾದ ಹೃದಯವನ್ನು ಮುಚ್ಚಿಟ್ಟುಕೊಂಡಿರುವುದಕ್ಕಿಂತಲೂ ಅದೇ ಉತ್ತಮ. ನಿನ್ನ ಮೌನ ಅವನ ಪಾಪದ ಜೊತೆಗೆ ಕಾಪಟ್ಯವೂ ಸೇರುವಂತೆ ಮಾಡುತ್ತದೆಯೇ ಹೊರತು ಮತ್ತೇನನ್ನು ಮಾಡಬಲ್ಲದು? ದೇವರ ದಯೆಯಿಂದ ನಿನ್ನ ಅಪರಾಧ ಬಯಲಾಗಿ ಅದರಿಂದ ನಿನ್ನಲ್ಲಿರುವ ಪಾಪವನ್ನೂ ಸಂಕಟವನ್ನೂ ಜಯಿಸಲು ಅನುಕೂಲವಾಗಿದೆ. ಅವನಿಗೆ ಅದರ ಅರಿವಿಲ್ಲದಿರಬಹುದು. ಆದ್ದರಿಂದ ಹುಷಾರು. ಕಹಿಯಾದರೂ ಲಾಭದಾಯಿಕವಾದ ನಿನ್ನ ಬಾಯಿಗೆ ಬಂದಿರುವ ಆ ಬಟ್ಟಲನ್ನು ಅವನಿಗೆ ನಿರಾಕರಿಸಬೇಡ' ಎಂದರು.

ಪಾದ್ರಿಯ ಘನವಾದ ದನಿ ಹಿತವಾಗಿತ್ತು. ಆ ಪದಗಳ ಉದ್ದೇಶಕ್ಕಿಂತ ಅದರಲ್ಲಡಗಿದ್ದ ಭಾವ ಎಲ್ಲ ಹೃದಯಗಳೂ ಕಂಪಿಸುವಂತೆ ಮಾಡಿ, ಎಲ್ಲರೂ ಅನುಕಂಪ ತೋರುವಂತೆ ಮಾಡಿತು. ಹೆಸ್ಟರ್ ಪ್ರೈನ್‌ಳ ತೆಕ್ಕೆಯಲ್ಲಿದ್ದ ಆ ಪಾಪದ ಹಸುಳೆಗೆ ಕೂಡ ಅದರ ಅನುಭವವಾಯಿತೆಂದು ತೋರುತ್ತದೆ; ತನ್ನ ಶೂನ್ಯದೃಷ್ಟಿಯನ್ನು ಮಿ. ಡಿಮ್ಸ್‌ಡೇಲರ ಕಡೆಗೆ ಬೀರಿ, ದುಃಖಮಿಶ್ರಿತವಾದ ಸಂತೋಷದೊಡನೆ ತನ್ನ ಕೈಗಳನ್ನು ಚಾಚಿತು. ಹೆಸ್ಟರ್ ಪ್ರೈನ್ ಖಂಡಿತವಾಗಿಯೂ ಅಪರಾಧಿಯ ಹೆಸರನ್ನು ಹೇಳಿಯೇ ಹೇಳುತ್ತಾಳೆ, ಇಲ್ಲವೆ ಅಪರಾಧಿ ಸಾಮಾನ್ಯವಾಗಲಿ, ದೊಡ್ಡ ಮನುಷ್ಯ

ನಾಗಲಿ ತಾನಾಗಿಯೇ ಮನಃಪೂರ್ವಕವಾಗಿ ಬಂದು ವೇದಿಕೆಯನ್ನು ಹತ್ತು ತ್ತಾನೆ ಎಂದು ನಂಬುವಷ್ಟು ಮಟ್ಟಿಗೆ ಜನದ ಮನಸ್ಸಿಗೆ ನಾಟಿತು ಆತನ ಮಾತು. ಹೆಸ್ಟರ್ ಮಾತ್ರ ತಲೆಯಲ್ಲಾಡಿಸಿದಳು.

'ಭಗವಂತನ ಕರುಣೆಯ ಮೇರೆಯನ್ನು ಅತಿಕ್ರಮಿಸಬೇಡ. ನೀನು ಈಗ ಕೇಳಿದ ಬುದ್ಧಿವಾದವನ್ನು ಅನುಮೋದಿಸಲು ಆ ಮಗುವಿಗೆ ಕೂಡ ಗೊತ್ತಿದೆ. ಅವನ ಹೆಸರನ್ನು ಹೇಳಿಬಿಡು! ಹೇಳಿ ನೀನು ಪಶ್ಚಾತ್ತಾಪ ಪಟ್ಟರೆ ನಿನ್ನ ಎದೆಯ ಮೇಲಿರುವ ಕೆಂಪು ಅಕ್ಷರವನ್ನು ತೆಗೆದು ಹಾಕ ಬಹುದು' ಎಂದು ಮೊದಲಿಗಿಂತಲೂ ಕಠಿಣವಾದದಲ್ಲಿ ಹೇಳಿದರು ರೆವರೆಂಡ್‌ವಿಲ್ಸನ್.

'ಖಂಡಿತ ಇಲ್ಲ' ಹೆಸ್ಟರ್ ಆತನ ಕಡೆಗೆ ನೋಡದೆ ವಿಷಣ್ಣಪೂರಿತ ವಾದ ಚಿಕ್ಕ ಪಾದ್ರಿಯ ಕಣ್ಣುಗಳನ್ನೇ ದೃಷ್ಟಿಸಿ ನೋಡುತ್ತ ಹೇಳಿದಳು— 'ಅದು ಹೃದಯದೊಳಗೆ ಬರೆಬಿದ್ದಿದೆ. ನೀವು ಅದನ್ನು ತೆಗೆದು ಹಾಕಲಾರರಿ. ಮತ್ತೆ ನನ್ನ ಸಂಕಟದೊಂದಿಗೆ ಆತನ ಯಾತನೆಯನ್ನೂ ಅನುಭವಿಸಲು ನಾನು ಸಿದ್ಧಳಾಗಿದ್ದೇನೆ!'

'ಮೂರ್ಖ ಹೆಂಗಸೇ, ನಿನ್ನ ಮಗುವಿನ ತಂದೆಯ ಹೆಸರನ್ನು ಹೇಳು' ಎಂದು ಮತ್ತೊಂದು ಕೋಪದ ದನಿ ವೇದಿಕೆಯ ಸುತ್ತಲಿದ್ದ ಗುಂಪಿನ ಮಧ್ಯದಿಂದ ಕೇಳಿಸಿತು.

ಆ ದನಿಯನ್ನು ಕೇಳಿದ ತಕ್ಷಣ ಅದನ್ನು ಗುರಿತಿಸಿ ಅವಳ ಮುಖ ವಿವರ್ಣವಾಯಿತು. ಆದರೂ ಉತ್ತರ ಕೊಟ್ಟಳು—'ಇಲ್ಲ, ನಾನು ಹೇಳು ವುದಿಲ್ಲ. ನನ್ನ ಮಗು ತನ್ನ ತಂದೆ ದೇವರೇ ಎಂದು ತಿಳಿಯಬೇಕೇ ಹೊರತು ಮಾನವನೆಂದು ಅವಳಿಗೆ ಗೊತ್ತಾಗಕೂಡದು.'

'ಅವಳು ಹೇಳುವುದಿಲ್ಲ!' ಎಂದು ತಗ್ಗುದನಿಯಲ್ಲಿ ನುಡಿಯುತ್ತಾ ತನ್ನೆದೆಯಮೇಲೆ ಕೈಯ್ಯಿಟ್ಟುಕೊಂಡು, ಹಿಂದೆಸರಿದು ನಿಟ್ಟುಸಿರು ಬಿಡುತ್ತಾ ಹೇಳಿದ—'ಈ ಹೆಂಗಸಿನ ಕಾರುಣ್ಯ ಮತ್ತು ಮನೋಧಾರ್ಢ್ಯ ಅಸಾಧಾರಣ ವಾದದ್ದು. ಅವಳು ಹೇಳುವುದಿಲ್ಲ!'

ಆ ಬಡಪಾಯಿ ಹೆಂಗಸಿನ ಮನಸ್ಸಿನ ಸ್ಥಿತಿಯನ್ನು ಕಂಡುಕೊಂಡು, ತಾನು ಇದಕ್ಕಾಗಿಯೇ ಸಿದ್ಧಮಾಡಿಕೊಂಡಿದ್ದ ವಿವಿಧ ಪಾಪಗಳ ಮೇಲಿನ ಭಾಷಣ ಆರಂಭಿಸಿದರು ರೆವರೆಂಡ್ ವಿಲ್ಸನ್. ಅವರ ಭಾಷಣದ ಪೂರ್ತಿ ಕಳಂಕಪೂರಿತವಾದ ಆ ಅಕ್ಷರವನ್ನೇ ಮುಖ್ಯವಾಗಿಟ್ಟುಕೊಂಡು ಮಾತ ನಾಡಿದರು. ಅವರು ಮಾತನಾಡಿದ ಆ ಒಂದು ಘಂಟೆಯ ಹೊತ್ತೂ

ಜನರ ಮನಸ್ಸಿನಲ್ಲಿ ಭಯವುಂಟಾಯಿತು. ನರಕ ಕೂಪದ ಜ್ವಾಲೆಯಿಂದಲೇ ಆ ಅಕ್ಷರ ಕೆಂಪು ಬಣ್ಣವನ್ನು ತಾಳಿ ಬಂದಿರಬೇಕೆಂದು ಭಾವಿಸಿದರು. ಹೆಸ್ಟರ್ ಪ್ರೈನ್ ಮಾತ್ರ ನಿಸ್ತೇಜವಾದ ಕಣ್ಣುಗಳಿಂದ ಉದಾಸೀನವಾಗಿ ನೋಡುತ್ತಾ ವೇದಿಕೆಯ ಮೇಲೆ ನಿಂತಿದ್ದಳು. ಅವಳ ಹೃದಯ ಕಷ್ಟದಿಂದ ಪಾರಾಗಲು ಮೂರ್ಛೆ ಬೀಳುವ ಜಾತಿಗೆ ಸೇರಿದುದಲ್ಲ. ಇಂದ್ರಿಯಗಳೆಲ್ಲ ಎಚ್ಚರವಾಗಿದ್ದರೂ, ಮನಸ್ಸು ಮಾತ್ರ ಕಲ್ಲಾಗಿತ್ತು. ಅದರ ಆಸರೆಯಲ್ಲಿ ಅವಳ ಆತ್ಮಕ್ಕೆ ಕೊಂಚ ವಿಶ್ರಾಂತಿ ದೊರೆತಿತ್ತು. ಬೋಧಕನ ಕರುಣ ರಹಿತವಾದ ಮಾತಿನ ಗುಡುಗು ಕಿವಿಯ ಮೇಲೆ ಬೀಳುತ್ತಿತ್ತೇ ವಿನಹ, ಏನೂ ಅರ್ಥವಾಗುತ್ತಿರಲಿಲ್ಲ. ವಿಷಮ ಶಿಕ್ಷೆ ಮುಗಿಯುತ್ತಾ ಬಂದಂತೆ ಆ ಹಸುಳೆ ಅಳುವುದಕ್ಕೆ ಮೊದಲು ಮಾಡಿ ಕಿರಚತೊಡಗಿತು. ಅದನ್ನು ಸುಮ್ಮನಾಗಿಸುವುದಕ್ಕೆ ಪ್ರಯತ್ನಪಟ್ಟಳು. ಅದರ ಕಷ್ಟವನ್ನು ನೋಡಿ ಅನುಕಂಪ ತೋರುವಷ್ಟು ತಿಳಿವೂ ಅವಳಿಗಿಲ್ಲದೆ ಹೋಯಿತು. ಅವಳು ಜಡವಾಗಿ ನಿಂತಿರುವಾಗಲೇ ಅವಳನ್ನು ಸೆರೆಮನೆಯೊಳಕ್ಕೆ ಕರೆದೊಯ್ದರು. ಕಬ್ಬಿಣದ ಚಿಲಕ ಹಾಕಿದ ಸೆರೆಮನೆಯ ಬಾಗಿಲಿನ ಹಿಂದೆ ಎಲ್ಲರ ದೃಷ್ಟಿಯಿಂದ ಮಾಯವಾದಳು. ಅವಳು ಹೋದೆಡೆಗೇ ನೋಡುತ್ತಿದ್ದ ಕೆಲವರು ಕತ್ತಲಾದ ಸೆರೆಮನೆಯ ಒಳದಾರಿಯನ್ನು ಆ ಕೆಂಪು ಅಕ್ಷರ ತನ್ನ ಉರಿಗೆಂಪು ಬಣ್ಣ ಬೀರಿ ಬೆಳಗುತ್ತಿದೆ ಎಂದು ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳುತ್ತಿದ್ದರು.

೪

ಸೆರೆಮನೆಗೆ ಹಿಂದಿರುಗಿದ ಮೇಲೆ ಹೆಸ್ಟರ್ ಪ್ರೈನ್‌ಳ ಮನಸ್ಸು ಉದ್ರೇಕಗೊಂಡಿತ್ತು. ಯಾರಾದರೂ ಅವಳನ್ನು ಕಾಯುತ್ತಿರಬೇಕಾಗಿತ್ತು ಏಕೆಂದರೆ ಅವಳ ಅರೆ ಹುಚ್ಚಿನ ಸ್ಥಿತಿಯಲ್ಲಿ ತಾನೇ ಪೆಟ್ಟುಮಾಡಿಕೊಳ್ಳುತ್ತಿದ್ದಳು; ಇಲ್ಲವೇ ಹಸುಮಗುವಿಗೆ ಏನಾದರೂ ಹಾನಿಮಾಡುತ್ತಿದ್ದಳು. ರಾತ್ರಿಯಾದಂತೆ ಅವಳನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಕಷ್ಟವಾಯಿತು. ಬೈಗಳಿಗಾಗಲೀ, ಶಿಕ್ಷೆಯ ಭಯಕ್ಕಾಗಲೀ ಅವಳು ಹೆದರಲಿಲ್ಲ. ಸೆರೆಮನೆಯ ಅಧಿಪತಿಯಾದ ಬ್ರಾಕೆಟ್‌ಗೆ ಒಬ್ಬ ವೈದ್ಯನನ್ನು ಕರೆಸುವುದೇ ಉತ್ತಮವೆಂದು ತೋರಿತು. ಆ ವೈದ್ಯ ಕ್ರೈಸ್ತರ :ವೈದ್ಯಶಾಸ್ತ್ರದಲ್ಲಿ ಬಹಳ ಪ್ರವೀಣನಾಗಿದ್ದನಲ್ಲದೆ, ದೇಶೀಯರಾದ ಅನಾಗರಿಕ ಜನರಿಂದ ಗಿಡಮೂಲಿಕೆಗಳ ಉಪಯೋಗವನ್ನು ಕೂಡ ಚೆನ್ನಾಗಿ ಕಲಿತಿದ್ದ. ಹೆಸ್ಟರ್ ಪ್ರೈನ್‌ಳಿಗಿಂತ ಹೆಚ್ಚಾಗಿ ಅವಳ ಮಗುವಿಗೆ ವೈದ್ಯನ ಅವಶ್ಯಕತೆ ಅವಶ್ಯವಿತ್ತು. ಆ ಮಗು

ತನ್ನ ತಾಯ ಎದೆ ಹಾಲಿನ ಜೊತೆಗೆ, ಆಕೆಯ ದೇಹದಲ್ಲಿರುವ ಸಂಕ್ಷೋಭೆ, ದುಃಖ, ನಿರಾಶೆಗಳನ್ನೂ ಹೀರಿತ್ತು. ನೋವಿನಿಂದ ಕೈಕಾಲು ಬಡಿಯು ತ್ತಿತ್ತು. ಹೆಸ್ಟರ್ ಪ್ರೈನ್‌ನ ಆದಿನದ ಮನೋವೇದನೆಯೆಲ್ಲಾ ಆ ಮಗು ವಿನ ಕೈಕಾಲು ಸೆಳೆತದಲ್ಲಿ ಕಾಣುತ್ತಿತ್ತು.

ಗುಂಪಿನಲ್ಲಿ ಹೆಸ್ಟರ್ ಪ್ರೈನ್‌ಳ ದೃಷ್ಟಿಯನ್ನು ಸೆಳೆದಿದ್ದ ಆ ವ್ಯಕ್ತಿ ಸೆರೆ ಮನೆಯ ಅಧಿಕಾರಿಯ ಹಿಂದೆಯೇ ಬಂದ. ಅವನೂ ಕೂಡ ಸೆರೆಮನೆ ಯಲ್ಲಿಯೇ ಇದ್ದ. ಅಪರಾಧ ಮಾಡಿದುದರಿಂದಲ್ಲ; ನ್ಯಾಯಾಧೀಶರು ರೆಡ್ ಇಂಡಿಯನ್ ಪಂಗಡದೊಡನೆ ಸಂಧಾನ ನಡೆಸಿ ಅವನ ಬಿಡುಗಡೆಯ ಹಣವನ್ನು ತೀರ್ಮಾನ ಮಾಡುವವರೆಗೂ ಅವನನ್ನು ಇಡುವುದಕ್ಕೆ ಅದೇ ಅನುಕೂಲ ಸ್ಥಳವಾಗಿತ್ತು. ಆತನ ಹೆಸರು ರೋಜರ್ ಚಿಲಿಂಗ್‌ವರ್ತ್ ಎಂದು ತಿಳಿಯಬಂತು. ಅವನನ್ನು ಹೆಸ್ಟರ್ ಪ್ರೈನ್‌ಳ ಕೋಣೆಗೆ ಕರೆದು ಕೊಂಡು ಬಂದ ತಕ್ಷಣ ಅಲ್ಲಿ ಉಂಟಾದ ನಿಶ್ಶಬ್ದತೆಯನ್ನು ಕಂಡು ಸೆರೆ ಮನೆಯ ಅಧಿಪತಿಗೆ ಆಶ್ಚರ್ಯವಾಯಿತು. ಮಗುವು ಇನ್ನೂ ಸ್ವಲ್ಪ ಅಳು ತ್ತಿದ್ದರೂ ಹೆಸ್ಟರ್ ಪ್ರೈನ್ ಮಾತ್ರ ಸತ್ತವಳಂತೆ ನಿಶ್ಚೇಟಿತಳಾಗಿಬಿಟ್ಟಳು.

'ಅಯ್ಯಾ ರೋಗಿಯೊಡನೆ ನನ್ನೊಬ್ಬನನ್ನೇ ಬಿಟ್ಟು ನೀವು ಹೋಗಿ. ಇನ್ನು ಸ್ವಲ್ಪ ಹೊತ್ತಿನಲ್ಲೇ ಸೆರೆಮನೆ ನಿಶ್ಶಬ್ದವಾಗುವಂತೆ ನಾನು ಮಾಡು ತ್ತೇನೆ. ಹೆಸ್ಟರ್ ಪ್ರೈನ್ ಇನ್ನು ಮುಂದೆ ನ್ಯಾಯದ ಅಧಿಕಾರಕ್ಕೆ ತಲೆಬಾಗಿ ನಡೆಯುವಂತೆ ಮಾಡುವ ಜವಾಬ್ದಾರಿ ನನ್ನದು' ಎಂದ ವೈದ್ಯ.

'ತಾವು ಅಷ್ಟನ್ನು ಸಾಧಿಸಿಬಿಟ್ಟರೆ ನಿಜವಾಗಿಯೂ ತಾವು ಚತುರ ರೆಂದು ಖಂಡಿತ ಮಾಡಿಕೊಳ್ಳುತ್ತೇನೆ. ನಿಜವಾಗಿಯೂ ಈ ಹೆಂಗಸು ದೆವ್ವ ಹಿಡಿದವಳಂತೆ ಆಡುತ್ತಿದ್ದಾಳೆ. ಆ ಸೈತಾನನ್ನು ಓಡಿಸಬೇಕಾದರೆ ಕೊರಡೆ ಯಿಂದ ಹೊಡೆಯಬೇಕು' ಎಂದು ಉತ್ತರ ಕೊಟ್ಟ ಸೆರೆಮನೆಯ ಅಧಿಕಾರಿ.

ಆಗಂತುಕನು ವೈದ್ಯೋದ್ಯೋಗ ಸಹಜವಾಗಿ ಮಾತಿಲ್ಲದೆ ಕೋಣೆ ಯನ್ನು ಪ್ರವೇಶಿಸಿದ. ಸೆರೆಮನೆಯ ಅಧಿಕಾರಿ ತಮ್ಮಿಬ್ಬರನ್ನೇ ಬಿಟ್ಟು ಹೊರಟುಹೋದಾಗ ಕೂಡ ಅವನ ಮುಖಭಾವ ಬದಲಾಗಲಿಲ್ಲ. ಗುಂಪಿ ನಲ್ಲಿ ಅವನನ್ನೇ ನೋಡುತ್ತಿದ್ದ ಆಕೆಗೂ ಸಹ ತಮ್ಮಿಬ್ಬರ ನಿಕಟ ಬಾಂಧವ್ಯ ಅರಿವಾಗಿತ್ತು. ಮೊದಲು ಅವನ ಗಮನ ಸೆಳೆದುದು, ಒರಟಾದ ಹಾಸಿಗೆಯ ಮೇಲೆ ಮಲಗಿ ಕೈಕಾಲು ಬಡಿಯುತ್ತಾ ಕಿರಿಚುತ್ತಿದ್ದ ಆ ಮಗು. ಅದನ್ನು ಸಮಾಧಾನಪಡಿಸುವುದು ಅವನ ಮೊದಲ ಕರ್ತವ್ಯವಾಗಿತ್ತು. ಮಗುವನ್ನು ಹುಷಾರಾಗಿ ಪರೀಕ್ಷೆ ಮಾಡಿ, ತನ್ನ ಅಂಗಿಯಲ್ಲಿ ಅಡಗಿಟ್ಟುಕೊಂಡಿದ್ದ

ಚರ್ಮದ ಚೀಲವೊಂದನ್ನು ಹೊರಕ್ಕೆ ತೆಗೆದ. ಅದರಲ್ಲಿದ್ದ ಔಷಧಗಳಲ್ಲಿ ಒಂದನ್ನು ತೆಗೆದು ಒಂದು ಲೋಟ ನೀರಿಗೆ ಬೆರಸಿ,

'ಬಹಳ ಹಿಂದೆ ನಾನು ಕಲಿತ ರಸತಂತ್ರ ಮತ್ತು ಈ ಒಂದು ವರ್ಷಕ್ಕೆ ಮೇಲ್ಪಟ್ಟು ಗಿಡಮೂಲಿಕೆ ವೈದ್ಯವನ್ನರಿತ ಜನರೊಡನಿದ್ದುದರಿಂದ ಪ್ರಶಸ್ತಿ ಪಡೆದ ವೈದ್ಯನಿಗಿಂತ ಉತ್ತಮವಾದ ವೈದ್ಯನಾಗಿದ್ದೇನೆ. ಇಲ್ಲಿ ನೋಡು, ಈ ಮಗು ನಿನ್ನದು, ನನ್ನದಲ್ಲ. ನನ್ನ ದನಿಯಾಗಲಿ, ಆಕಾರವಾಗಲಿ ತನ್ನ ತಂದೆಯದು ಎಂದು ಅವಳು ಹೇಳಿಕೊಳ್ಳುವ ಹಾಗಿಲ್ಲ. ಆದ್ದರಿಂದ ಈ ಔಷಧವನ್ನು ನಿನ್ನ ಕೈಯಿಂದಲೇ ಅದಕ್ಕೆ ಕುಡಿಸಿಬಿಡು.

ಹೆಸ್ಟರ್ ಔಷಧವನ್ನು ತಿರಸ್ಕರಿಸಿ, ಭಯ ತುಂಬಿದ ಕಣ್ಣುಗಳಿಂದ ಅವನ ಮುಖವನ್ನೇ ನೋಡುತ್ತ ಹೇಳಿದಳು—'ನಿರ್ದೋಷಿಯಾದ ಆ ಮಗುವಿನ ಮೇಲೆ ಸೇಡು ತೀರಿಸಿಕೊಳ್ಳುತ್ತೀರಾ ? '

'ಅಯ್ಯೋ ಹುಚ್ಚಿ! ನಿನ್ನ ಪಾಪದಿಂದ ಹುಟ್ಟಿದ ಆ ಕ್ಷುದ್ರ ಮಗುವಿಗೆ ನಾನೇಕೆ ಕೆಡಕು ಮಾಡಲಿ? ಈ ಔಷಧಿ ಒಳ್ಳೆಯದನ್ನು ಮಾಡುತ್ತದೆ. ಒಂದು ವೇಳೆ ಆ ಮಗು ನನ್ನದಾಗಿದ್ದರೂ—ನನ್ನದೇ, ಹಾಗೂ ನಿನ್ನದು—ಇದಕ್ಕಿಂತ ಒಳ್ಳೆಯದನ್ನು ಮಾಡುವುದಕ್ಕಾಗುವುದಿಲ್ಲ.'

ಮನಸ್ವಾಸ್ಥ್ಯವಿಲ್ಲದ್ದರಿಂದ ಅವಳಿನ್ನೂ ಹಿಂದುಮುಂದು ನೋಡುತ್ತಿದ್ದಳು. ಅವನೇ ಮಗುವನ್ನೆತ್ತಿಕೊಂಡು ಅದಕ್ಕೆ ಔಷಧಿಯನ್ನು ಕುಡಿಸಿದ. ಪರಿಣಾಮಕಾರಿಯಾದ ಆ ಔಷಧಿ ತಕ್ಷಣ ಕೆಲಸ ಮಾಡಲು ತೊಡಗಿ ವೈದ್ಯನ ಮಾತು ದಿಟವೆಂಬುದನ್ನು ತೋರಿಸಿಕೊಟ್ಟಿತು. ಸ್ವಲ್ಪ ಹೊತ್ತಿನಲ್ಲೇ ಮಗುವಿನ ನರಳಾಟ ಕಡಮೆಯಾಗಿ ಕೈಕಾಲು ಸೆಳೆತ ನಿಂತಿತು. ಮಕ್ಕಳ ಸ್ವಭಾವಕ್ಕನುಗುಣವಾಗಿ ನೋವು ನಿಂತ ಕೂಡಲೇ ಜೊಂಪುಹತ್ತಿ ಮಗು ನಿದ್ದೆ ಮಾಡಿಬಿಟ್ಟಿತು. ಅನಂತರ ಆ ವೈದ್ಯ ಮಗುವಿನ ತಾಯಿಯನ್ನು ಗಮನಿಸಿದನು. ಶಾಂತನಾಗಿ ನಾಡಿ ಹಿಡಿದು ನೋಡಿದ ಅವಳ ಕಣ್ಣನ್ನೇ ದೃಷ್ಟಿಸಿ ನೋಡಿದ. ಹೊಸದಲ್ಲದಿದ್ದರೂ ಕಠಿಣವಾದ ಆ ನೋಟದಿಂದ ಅವಳ ಹೃದಯ ನಡುಗಿ ಮುದುರಿಕೊಂಡಿತು. ಸೂಕ್ಷ್ಮವಾಗಿ ಅವಳನ್ನು ಪರೀಕ್ಷಿಸಿ ಸಮಾಧಾನಗೊಂಡು ಆತ ಇನ್ನೊಂದು ಔಷಧಿಯನ್ನು ಮಿಶ್ರಮಾಡತೊಡಗಿದ.

'ನನಗೆ ವಿಸ್ಮೃತಿಯಾಗಲಿ, ದುಃಖವಿಸ್ಮಾರಕವಾಗಲಿ ಗೊತ್ತಿಲ್ಲ. ಆದರೆ ನಾನು ಕಾಡಿನಲ್ಲಿದ್ದಾಗ ಅನೇಕ ಹೊಸಗುಟ್ಟುಗಳನ್ನು ಕಲಿತಿದ್ದೇನೆ. ಅದರಲ್ಲಿ ಇದೊಂದು. ನಾನು ಹೇಳಿಕೊಟ್ಟ ಪಾಠಕ್ಕೆ ಪ್ರತಿಯಾಗಿ ಒಬ್ಬ

ರೆಡ್ ಇಂಡಿಯನ್ ನನಗೆ ಇದನ್ನು ಹೇಳಿಕೊಟ್ಟ. ಇದನ್ನು ಕುಡಿ. ಇದು ಪಾಪರಹಿತ ಮನಸ್ಸಿನಷ್ಟು ಶಾಂತಿಯನ್ನು ದೊರಕಿಸಿಕೊಡಲಾರದು. ಅದನ್ನು ಕೊಡುವುದಕ್ಕೂ ನನ್ನ ಕೈಲಾಗುವುದಿಲ್ಲ. ಅಬ್ಬರಿಸುತ್ತಿರುವ ಸಮುದ್ರದ ಅಲೆಗಳ ಮೇಲೆ ಎಣ್ಣೆ ಸುರಿದಂತೆ, ನಿನ್ನ ಮನಸ್ಸಿನ ಉದ್ವೇಗ ವನ್ನು ಕಡಮೆ ಮಾಡುತ್ತದೆ ಇದು' ಎಂದ ಆತ.

ಬಟ್ಟಲನ್ನು ಆತ ಹೆಸ್ಟರ್ ಪ್ರೈನ್‌ಳಿಗೆ ಕೊಟ್ಟ. ಹೆದರಿಕೆಯಿಲ್ಲ ದಿದ್ದರೂ, ಅವನ ಉದ್ದೇಶವೇನಿರಬಹುದು ಎಂಬುದನ್ನರಿಯಲು ಪ್ರಶ್ನಿಸು ವಂತೆ ಆವನ ಮುಖವನ್ನೇ ದಿಟ್ಟಿಸಿ ನೋಡುತ್ತಾ ಆ ಬಟ್ಟಲನ್ನು ಕೈಗೆ ತೆಗೆದುಕೊಂಡಳು. ನಿದ್ರಿಸುತ್ತಿರುವ ಮಗುವಿನತ್ತ ದೃಷ್ಟಿ ಹಾಯಿಸಿದಳು.

'ನಾನು ಸಾವನ್ನು ಕುರಿತು ಯೋಚಿಸಿದ್ದೇನೆ, ಅದನ್ನು ಬಯಸಿ ದ್ದೇನೆ. ನನ್ನಂತಹವಳು ಪ್ರಾರ್ಥನೆ ಮಾಡಬಹುದಾದರೆ, ಆದಕ್ಕಾಗಿ ಪ್ರಾರ್ಥಿಸಲೂ ಸಿದ್ಧ, ಈ ಬಟ್ಟಲನ್ನು ಬಾಯಿಗೆ ತಂದಿದ್ದೇನೆ. ಈ ಬಟ್ಟ ಲಲ್ಲೇ ನನಗೆ ಮೃತ್ಯುವಿದ್ದರೆ ನಾನು ಕುಡಿಯುವ ಮುನ್ನ ಮತ್ತೊಂದು ಬಾರಿ ಯೋಚಿಸಿ' ಎಂದಳು.

ಆತ ಗಡಸು ದನಿಯಲ್ಲೇ ಉತ್ತರ ಕೊಟ್ಟ—'ಹಾಗಾದರೆ ಕುಡಿದು ಬಿಡು. ಇಷ್ಟೇನೇ ನೀನು ನನ್ನನ್ನು ಅರಿತಿರುವುದು? ನನ್ನ ಉದ್ದೇಶ ಅಷ್ಟು ಕೀಳುತರವಾದದ್ದೇ? ನಿನ್ನ ಮೇಲೆ ಸೇಡು ತೀರಿಸಿಕೊಳ್ಳಲೇಬೇಕೆಂಬ ಉದ್ದೇಶವಿದ್ದರೆ, ನೀನು ಬದುಕಿರುವುದಕ್ಕಿಂತ ಹೆಚ್ಚೇನನ್ನು ಬಯಸಬಲ್ಲೆ ನಾನು? ನಿನಗೆ ಔಷಧಿಗಳನ್ನು ಕೊಟ್ಟು ಯಾವ ಅಪಾಯವೂ ಪ್ರಾಣ ಭಯವೂ ಇಲ್ಲದಂತೆ ಮಾಡಿ, ಈ ಉರಿಯುತ್ತಿರುವ ಕಳಂಕ ನಿನ್ನೆದೆಯ ಮೇಲೆ ಜ್ವಾಲೆಯಾಗುವುದಕ್ಕಿಂತ ಮತ್ತೇನನ್ನು ಬಯಸಬಲ್ಲೆ?' ಮಾತ ನಾಡುತ್ತಿದ್ದಂತೆ ತನ್ನ ನೀಳವಾದ ಬೆರಳನ್ನು ಆ ಕೆಂಪು ಅಕ್ಷರದ ಮೇಲೆ ಊರಿದ. ಹೆಸ್ಟರ್ ಪ್ರೈನ್‌ಳ ಎದೆಯಲ್ಲಿ ಕಾದ ಕಬ್ಬಿಣ ನುಗ್ಗಿ ಸುಟ್ಟಷ್ಟು ಉರಿಯಾಯಿತು. ಅವಳು ಬೆಚ್ಚಿ ಬಿದ್ದುದನ್ನು ಕಂಡು ನಸುನಗುತ್ತಾ ತನ್ನ ಮಾತನ್ನು ಮುಂದುವರಿಸಿದ—'ಆದ್ದರಿಂದ ಬದುಕಿರು. ಜನರೆಲ್ಲರ ಕಣ್ಣಲ್ಲಿ, ನೀನು ಒಮ್ಮೆ ಗಂಡನೆಂದು ಕರೆದಾತನ ಕಣ್ಣಲ್ಲಿ, ಆ ಮಗುವಿನ ಕಣ್ಣಲ್ಲಿ ನಿನ್ನ ಕಳಂಕವನ್ನು ಹೊತ್ತು ಬಾಳು. ಅದಕ್ಕಾಗಿ ನೀನು ಬದುಕಿರ ಬೇಕಾದರೆ ಈ ಔಷಧವನ್ನು ಕುಡಿದು ಬಿಡು.'

ಹೆಸ್ಟರ್ ಪ್ರೈನ್ ತಡಮಾಡದೆ ಬಟ್ಟಲನ್ನು ಬರಿದು ಮಾಡಿದಳು. ವೈದ್ಯನ ಸಂಜ್ಞೆಯಂತೆ ಮಗು ಮಲಗಿದ್ದ ಹಾಸುಗೆಯ ಮೇಲೆ ಕುಳಿತಳು.

ಆತ ಕೋಣೆಯಲ್ಲಿದ್ದ ಒಂಟಿ ಕುರ್ಚಿಯನ್ನು ಎಳೆದುಕೊಂಡು ಅವಳ ಪಕ್ಕ ದಲ್ಲಿ ಕುಳಿತ. ಈ ಸಿದ್ಧತೆಗಳನ್ನೆಲ್ಲಾ ಕಂಡು ಅವಳ ಮನ ನಡುಗಿತು, ಏಕೆಂದರೆ ಮಾನವನ ಸಹಜವಾದ ಬುದ್ಧಿಯಿಂದ ಅವಳ ಶರೀರದ ನೋವು ಕಡಮೆ ಮಾಡಿದ ನಂತರ, ಘೋರವಾಗಿ, ಸರಿಪಡಿಸಲಾಗದಂತೆ ತನಗೆ ಅನ್ಯಾಯ ಮಾಡಿದ ಅವಳನ್ನು ಕಾಣಬೇಕಾದ ರೀತಿಯಲ್ಲಿ ವ್ಯವಹರಿಸುವ ನೆಂದು ಅವಳಿಗೆ ಅನ್ನಿಸಿತು.

'ಹೆಸ್ಟರ್, ನೀನು ಇಲ್ಲಿ, ಏಕೆ ಈ ಪಾಪಕೂಪಕ್ಕೆ ಬಿದ್ದೆ ಅಥವಾ ಕಳಂಕಪೂರಿತವಾದ ಆ ವೇದಿಕೆಯನ್ನು ಏಕೆ ಹತ್ತಿದೆ ಎಂದು ನಾನು ಕೇಳು ವುದಿಲ್ಲ. ಅದಕ್ಕೆ ಕಾರಣ ಬಹಳ ದೂರ ಹುಡುಕಬೇಕಾಗಿಲ್ಲ. ಅದು ನನ್ನ ತಪ್ಪು, ನಿನ್ನ ದೌರ್ಬಲ್ಯ. ಸದಾ ಜ್ಞಾನಾರ್ಜನೆಯಲ್ಲಿಯೇ ತೊಡಗಿ, ದೊಡ್ಡ ದೊಡ್ಡ ಪುಸ್ತಕಭಂಡಾರಗಳಲ್ಲಿ ಪುಸ್ತಕ ಪಿಶಾಚಿಯಾಗಿ, ಯೌವ್ವನ ವನ್ನೆಲ್ಲಾ ಜ್ಞಾನಾರ್ಜನೆಯ ಕನಸಿನ ತೃಷೆಗೆ ಆಹುತಿ ಮಾಡಿ, ಇಳಿವಯಸ್ಸಿ ನಲ್ಲಿದ್ದ ನನಗೆ ನಿನ್ನ ಯೌವ್ವನ, ರೂಪಗಳಿಂದ ಏನಾಗಬೇಕಾಗಿತ್ತೋ ಕಾಣೆ. ಹುಟ್ಟುವಾಗಲೇ ವಿಕಲಾಂಗನಾದ ನಾನು, ಪಾಂಡಿತ್ಯ, ತರುಣಿಯ ದೃಷ್ಟಿಯಲ್ಲಿ ದೇಹವಿಕಾರವನ್ನು ಮುಚ್ಚಿಬಿಡಬಲ್ಲುದೆಂದು ಏಕಾದರೂ ಮೋಸ ಹೋದೇನೋ! ಜನ ನನ್ನನ್ನು ಬುದ್ಧಿವಂತ ಅನ್ನುತ್ತಾರೆ. ಮಹಾಜ್ಞಾನಿ ಗಳೆಂಗಾದರೂ ಪ್ರಾಜ್ಞರಾಗಿದ್ದ ಪಕ್ಷಕ್ಕೆ ನಾನು ಇವನ್ನೆಲ್ಲಾ ಮುಂಗಾಣು ತ್ತಿದೆ. ವಿಸ್ತಾರವಾದ, ಕತ್ತಲು ಕವಿದ ಆ ಕಾಡಿನಿಂದ ಕ್ರಿಶ್ಚಿಯನ್ನರು ನೆಲೆಸಿರುವ ಈ ಸ್ಥಳಕ್ಕೆ ಬರುತ್ತಲೇ, ಎಲ್ಲ ಜನರೆದುರಿಗೆ ಕಳಂಕದ ಪ್ರತಿಮೆ ಯಾಗಿ ನಿಂತಿರುವ ಹೆಸ್ಟರ್ ಪ್ರೈನ್‌ಳೇ ಮೊದಲು ನನ್ನ ಕಣ್ಣಿಗೆ ಬೀಳುತ್ತಾ ಳೆಂದು ನನಗೆ ತಿಳಿಯಬೇಕಾಗಿತ್ತು. ಅಷ್ಟೇ ಅಲ್ಲ, ನವದಂಪತಿಗಳಾಗಿ ನಾವಿಬ್ಬರೂ ಚರ್ಚಿನ ಮೆಟ್ಟಲುಗಳನ್ನು ಇಳಿದು ಬರುತ್ತಿರುವಾಗಲೇ, ದಾರಿಯ ತುಟ್ಟ ತುದಿಯಲ್ಲಿ ಈ ಕೆಂಪು ಅಕ್ಷರದ ಬೆಂಕಿ ಜ್ವಾಲೆಯಾಗಿ ಉರಿಯುತ್ತಿರುವುದು ನನ್ನ ಕಣ್ಣಿಗೆ ಕಾಣಬೇಕಾಗಿತ್ತು!' ಎಂದ.

ಮೊದಲೇ ಕೊರಗುತ್ತಿದ್ದ ಅವಳಿಗೆ, ಆವನು ಕೊನೆಯಲ್ಲಾಡಿದ ಮಾತಿನಿಂದ ತನ್ನ ಅಪಮಾನದ ಗಾಯದ ಮೇಲೆ ಬರೆಯಿಟ್ಟುದು ಅವಳಿಗೆ ಸಹಿಸಲಸದಳವಾಯಿತು.

'ನಿಮಗೇ ಗೊತ್ತಿರುವಂತೆ ನಾನು ನಿಮ್ಮಲ್ಲಿ ಮುಚ್ಚುಮರೆ ಮಾಡ ಲಿಲ್ಲ. ನಿಮಗಾಗಿ ನನ್ನಲ್ಲಿ ಪ್ರೇಮವೂ ಇರಲಿಲ್ಲ; ಪ್ರೇಮವಿತ್ತೆಂದು ನಾನು ನಟಿಸಲೂ ಇಲ್ಲ' ಎಂದಳು.

'ನಿಜ, ಎಲ್ಲ ನನ್ನ ತಪ್ಪು. ನಾನು ಅದನ್ನು ಒಪ್ಪಿಕೊಂಡಿದ್ದೇನಲ್ಲ. ಆದರೆ ನನ್ನ ಜೀವಮಾನದ ಆ ಹೊಸಯುಗ ಆರಂಭವಾಗುವವರೆಗೂ ನನ್ನ ಬಾಳು ನಿರರ್ಥಕವಾಗಿತ್ತು. ಪ್ರಪಂಚ ನೀರಸವಾಗಿತ್ತು. ನನ್ನ ಹೃದಯ ಮಂದಿರ ಅನೇಕರು ಮನೆ ಮಾಡಿಕೊಳ್ಳುವಷ್ಟು ವಿಶಾಲವಾಗಿತ್ತು. ಒಂಟಿಯಾಗಿ, ಮನೆ ಬೆಳಗುವ ಬೆಂಕಿಯಿಲ್ಲದೆ ಕೊರೆಯುತ್ತಿತ್ತು. ಅದು ಅಷ್ಟೇನು ಹುಚ್ಚು ಕನಸಾಗಿರಲಿಲ್ಲ. ನಾನು ಮುದುಕನಾಗಿದ್ದೆ, ಮುದುಕನಾಗಿದ್ದೆ, ವಿಕಲಾಂಗನಾಗಿದ್ದೆ, ನಿಜ, ಆದರೂ ಚೆಲ್ಲಾಪಿಲ್ಲಿಯಾಗಿ ದೂರ ದೂರ ಬಿದ್ದಿರುವ ಸೌಖ್ಯವನ್ನು ಮಾನವ ಕುಲ ಹುಡುಕಿ ಸೇರಿಸಿ ಪಡುವ ಸುಖದ ತೃಪ್ತಿ ನನಗೂ ಲಭಿಸಬಹುದೆಂದು ಭಾವಿಸಿದ್ದೆ. ಆದರಿಂದಲೇ ಹೆಸ್ಟರ್ ನಿನ್ನನ್ನು ನನ್ನ ಹೃದಯದೊಳಕ್ಕೆ ಸೇರಿಸಿಕೊಂಡೆ. ಅದರ ಅಂತರಾಳದಲ್ಲಿರುವ ಕೋಣೆಯಲ್ಲಿ ನಿನ್ನನ್ನು ಹುದುಗಿಸಿಟ್ಟುಕೊಂಡು, ನಿನ್ನಿಂದಲೇ ಉಂಟಾದ ಶಾಖದಿಂದ ನಿನ್ನನ್ನು ಬೆಚ್ಚಗಿಡಲು ಪ್ರಯತ್ನಪಟ್ಟೆ' ಎಂದ.

'ನಿಮಗೆ ನಾನು ಬಹಳ ಅನ್ಯಾಯ ಮಾಡಿಬಿಟ್ಟೆ' ಮೇಲುದನಿಯಲ್ಲಿ ನುಡಿದಳು ಹೆಸ್ಟರ್.

'ನಾವು ಒಬ್ಬರಿಗೊಬ್ಬರು ಅನ್ಯಾಯ ಮಾಡಿದ್ದೇವೆ. ನನ್ನದೇ ಮೊದಲ ತಪ್ಪು. ನಶಿಸಿ ಹೋಗುತ್ತಿರುವ ನನ್ನ ಮುದಿತನಕ್ಕೆ ಪ್ರಕೃತಿ ವಿರುದ್ಧವಾಗಿ, ಗಂಟು ಹಾಕಿ, ಮೊಗೊಡೆಯುತ್ತಿರುವ ನಿನ್ನ ಯವ್ವನಕ್ಕೆ ಅನ್ಯಾಯ ಮಾಡಿದೆ. ಜ್ಞಾನವನ್ನೂ ವೇದಾಂತವನ್ನೂ ಅನವಶ್ಯಕವಾಗಿ ಅಭ್ಯಾಸ ಮಾಡಿಲ್ಲವಾದ ಕಾರಣ ನನಗೆ ಸೇಡಿನ ಇಚ್ಛೆಯಿಲ್ಲ, ನಿನಗೆ ಯಾವ ಕೆಡಕನ್ನೂ ಬಯಸುವುದಿಲ್ಲ. ನಮ್ಮಿಬ್ಬರ ಮಟ್ಟಿಗೆ ತಕ್ಕಡಿ ಹೆಚ್ಚು ಕಡಿಮೆ ಒಂದೆ ಸಮನಾಗಿ ತೂಗುತ್ತಿದೆ. ಆದರೆ ಹೆಸ್ಟರ್, ನಮ್ಮಿಬ್ಬರಿಗೂ ಅನ್ಯಾಯ ಮಾಡಿರುವ ಮನುಷ್ಯ ಇನ್ನೂ ಬದುಕಿದ್ದಾನೆ. ಯಾರು ಅವನು?'

'ನನ್ನನ್ನು ಕೇಳಬೇಡಿ. ಅದು ನಿಮಗೆ ಖಂಡಿತ ತಿಳಿಯುವುದೂ ಇಲ್ಲ!' ಅವನ ಮುಖವನ್ನೇ ದಿಟ್ಟಿಸುತ್ತಾ ಹೇಳಿದಳು ಹೆಸ್ಟರ್.

ಸ್ವಾವಲಂಬನದ ಗರ್ವದಿಂದ ನಸುನಗುತ್ತಾ 'ಖಂಡಿತ ಇಲ್ಲ, ಎಂದು ಹೇಳುತ್ತೀಯ? ಖಂಡಿತ ಅವನಾರೆಂದು ತಿಳಿದುಕೊಳುವುದಕ್ಕಾಗುವುದಿಲ್ಲವೇ? ಬಾಹ್ಯ ಪ್ರಪಂಚದಲ್ಲಾಗಲೀ, ಅಗೋಚರವಾದ ಭಾವನಾ ಪ್ರಪಂಚದಲ್ಲಾಗಲೀ, ಹಿಂದೆಗೆಯದೆ ಮನಸಿಟ್ಟು ಆ ರಹಸ್ಯವನ್ನು ಭೇದಿಸಲು ಮೀಸಲಾದವನಿಗೆ ಯಾವುದೂ ಅಸಾಧ್ಯವಲ್ಲ. ನಿನ್ನ ರಹಸ್ಯ

ವನ್ನು ನೀನು ಹುಡುಕಿ ನೋಡುತ್ತಿರುವ ಜನರಿಂದ ಮುಚ್ಚಿಟ್ಟುಕೊಳ್ಳ ಬಹುದು. ಇಂದು ವೇದಿಕೆಯ ಮೇಲೆ ನಿಂತಿದ್ದಾಗ ನಿನ್ನ ಪಾಪದಲ್ಲಿ ಪಾಲುಗಾರನಾದವನ ಹೆಸರನ್ನು ಹೇಳಲು ನಿರಾಕರಿಸಿದಂತೆ, ನ್ಯಾಯಾಧೀಶರಿಂದಲೂ, ಪಾದ್ರಿಗಳಿಂದಲೂ ಮುಚ್ಚಿಟ್ಟುಕೊಳ್ಳಬಹುದು. ಆದರೆ ನಾನು ಅವರಿಗಿಂತ ಹೆಚ್ಚಾಗಿ ಬುದ್ಧಿಯಿಟ್ಟುಕೊಂಡು ಇದರ ವಿಚಾರಣೆಗೆ ತೊಡಗುತ್ತಿದ್ದೇನೆ. ಗ್ರಂಥಗಳಲ್ಲಿ ಸತ್ಯವನ್ನರಸಿದಂತೆ, ರಸತಂತ್ರದಿಂದ ಚಿನ್ನವನ್ನು ಸಾಧಿಸಿದಂತೆ, ಈ ಮನುಷ್ಯನನ್ನೂ ಖಂಡಿತವಾಗಿ ಪತ್ತೆ ಮಾಡುತ್ತೇನೆ. ಅವನ ಅರಿವಾಗುವಂತಹ ಅನುವೇದನೆ ನನ್ನಲ್ಲಿದೆ. ಅವನು ನನ್ನನ್ನು ನೋಡಿ ನಗುತ್ತಾನೆ. ನನ್ನಷ್ಟಕ್ಕೇ ನಾನೇ ಬೆಚ್ಚಿ ಬೀಳುತ್ತೇನೆ. ಇಂದೋ ನಾಳೆಯೋ ಖಂಡಿತ ಅವನು ನನಗೆ ಸಿಕ್ಕಿಯೇ ಸಿಕ್ಕುತ್ತಾನೆ!' ಎಂದ.

ಆ ಮುದಿ ವಿದ್ವಾಂಸನ ಕಣ್ಣುಗಳು ಅವಳನ್ನು ದಹಿಸುತ್ತಿತ್ತು. ಹೆಸ್ಟರ್ ಪ್ರೈನ್ ತನ್ನೆದೆಯಲ್ಲಿರುವ ರಹಸ್ಯವನ್ನು ಎಲ್ಲಿ ಕಂಡು ಬಿಡುತ್ತಾನೆಯೋ ಎನ್ನುವ ಭಯದಿಂದ ತನ್ನೆದೆಯ ಮೇಲೆ ಕೈಯ್ಯಿಟ್ಟುಕೊಂಡಳು.

'ಹಾಗಾದರೆ ನೀನು ಅವನ ಹೆಸರನ್ನು ಹೇಳುವುದಿಲ್ಲವೋ? ಚಿಂತೆಯಿಲ್ಲ, ಅವನು ನನಗೆ ಸಿಕ್ಕುತ್ತಾನೆ.' ವಿಧಿ ತನ್ನ ಕೈಯಲ್ಲಿಯೇ ಇರುವಂತೆ ಧೈರ್ಯದಿಂದ ತನ್ನ ಮಾತನ್ನು ಮುಂದುವರಿಸುತ್ತ 'ಅವನ ಅಂಗಿಯ ಮೇಲೆ ಕಳಂಕದ ಚಿಹ್ನೆಯನ್ನು ನಿನ್ನಂತೆ ಅವನು ಹೊಲಿದುಕೊಂಡಿಲ್ಲ. ಆದರೆ ಆದನ್ನು ಅವನ ಹೃದಯದ ಮೇಲೆ ನಾನು ಓದಬಲ್ಲೆ. ಅವನಿಗಾಗಿ ನೀನು ಭಯಪಡಬೇಕಾಗಿಲ್ಲ. ದೇವರು ಕೊಡುವ ಶಿಕ್ಷೆಗೆ ನಾನು ಅಡ್ಡ ಬರುತ್ತೇನೆಂದಾಗಲೀ ಅಥವಾ ಮಾನವನ ಕಾನೂನಿನ ವಶಕ್ಕೆ ಕೊಟ್ಟು ನಾನೇ ನಷ್ಟಮಾಡಿಕೊಳ್ಳುತ್ತೇನೆಂದಾಗಲೀ ಭಾವಿಸಬೇಡ. ನನ್ನ ಊಹೆಯಂತೆ ಅವನು ಗೌರವಸ್ಥನೆಂಬ ಹೆಸರಿರುವವನಾದರೆ, ಅವನ ಪ್ರಾಣಕ್ಕಾಗಲೀ ಹಾನಿಯನ್ನುಂಟುಮಾಡುತ್ತೇನೆಂದೂ ಭಾವಿಸಬೇಡ. ಅವನು ಬದುಕಿರಲಿ, ಬಾಹ್ಯಗೌರವದ ಮರೆಯಲ್ಲಿ ಬಾಳುವುದಾದರೆ ಬಾಳಲಿ! ಹೇಗಾದರೂ ಅವನು ನನ್ನ ವಶನಾಗುತ್ತಾನೆ.'

'ನಿಮ್ಮ ಕಾರ್ಯಗಳು ಕನಿಕರ ಪೂರಿತವಾದವು. ಆದರೆ ನಿಮ್ಮ ಮಾತುಗಳು ಭಯೋತ್ಪಾದನೆ ಮಾಡುತ್ತವೆ' ದಿಕ್ಕು ತೋರದೆ ಗಾಬರಿಯಿಂದ ನುಡಿದಳು ಹೆಸ್ಟರ್.

'ನೀನು ಒಮ್ಮೆ ನನ್ನ ಹೆಂಡತಿಯಾಗಿದ್ದರಿಂದ ನಿನಗೆ ಆಜ್ಞೆ ಮಾಡು

ತ್ತೇನೆ. ನೀನು ನಿನ್ನ ಪ್ರಿಯನ ರಹಸ್ಯವನ್ನು ಭದ್ರವಾಗಿಟ್ಟದ್ದೀಯೆ. ಅಂತೆಯೇ ನನ್ನದನ್ನೂ ಇಟ್ಟುಕೊ. ಈ ದೇಶದಲ್ಲಿ ಯಾರಿಗೂ ನನ್ನ ಪರಿಚಯವಿಲ್ಲ. ನಾನು ನಿನ್ನ ಗಂಡನಾಗಿದ್ದನೆಂಬ ಸುದ್ದಿಯನ್ನು ಒಂದು ನರಪಿಳ್ಳೆಗೂ ಉಸುರಕೂಡದು. ಇಲ್ಲಿ, ಭೂಮಿಯ ಅಂಚಿನಲ್ಲಿ ತಳವೂರು ತ್ತಿದ್ದೇನೆ. ಮಾನವ ವ್ಯವಹಾರದಿಂದ ದೂರವಾಗಿ ಅಲೆಯುತ್ತಿರಬೇಕಾದ ನಾನು, ನನ್ನೊಡನೆ ನಿಕಟ ಬಾಂಧವ್ಯದಿಂದಿರುವ ಒಬ್ಬ ಹೆಂಗಸು, ಒಬ್ಬ ಗಂಡಸು, ಒಂದು ಮಗು ಇವರನ್ನು ಕಾಣುತ್ತಿದ್ದೇನೆ. ಪ್ರೀತಿಯೋ ದ್ವೇಷವೋ, ನ್ಯಾಯವೋ, ಅನ್ಯಾಯವೋ, ಚಿಂತೆಯಿಲ್ಲ. ನೀನು ಮತ್ತು ನಿನಗೆ ಸಂಬಂಧಪಟ್ಟದ್ದೆಲ್ಲಾ ನನಗೆ ಸೇರಿದ್ದು. ನೀನೂ ಅವನು ಇರು ವಲ್ಲಿಯೇ ನನ್ನ ಮನೆ. ನನ್ನನ್ನು ವಂಚಿಸಬೇಡ !'

'ಇದನ್ನು ಯಾತಕ್ಕೆ ಬಯಸುತ್ತೀರಿ? ಧೈರ್ಯವಾಗಿ ಎಲ್ಲರಿಗೂ ತಿಳಿಸಿ, ಈ ಕ್ಷಣವೇ ನನ್ನನ್ನೇಕೆ ಹೊರದೂಡಬಾರದು' ಕಟ್ಟೆಗೆ ಒಪ್ಪಿ ಕೊಳ್ಳಲು ಹಿಂಜರಿಯುತ್ತಾ ಹೆಸ್ಟರ್ ಕೇಳಿದಳು.

'ದ್ರೋಹಿಯಾದ ಹೆಂಗಸಿನ ಗಂಡನೆಂದು ನನಗೆ ಅಪಮಾನವಾಗ ದಿರಲೆಂದಿರಬಹುದು. ಬೇರೆ ಕಾರಣಗಳಿರಬಹುದು. ಇಷ್ಟು ಸಾಕು. ಅನಾಮಿಕನಾಗಿ ಬದುಕಿದ್ದು ಸಾಯುವುದೇ ನನ್ನ ಉದ್ದೇಶ. ಜಗತ್ತಿನ ದೃಷ್ಟಿಯಲ್ಲಿ ನಿನ್ನ ಗಂಡ ಸತ್ತಂತಿರಲಿ. ಅವನ ಸುದ್ದಿಯೂ ಕೂಡ ಜನದ ಕಿವಿಗೆ ಬೀಳುವುದಿಲ್ಲ. ನೋಟದಿಂದಾಗಲಿ, ಮಾತಿನಿಂದಾಗಲಿ ನನ್ನನ್ನು ಗುರುತಿಸಬೇಡ. ಎಲ್ಲಕ್ಕಿಂತ ಹೆಚ್ಚಾಗಿ ನೀನು ಪ್ರೀತಿಸುವ ಆ ಮನುಷ್ಯ ನಿಗೆ ಈ ರಹಸ್ಯವನ್ನು ಉಸರಲೂ ಕೂಡದು. ನನ್ನ ಈ ಮಾತನ್ನು ನೀನು ನಡೆಸಿಕೊಡದಿದ್ದಲ್ಲಿ ಅವನ ಖ್ಯಾತಿ, ಪದವಿ, ಪ್ರಾಣ, ಎಲ್ಲವೂ ನನ್ನ ಕೈಯ್ಯ ಲ್ಲಿದೆ. ಹುಷಾರು' ಎಂದ.

'ಈ ರಹಸ್ಯದಂತೆಯೇ ನಿಮ್ಮ ರಹಸ್ಯವನ್ನೂ ಭದ್ರವಾಗಿಟ್ಟಿರುತ್ತೇನೆ' ಎಂದಳು ಹೆಸ್ಟರ್.

'ಪ್ರಮಾಣ ಮಾಡು' ಎಂದ ಆತ.

ಅವಳು ಪ್ರಮಾಣ ಮಾಡಿದಳು.

ರೋಜರ್ ಚಿಲಿಂಗ್‌ವರ್ತ್ ಕೇಳಿದ (ಇಂದಿನಿಂದ ಅವನಿಗೆ ಆ ಹೆಸರು—'ನಿನ್ನಿಂದಲೂ, ನಿನ್ನ ಮಗುವಿನಿಂದಲೂ, ಆ ಕೆಂಪು ಅಕ್ಷರ ದಿಂದಲೂ ನಾನು ದೂರವಿರುತ್ತೇನೆ- ನಿನಗೆ ವಿಧಿಸಿರುವ ಶಿಕ್ಷೆಯ ಪ್ರಕಾರ ನೀನು ನಿದ್ರೆಮಾಡುವಾಗಲೂ ಅದನ್ನು ಧರಿಸಬೇಕೇನು ? ಘೋರವಾದ

ಭಯಂಕರವಾದ ಕನಸುಗಳ ಭಯವಿಲ್ಲವೆ ನಿನಗೆ? '

'ನನ್ನನ್ನು ನೋಡಿ ಏಕೆ ನಗುತ್ತೀರಿ? ಅರಣ್ಯದಲ್ಲಿ ಸಂಚರಿಸುತ್ತಿರುವ ಕರಾಳವ್ಯಕ್ತಿಯೇನು ನೀವು? ನನ್ನ ಆತ್ಮ ನಾಶವಾಡುವ ಕಟ್ಟುಗಳಲ್ಲಿ ನನ್ನನ್ನು ಬಂಧಿಸಿದ್ದಿರೇನು? ' ಎಂದು ಹೆಸ್ಟರ್ ವ್ಯಾಕುಲಿತಳಾಗಿ ಕೇಳಿದಳು.

ಮತ್ತೆ ನಸುನಗುತ್ತಾ—'ನಿನ್ನ ಆತ್ಮವಲ್ಲ.... ಉಹುಂ, ನಿನ್ನದಲ್ಲ....! ಎಂದವನು ಉತ್ತರ ಕೊಟ್ಟ.

೫

ಹೆಸ್ಟರ್ ಪ್ರೈನ್‌ಳ ಬಂಧನದ ಅವಧಿ ಮುಗಿಯಿತು. ಸೆರೆಮನೆಯ ಬಾಗಿಲಿಂದ ಸೂರ್ಯನ ಬೆಳಕಿಗೆ ಬಂದಳು. ವ್ಯಾಕುಲತೆಯಿಂದ ವ್ಯಗ್ರಗೊಂಡಿದ್ದ ಅವಳ ಮನಸ್ಸಿಗೆ, ತನ್ನೆದೆಯ ಮೇಲಿದ್ದ ಕೆಂಪು ಅಕ್ಷರವನ್ನು ಎತ್ತಿ ತೋರಿಸುವುದನ್ನುಳಿದು ಬೆಳಕಿಗೆ ಬೇರೆ ಕೆಲಸವೇ ಇಲ್ಲವೇನೋ ಅನ್ನಿಸಿತು. ಅಂದು ಅವಳು ಸೆರೆಮನೆಯಿಂದ ಹೊರಬಂದಾಗ ಒಂದು ಗುಂಪೇ ಅವಳ ಹಿಂದೆ ನಡೆದಿತ್ತು. ಇಂದು ಒಬ್ಬಂಟಿಗಳಾಗಿ ಹೊರಬಂದಾಗಲೇ ಅವಳ ನಿತ್ಯಜೀವನ ಪ್ರಾರಂಭವಾಯಿತು. ಅವಳು ಅದನ್ನು ಸಹಿಸಿ ಮುನ್ನಡೆಯಬೇಕಾಗಿತ್ತು ಇಲ್ಲವೇ ಅದರಡಿಯಲ್ಲಿ ಮುಳುಗಿಹೋಗಬೇಕಾಗಿತ್ತು. ನಾಳೆ ಒಂದು ಕಷ್ಟ ಎದುರು ನಿಲ್ಲುತ್ತದೆ; ಮಾರನೆಯ ದಿನ ಒಂದು; ಮೂರನೆಯ ದಿನ ಮತ್ತೊಂದು. ಆದರೂ ಅದನ್ನು ಸಹಿಸುವುದು ಇಂದು ಹೇಳಲಾಗದಷ್ಟು ದುಃಖವನ್ನುಂಟುಮಾಡಿತ್ತು. ಮುಂದಿನ ದಿನಗಳು ಹೇಗೋ ಕಷ್ಟದಿಂದ ಉರುಳಿಹೋಗುತ್ತವೆ. ಆದರೆ ಈ ಭಾರವನ್ನು ಹೊತ್ತು ನಡೆದೇ ತೀರಬೇಕಾಗಿತ್ತು, ಅದನ್ನು ಕಳಚಿ ಬಿಸಾಡುವಂತಿರಲಿಲ್ಲ. ದಿನಕಳೆದಂತೆ, ವರ್ಷಗಳುರುಳಿದಂತೆ ಅವಳ ಕಳಂಕದ ಹೊರಗೆ ದುಃಖಗಳೂ ಹೇರಿಕೊಳ್ಳುತ್ತವೆ. ಮುಂದಿನ ದಿನಗಳಲ್ಲೆಲ್ಲಾ ಅವಳು ಸಾಧಾರಣ ವ್ಯಕ್ತಿಯಾಗಿರುವುದಿಲ್ಲ. ನೀತಿಬೋಧಕರು, ನಿಷ್ಠಾವಂತರೂ ಬೊಟ್ಟು ಮಾಡಿ ತೋರಿಸುವ ವಸ್ತುವಾಗುತ್ತಾಳೆ. ಹೆಂಗಸಿನ ಮನಸ್ಸಿನ ಅಸ್ಥಿರತೆ, ಮತ್ತು ಅವಳ ಚಾಪಲ್ಯದ ಪಾಪಗಳ ಪ್ರತೀಕವನ್ನಾಗಿ ಮಾರ್ಪಡಿಸುತ್ತಾರೆ ಅವರು. ನಿರ್ಮಲ ಮನಸ್ಸಿನ ಚಿಕ್ಕವರಿಗೆಲ್ಲಾ ಅವಳೆದೆಯ ಮೇಲೆ ಉರಿಯುತ್ತಿರುವ ಕೆಂಪು ಅಕ್ಷರವನ್ನು ತೋರಿಸುತ್ತಾರೆ. ಗೌರವಸ್ಥ ತಂದೆ ತಾಯಿಗಳ ಮಗಳಾದ ತನ್ನೆಡೆಗೆ, ಮಗುವಿನ ತಾಯಿಯಾಗಿದ್ದ ತನ್ನೆಡೆಗೆ, ಒಮ್ಮೆ ಏನನ್ನೂ ಅರಿಯದಿದ್ದ ತನ್ನೆಡೆಗೆ, ಪಾಪದ ಆಕಾರ, ದೇಹ

ಅವತಾರ ಎಂದು ಬೊಟ್ಟು ಮಾಡಿ ತೋರಿಸುತ್ತಾರೆ. ಕಳಂಕದ ಹೊರೆಯನ್ನು ಹೊತ್ತೇ ಅವಳು ಸಮಾಧಿಯಾಗಬೇಕು. ಆ ಕಳಂಕದ ಚಿಹ್ನೆಯೇ ಸಮಾಧಿಯ ಮೇಲೆ ಅವಳ ನೆನಪಾಗಿ ಉಳಿಯುತ್ತದೆ.

ಅವಳು ಅಲ್ಲಿಯೇ ಉಳಿದುಕೊಂಡಿರಬೇಕೆಂಬ ಕಟ್ಟೆಪ್ಪಣೆಯನ್ನೇನೂ ವಿಧಿಸಿರಲಿಲ್ಲ. ತನ್ನ ತವರೂರಿಗೆ ಹೊರಟು ಹೋಗಬಹುದಾಗಿತ್ತು. ಅಥವಾ ಹೊಸಸೋಗಿನಲ್ಲಿ ಇನ್ನೊಂದು ರೂಪ ತಾಳಿ ಗುರುತು ಮರೆಸಿಕೊಂಡು ಯೂರೋಪಿಗಾದರೂ ಹೊರಟು ಹೋಗಬಹುದಾಗಿತ್ತು. ತನ್ನನ್ನು ತುಳಿದು ಹಾಕಿದ ಕಾನೂನಿನಿಂದ ದೂರವಾಗಿ ಬಾಳುತ್ತಿದ್ದ ಕಾಡು ಜನರೊಡನೆ ವಾಸಿಸಲು ಅರಣ್ಯಕ್ಕೆ ಹೊರಟು ಹೋಗಿ ಅವರೊಡನೆ ಬೆರೆತು ಬಾಳಬಹುದಾದ ಸ್ವಾತಂತ್ರ್ಯವಿದ್ದರೂ ಅವಳು ಅಲ್ಲಿಯೇ ನಿಂತದ್ದು ಆಶ್ಚರ್ಯವಾಗಿ ಕಾಣಬಹುದು. ತಾನು ಕಳಂಕದ ರೂಪವಾಗಿದ್ದ ಆ ಊರೇ ತನ್ನ ಮನೆಯೆಂದು ಅವಳು ತಿಳಿದುದು ಆಚ್ಚರಿಯಾಗಬಹುದು. ಆದರೆ ವಿಧಿಯ ಲೀಲೆ ಅಂತಹುದು. ತನ್ನ ಬಾಳಿನ ಘಟನೆಗಳ ರಸನಿಮಿಷಗಳ ನೆನಪು, ಅದಕ್ಕಿಂತ ಮಿಗಿಲಾಗಿ ಅದಕ್ಕೆ ಸಂಬಂಧ ಪಟ್ಟ ಕಹಿನೆನಪುಗಳನ್ನುಂಟುಮಾಡಿಕೊಡುವ ಸ್ಥಳದಲ್ಲೇ ಸುಳಿದಾಡುವ ಪಿಶಾಚಿಯಂತೆಯೇ, ಮಾನವ ಕೂಡ ಯಾವುದೋ ಒಂದು ಅರಿಯಲಾಗದ ಶಕ್ತಿಯಿಂದ ದೂಡಲ್ಪಟ್ಟು ಅಲ್ಲಿಯೇ ಸುಳಿದಾಡುತ್ತಾನೆ. ಅವಳ ಪಾಪ, ಅವಳ ಕಳಂಕ ಅವಳನ್ನು ಅಲ್ಲಿಯೇ ಬೇರೂರಿ ನಿಲ್ಲುವಂತೆ ಮಾಡಿತ್ತು. ಇಂಗ್ಲೆಂಡಿನ ಹಳ್ಳಿಯೊಂದರಲ್ಲಿ ಕಳೆದ ಬಾಲ್ಯ, ಕಳಂಕರಹಿತವಾದ ಯೌವ್ವನದ ದಿನಗಳ ನೆನಪು ಇನ್ನೂ ತನ್ನ ತಾಯಬಳಿಯಲ್ಲಿದ್ದ, ತಾನು ಕಳಚಿ ಹಾಕಿದ ಬಟ್ಟೆಗಳಂತಿದ್ದವು. ಅವಳ ಅಂತರಾತ್ಮವನ್ನು ಈ ಸ್ಥಳ ಕಬ್ಬಿಣದ ಸರಪಳಿಗಳಿಂದ ಬಿಗಿದಿತ್ತು. ಅದನ್ನು ಎಂದಿಗೂ ಮರೆಯುವಂತಿರಲಿಲ್ಲ.

ತನ್ನಿಂದಲೇ ಅವಳು ರಹಸ್ಯವನ್ನು ಮುಚ್ಚಿಟ್ಟುಕೊಳ್ಳಲು ಪ್ರಯತ್ನಪಡುತ್ತಿದ್ದರೂ ಅದು ಹುತ್ತದಿಂದ ಹೊರಬರುವ ಹಾವಿನಂತೆ ಹೊರಬರಲು ಪ್ರಯತ್ನ ಪಡುತ್ತಿದ್ದುದರಲ್ಲಿ ಸಂದೇಹವಿರಲಿಲ್ಲ. ಆಕೆಗೆ ಸಂಬಂಧವಿದ್ದ ಮತ್ತೊಬ್ಬನ ಕಾಲು ಆ ನೆಲವನ್ನು ತುಳಿಯುತ್ತಿತ್ತು. ಜಗತ್ತು ಅರಿಯದಿದ್ದರೂ ಮುಂದೊದಗುವ ಅಂತ್ಯ ನ್ಯಾಯ ತೀರ್ಮಾನದ ದಿನ ಅವರಿಬ್ಬರೂ ಶಿಕ್ಷೆಯನ್ನನುಭವಿಸಬೇಕಾಗಿತ್ತು. ಮೇಲಿಂದ ಮೇಲೆ ಹೆಸ್ಟರ್‌ಳ ಭಾವನೆಯಲ್ಲಿ ಈ ಆತ್ಮವಿಚಾರ ನುಗ್ಗಿ ಬರುತ್ತಿತ್ತು. ಅದನ್ನು ದೂಡಲು ಅವಳು

ಹೆಣಗುತ್ತಿದ್ದಳು. ಆ ಭಾವನೆ ಸುಳಿದ ಕೂಡಲೆ ಅದನ್ನು ಅದುಮಿಟ್ಟು ಬಿಡುತ್ತಿದ್ದಳು. ಅವಳು ನ್ಯೂ ಇಂಗ್ಲೆಂಡಿನಲ್ಲಿಯೇ ನೆಲೆಸಲು ನಿರ್ಧರಿಸಿದುದು ಅರ್ಧ ಸತ್ಯವಾದರೂ ಮತ್ತರ್ಧ ಆತ್ಮವಂಚನೆಯಾಗಿತ್ತು. ಇದೇ ಸ್ಥಳದಲ್ಲಿ ತಾನು ಅಪರಾಧ ಮಾಡಿದೆ. ಇಹದ ಶಿಕ್ಷೆಯನ್ನು ಇಲ್ಲಿಯೇ ಅನುಭವಿಸಿ, ತೀರಬೇಕು ಎಂದುಕೊಂಡಳು. ಏಕೆಂದರೆ ಪ್ರತಿದಿನದ ಅಪಮಾನದ ಚಿತ್ರಹಿಂಸೆಯಿಂದ ತನ್ನ ಆತ್ಮಪರಿಶುದ್ಧವಾಗಿ ಹಿಂದೆ ತಾನು ಕಳೆದು ಕೊಂಡಿರುವುದಕ್ಕಿಂತಲೂ ಹೆಚ್ಚು ಪವಿತ್ರವಾಗಿ ಬಾಳಿ ಆತ್ಮ ಸಮರ್ಪಣೆ ಮಾಡಲು ನಿರ್ಧರಿಸಿದಳು.

ಆದ್ದರಿಂದ ಹೆಸ್ಟರ್ ಪ್ರೈನ್ ಅಲ್ಲಿಂದ ಓಡಿಹೋಗಲಿಲ್ಲ. ಊರಿನ ಅಂಚಿನಲ್ಲಿ, ನಿರ್ಜನವಾದ ಪ್ರದೇಶದಲ್ಲಿ ಒಂದು ಹುಲ್ಲಿನ ಗುಡಿಸಲಿತ್ತು. ಅದನ್ನು ಮೊದಲೇ ಯಾರೋ ಕಟ್ಟಿದ್ದರು. ಭೂಮಿ ಬಂಜರಾದುದ ರಿಂದಲೂ, ಜನಸಂಚಾರಕ್ಕೆ ದೂರವಿದ್ದುದರಿಂದಲೂ ಅದನ್ನು ತ್ಯಜಿಸಿ ಹೊರಟು ಹೋಗಿದ್ದರು. ಅದು ಸಮುದ್ರ ತೀರದಲ್ಲಿತ್ತು. ಪಶ್ಚಿಮಕ್ಕೆ ಅರಣ್ಯದಿಂದ ಕೂಡಿದ ಬೆಟ್ಟಗಳಿದ್ದುವು. ಹತ್ತಿರ ಕುರುಚಲು ಗಿಡಗಳು ಬೆಳೆದಿದ್ದುವು. ತನ್ನ ಮೇಲೆ ಇನ್ನೂ ಕಾವಲಿದ್ದ ನ್ಯಾಯಾಧೀಶರ ಅಪ್ಪಣೆ ಪಡೆದು, ತನ್ನ ಬಳಿಯಿದ್ದ ಅಲ್ಪ ಸ್ವಲ್ಪ ಪದಾರ್ಥಗಳನ್ನು ತಂದುಕೊಂಡು, ತನ್ನ ಹಸುಮಗುವಿನೊಡನೆ ಆ ನಿರ್ಜನವಾದ ಗುಡಿಸಲಲ್ಲಿ ವಾಸಿಸತೊಡ ಗಿದಳು. ಅಂದಿನಿಂದ ಒಂದು ಭಯಪ್ರಚೋದಕವಾದ ಕತ್ತಲು ಆ ಜಾಗ ವನ್ನು ಆವರಿಸಿತ್ತು. ಈಕೆಯನ್ನು ಏಕೆ ಮನುಷ್ಯಸಂಪರ್ಕವಿಲ್ಲದೆ ಎಲ್ಲರಿಂದ ದೂರವಿಟ್ಟಿದ್ದಾರೆ ಎಂದು ಅರಿಯುವಷ್ಟು ಬುದ್ಧಿ ಸಾಲದ ಚಿಕ್ಕ ಮಕ್ಕಳು ಗುಡಿಸಲ ಹತ್ತಿರ ಮೆಲ್ಲನೆ ಸುಳಿದಾಡುತ್ತಾರೆ. ಅವಳು ಕಸೂತಿ ಕೆಲಸ ಮಾಡುತ್ತಿರುವಾಗಲೋ, ಬಾಗಿಲಲ್ಲಿ ನಿಂತಿರುವಾಗಲೋ, ತೋಟದ ಕೆಲಸ ಮಾಡುತ್ತಲೋ ಅಥವಾ ಮನೆಬಿಟ್ಟು ಹೊರಕ್ಕೆ ಬರುತ್ತಿರುವಾಗಲೋ ಅವಳ ಎದೆಯ ಮೇಲಿರುವ ಕೆಂಪು ಅಕ್ಷರವನ್ನು ಕಂಡು ಹೇಳಲಾಗದಂಥ ಭಯದಿಂದ ಕಾಲಿಗೆ ಬುದ್ಧಿ ಹೇಳುತ್ತಿದ್ದರು.

ಸ್ನೇಹಿತರೆಂದು ಕರೆಯಲು ಯಾರೂ ಇಲ್ಲದೆ ಒಬ್ಬಂಟಿಗಳಾಗಿದ್ದರೂ ಹೊಟ್ಟೆಗಾಗಿ ಹೆದರಿಕೊಳ್ಳಬೇಕಾಗಿರಲಿಲ್ಲ. ಹೆಚ್ಚು ಪ್ರೋತ್ಸಾಹವಿಲ್ಲ ದಿದ್ದರೂ, ತನ್ನ ಕಲೆಯಿಂದ ತನಗೂ ತನ್ನ ಮಗುವಿಗೂ ಆಹಾರ ಒದಗಿಸಿ ಕೊಳ್ಳುವ ಶಕ್ತಿಯಿತ್ತು. ಅದು ಆಕೆಯ ಕಸೂತಿ ಕೆಲಸ. ಅವಳು ಎದೆಯ ಮೇಲೆ ಧರಿಸಿದ್ದ ಅಕ್ಷರದ ಕಸೂತಿಯಲ್ಲಿ ಕೂಡ ಅವಳ ನೈಪುಣ್ಯತೆ ಕಾಣು

ತ್ತಿತ್ತು. ದಿನಕಳೆದಂತೆ ಹೆಸ್ಟರ್ ಪ್ರೈನ್‌ಳ ಕಸೂತಿ ಎಲ್ಲರ ಬಟ್ಟೆಗಳ ಮೇಲೂ ಮೆರೆಯತೊಡಗಿತು. ಊರಿನ ದೊಡ್ಡ ಮನುಷ್ಯರು, ಪುರಪ್ರಮುಖರು, ಅಧಿಕಾರಿಗಳು ಎಲ್ಲರೂ ಆಕೆಯ ಕಸೂತಿ ಕೆಲಸವನ್ನು ಬಯಸತೊಡಗಿದರು. ಸತ್ತವರ ಮೇಲೆ ಹೊದಿಸುವುದಕ್ಕೆ ಕೂಡ ಆಕೆಯೇ ಕಸೂತಿ ಕೆಲಸ ಮಾಡಬೇಕಿತ್ತು. ಆಗಿನ ಕಾಲದಲ್ಲಿ ಚಿಕ್ಕಮಕ್ಕಳು ಬೆಲೆಬಾಳುವ ಬಟ್ಟೆಗಳನ್ನು ಹಾಕಿಕೊಳ್ಳುತ್ತಿದ್ದರಿಂದ, ಆ ಕೆಲಸದಿಂದಲೂ ಆಕೆಗೆ ಸಂಪಾದನೆಯಾಗತೊಡಗಿತು.

ಬರಬರುತ್ತಾ ಅವಳ ಕಸೂತಿಯೇ ರೂಢಿಯ ಶೈಲಿ ಎನ್ನಿಸಿಕೊಳ್ಳತೊಡಗಿತು. ದಿವಸಕ್ಕೆ ಅನೇಕ ಗಂಟೆಗಳ ಕಾಲ ಅವಳಿಗೆ ಕೈತುಂಬ ಕೆಲಸವಿದ್ದೇ ಇರುತ್ತಿತ್ತು. ಅವಳ ಪಾಪಪೂರಿತವಾದ ಕೈಗಳು ತಯಾರಿಸಿದ ಬಟ್ಟೆಗಳನ್ನು ಧರಿಸುವುದು ದೊಡ್ಡ ದೊಡ್ಡ ಉತ್ಸವಗಳಲ್ಲಿ ಸ್ವಪ್ರತಿಷ್ಠೆಗೆ ಕಲಷವಿಟ್ಟಂತ್ತಿತ್ತು. ಗವರ್ನರರ ಕೊರಳ ಸುತ್ತಿನಲ್ಲಿ, ಸೈನ್ಯಾಧಿಕಾರಿಗಳ ಕಂಠವಸ್ತ್ರದ ಮೇಲೆ, ಪಾದ್ರಿಗಳ ಕುತ್ತಿಗೆ ಪಟ್ಟಿಯಲ್ಲಿ, ಚಿಕ್ಕಮಕ್ಕಳ ಟೋಪಿಯ ಮೇಲೆ, ಹೆಣ ಹೂಳುವ ಪೆಟ್ಟಿಗೆಯಲ್ಲಿ, ಎಲ್ಲಿ ನೋಡಿದರೂ ಅವಳ ಕಸೂತಿಯೇ ಮೆರೆಯತೊಡಗಿತು. ಆದರೆ ಮದುಮಗಳ ಬಿಳಿಯ ಅವಗುಂಠನಕ್ಕೆ ಮಾತ್ರ ಅವಳ ಕಸೂತಿಯನ್ನು ಒಮ್ಮೆಯೂ ಉಪಯೋಗಿಸಲಿಲ್ಲ. ಇದೊಂದು ವಿನಾಯಿತಿಯಿಂದ ಅವಳ ಪಾಪವನ್ನು ಕಂಡು ಸಮಾಜ ಹುಬ್ಬುಗಂಟಿಕ್ಕಿರುವುದು ವ್ಯಕ್ತವಾಗುತ್ತಿತ್ತು.

ಹೆಸ್ಟರ್ ತನಗೂ ತನ್ನ ಮಗುವಿಗೂ ಬೇಕಾದುದಕ್ಕಿಂತ ಹೆಚ್ಚಾಗಿ ಏನನ್ನೂ ಬಯಸದೆ ವಿರಕ್ತಳಾಗಿ ಬಾಳುವೆ ನಡೆಸತೊಡಗಿದಳು. ಅವಳು ಬಹಳ ಒರಟಾದ, ಅತಿ ಮಂಕಾದ ಬಣ್ಣದ ಬಟ್ಟೆಯನ್ನೇ, ಧರಿಸುತ್ತಿದ್ದಳು. ಅವಳ ಒಂದೇ ಒಂದು ಆಭರಣವೆಂದರೆ—ಆ ಕೆಂಪು ಅಕ್ಷರ—ಅದನ್ನು ಧರಿಸಬೇಕಾದುದು ಅವಳ ದುರ್ವಿಧಿಯಾಗಿತ್ತು. ಆದರೆ ಆ ಮಗುವಿನ ಬಟ್ಟೆಯಲ್ಲೇ ಒಂದು ಬಗೆಯ ವೈಶಿಷ್ಟ್ಯವಿತ್ತು. ವಿಲಕ್ಷಣವಾದ ಬುದ್ಧಿ ಕುಶಲತೆಯಿಂದ ಕೂಡಿದ ಆ ಬಟ್ಟೆಗಳು, ಮಗುವಿನ ಸೂಕ್ಷ್ಮ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸಲು ನೆರವಾಗಿತ್ತು. ಆದರೆ ಅದರಲ್ಲಿ ಯಾವುದೋ ಗೂಢಾರ್ಥವಡಗಿರುವಂತೆ ಕಾಣುತ್ತಿತ್ತು. ತನ್ನ ಮಗುವಿನ ಅಲಂಕಾರದ ವೆಚ್ಚವೊಂದನ್ನುಳಿದು, ಮಿಕ್ಕ ಸಂಪಾದನೆಯನ್ನೆಲ್ಲಾ ಬಡಬಗ್ಗರಿಗೆ (less miserable than herself) ದಾನ ಮಾಡುತ್ತಿದ್ದಳು. ತಮಗೆ ನೀಡುವ ಕೈಯನ್ನೇ ಅವರು ಅನೇಕ ವೇಳೆ ಮುಖಭಂಗ ಮಾಡು

ತ್ತಿದ್ದರು. ತನ್ನ ಕಲೆಯ ಉದ್ಯಮವನ್ನು ಉತ್ತಪಡಿಸಿಕೊಳ್ಳಬಹುದಾದ ಹೊತ್ತನ್ನೆಲ್ಲಾ ಬಡಬಗ್ಗರಿಗಾಗಿ ಒರಟು ಬಟ್ಟೆಗಳನ್ನು ಹೊಲಿಯುವುದರಲ್ಲಿ ಕಳೆಯುತ್ತಾಳೆ. ಈ ಒರಟು ಕೆಲಸಕ್ಕಾಗಿ, ತನ್ನ ಮನಸ್ಸಿಗೆ ಉಲ್ಲಾಸ ನೀಡುವ ಕೆಲಸವನ್ನು ತ್ಯಾಗ ಮಾಡಿದುದರ ಉದ್ದೇಶದಲ್ಲಿ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಭಾವನೆಯಿದ್ದಿರಬಹುದು. ಸ್ವಭಾವತಃ ಅವಳಲ್ಲಿ ಉದ್ದೀಪಕ ವಾದ, ಅತ್ಯಂತ ಸೌಂದರ್ಯಪೂರಿತವಾದ ವಸ್ತುಗಳಲ್ಲಿ ಅಭಿರುಚಿಯಿತ್ತು. ಅದೆಲ್ಲಾ ಅವಳ ಮನೋಹರವಾದ ಕಸೂತಿ ಕೆಲಸದಲ್ಲಿ ಮೂಡಿಬರುತಿತ್ತೇ ವಿನಹ ಅವಳ ಜೀವನದ ಇನ್ನಾವ ರಂಗದಲ್ಲಿಯೂ ಸಾಧ್ಯವಿರಲಿಲ್ಲ. ಸೂಕ್ಷ್ಮವಾದ ಕಸೂತಿ ಕೆಲಸದಿಂದ ಸ್ತ್ರೀಯರಿಗೆ, ಗಂಡಸರಿಗೆ ಅರ್ಥವಾಗ ದಂತಹ ಒಂದು ವಿಧವಾದ ಹರುಷ ದೊರೆಯುತ್ತದೆ. ಅಂತೆಯೇ ಹೆಸ್ಟರ್ ಪ್ರೈನ್‌ಳಿಗೂ ಅದರ ಮೂಲಕ ತನ್ನ ಭಾವಗಳನ್ನು ಉಲ್ಲೇಖಿಸುವುದರಿಂದ ಮನಸ್ಸಿಗೆ ಶಾಂತಿ ದೊರೆಯುವ ಒಂದು ಮಾರ್ಗವಾಗಿತ್ತು. ಮಿಕ್ಕೆಲ್ಲ ಸಂತೋಷಗಳಂತೆಯೇ ಅದೂ ಪಾಪವೆಂದು ಅದನ್ನೂ ನಿರಾಕರಿಸಿದಳು.

ತನಗೂ ಸಮಾಜಕ್ಕೂ ಯಾವ ವಿಧವಾದ ಸಂಬಂಧವೂ ಇಲ್ಲ ವೆಂಬಂತೆ ಬಾಳತೊಡಗಿದಳು. ಬಹಿಷ್ಕರಿಸಲ್ಪಟ್ಟ ಅವಳು ಬೇರೆಯ ಪ್ರಪಂಚಕ್ಕೆ ಸೇರಿದವಳೆಂಬಂತೆ ಸೂಚಿಸುವ ಭಾವನೆ ಅವಳು ಸಂಧಿಸುತ್ತಿದ್ದ ಪ್ರತಿಯೊಬ್ಬರ ನಡೆ, ನುಡಿ ಮೌನಗಳಲ್ಲಿಯೂ ವ್ಯಕ್ತವಾಗುತ್ತಿತ್ತು. ನೀತಿ ಸಂಬಂಧವಾದ ವಿಷಯುಗಳಿಂದ ದೂರವಿದ್ದರೂ, ಯಾರಿಗೂ ಕಾಣಿಸಿ ಕೊಳ್ಳದೆ ತನ್ನ ಮನೆಗೆ ಹಿಂದಿರುಗಿ, ಅವರ ಕಷ್ಟಸುಖಗಳಲ್ಲಿ ಭಾಗಿಯಾಗಲು ಸಾಧ್ಯವಾಗದೆ, ತನ್ನ ಅನುಕಂಪವನ್ನು ಪ್ರದರ್ಶಿಸುವುದರಲ್ಲಿ ಯಶಸ್ವಿಯಾಗು ವುದರ ಬದಲು ಭಯೋತ್ಪಾದನೆ ಮಾಡುವ ಪ್ರೇತದಂತಿದ್ದಳು ಹೆಸ್ಟರ್. ಬಡಬಗ್ಗರಿಗೆ ಸಹಾಯ ಮಾಡಲು ಹೋದಾಗಲೆಲ್ಲಾ, ತಮಗೆ ಉಪಕಾರ ಮಾಡಲು ಬಂದ ಕೈಯ್ಯನ್ನೇ ಅವರು ತುಚ್ಛವಾಗಿ ಕಾಣುತ್ತಿದ್ದರು. ತನ್ನ ವೃತ್ತಿಗಾಗಿ ಕೆಲಸ ಸಂಪಾದಿಸಲು ಹೋದಾಗಲೆಲ್ಲಾ ದೊಡ್ಡ ಮನುಷ್ಯರ ಮನೆಯ ಹೆಂಗಸರು ಅವಳ ಹೃದಯಕ್ಕೆ ಕತ್ತಿಯಿಕ್ಕುವಂತೆ ವರ್ತಿಸುತ್ತಿದ್ದರು. ಹೆಸ್ಟರ್‌ಗೆ ಇದು ಬಹಳ ದಿನದಿಂದ ಪಾಠವಾಗಿ ಹೋಗಿತ್ತು. ಇವಕ್ಕೆಲ್ಲಾ ಉತ್ತರ ಹೇಳುವ ಬದಲು, ಅವಳ ವಿವರ್ಣವಾದ ಕೆನ್ನೆ ಒಂದು ಕ್ಷಣ ಕೆಂಪೇರಿ ಮತ್ತೆ ಹೃದಯಾಂತರಾಳಕ್ಕೆ ಇಳಿದು ಹೋಗುತ್ತಿತ್ತು. ಅವಳು ಬಹಳ ಸಹನೆಯಿಂದಿದ್ದಳು. ಅವಳಿಗೆ ಅವರನ್ನು ಕ್ಷಮಿಸುವ ಮನಸ್ಸಿದ್ದರೂ ಹಸ, ತನ್ನ ಕ್ಷಮೆಯ ನುಡಿಗಳೇ, ತಮ್ಮದೃಷ್ಟಕ್ಕೆ ತಾವೇ ಶಾಪದ ನುಡಿಗಳಾಗಿ

ತಿರುಗಿಯಾವು ಎಂಬ ಭಯದಿಂದ ಆಕೆ ತನ್ನ ಶತ್ರುಗಳಾಗಿ ಪ್ರಾರ್ಥಿಸುತ್ತಿರಲಿಲ್ಲ.

ಸುಧಾರಕರು ವಿಧಿಸಿದ್ದ ಮುಕ್ತಿಯಿಲ್ಲದಂತಹ ಶಿಕ್ಷೆಯಿಂದ ಸದಾ ಸಾವಿರಾರು ವಿಧದಲ್ಲಿ, ಲೆಕ್ಕವಿಲ್ಲದಷ್ಟು ತೆರದಲ್ಲಿ ಮನೋವೇದನೆಯಾಗುತ್ತಿತ್ತು. ಅವಳಿಗೆ, ದಾರಿಯಲ್ಲಿ ಪಾದ್ರಿಗಳು ಸಿಕ್ಕಿದರೆ ನಿಂತು ಉಪದೇಶಕ್ಕೆ ಪ್ರಾರಂಭ ಮಾಡುತ್ತಿದ್ದರು. ಅವರ ಸುತ್ತ ಸೇರಿದ ಗುಂಪು ಆ ಬಡ ಪಾಪಿಯನ್ನು ಕಂಡು ಹುಬ್ಬುಗಂಟಿಕ್ಕಿ ಹಲ್ಲು ಕಿರಿಯುತ್ತಿದ್ದರು. ಸಬ್ಬತಿನ ದಿನ ದೇವರ ಕರುಣೆಯಲ್ಲಿ ಭಾಗಿಯಾಗಲು ಚರ್ಚಿಗೆ ಹೋದಾಗಲೆಲ್ಲಾ ತನ್ನನ್ನೇ ಭಾಷಣದ ವಿಷಯವಾಗಿಟ್ಟುಕೊಂಡು ಪಾದ್ರಿಗಳು ಮಾತನಾಡುವುದನ್ನು ಕೇಳುವುದು ಅವಳ ದುರದೃಷ್ಟವಾಗಿತ್ತು. ತನ್ನ ಮಗುವನ್ನುಳಿದು ಬೇರೆ ಯಾರೂ ಗೆಳೆಯರಿಲ್ಲದೆ ಮೌನವಾಗಿ ಅವಳು ರಸ್ತೆಯಲ್ಲಿ ಹೋಗುತ್ತಿದ್ದರೆ, ಅವಳನ್ನು ಕಂಡ ಮಕ್ಕಳೆಲ್ಲ ಭಯಪಟ್ಟುಕೊಳ್ಳುತ್ತಿದ್ದರು. ಅವಳಿಗೂ ಆ ಮಕ್ಕಳನ್ನು ಕಂಡರೆ ಭಯವುಂಟಾಗತೊಡಗಿತು. ಅವಳು ಮುಂದೆ ಹೋಗುತ್ತಿದ್ದರೆ ಸ್ವಲ್ಪ ಹಿಂದೆ ಕಿರಿಚಿಕೊಳ್ಳುತ್ತಾ ಅವಳನ್ನು ಹಿಂಬಾಲಿಸುತ್ತಿದ್ದರು. ಆ ಪದದ ಅರ್ಥ ತಿಳಿಯದೆ ಅವರು ಕಿರಿಚುತ್ತಿದ್ದರೂ ಅವಳಿಗೆ ಮಾತ್ರ ಅದು ಭಯಂಕರವಾಗಿ ತೋರುತ್ತಿತ್ತು. ಹೊಸಬರ್‍ಯಾರಾದರೂ ಆ ಕೆಂಪು ಅಕ್ಷರದ ಕಡೆಗೆ ನೋಡಿದರೆ—ನೋಡಲು ತಪ್ಪುತ್ತಿರಲಿಲ್ಲ—ಅವಳ ಆತ್ಮದ ಮೇಲೆ ಮತ್ತೆ ಬರೆಯೆಳೆದಂತಾಗುತ್ತಿತ್ತು. ಅನೇಕ ವೇಳೆ ತನ್ನ ಕೈಯ್ಯಿಂದ ಅದನ್ನು ಮುಚ್ಚಿಕೊಳ್ಳೋಣವೇ ಎನಿಸುತ್ತದೆ ಅವಳಿಗೆ. ಬಹಳ ಕಷ್ಟದಿಂದ ಸುಮ್ಮನಾಗುತ್ತಾಳೆ. ಮತ್ತೊಂದು ಪಳಗಿದ ಕಣ್ಣು, ತನ್ನದೇ ಆದ ಒಂದು ನೋಟವನ್ನುಂಟುಮಾಡುತ್ತಿತ್ತು. ಆದರ ಎವೆಯಿಕ್ಕದ ನೋಟ ಸಹಿಸಲಸಾಧ್ಯವಾಗಿತ್ತು. ಮೊದಲಿಂದ ಕೊನೆಯವರೆಗೂ ಮಾನವನ ದೃಷ್ಟಿ ಆ ಅಕ್ಷರದ ಮೇಲೆ ಬಿದ್ದಾಗಲೆಲ್ಲಾ ಹೆಸ್ಟರ್‌ಳಿಗೆ ಅಪಾರವಾದ ನೋವುಂಟಾಗುತ್ತಿತ್ತು. ಆ ಚಿಹ್ನೆಯಿರುವ ಸ್ಥಳ ದಿನಕಳೆದಂತೆ ಜಡುಕಟ್ಟುವ ಬದಲು, ಯಾತನೆ ಹೆಚ್ಚಿದಂತೆಲ್ಲಾ ಸೂಕ್ಷ್ಮವಾಗತೊಡಗಿತು.

ಎಂದೋ ಒಂದು ದಿನ, ಅನೇಕ ತಿಂಗಳಿಗೆ ಒಮ್ಮೆ ಒಂದು ನೋಟ—ಒಬ್ಬ ಮಾನವನ ನೋಟ—ಆ ಅಕ್ಷರದ ಮೇಲೆ ಬಿದ್ದಾಗ ಅವಳ ಮನಸ್ಸಿಗೆ ಕ್ಷಣಿಕ ಶಾಂತಿ ದೊರೆಯುತ್ತಿತ್ತು. ಆತನೂ ತನ್ನ ನೋವಿನಲ್ಲಿ ಭಾಗಿಯಾದಂತೆ ಅನ್ನಿಸುತ್ತಿತ್ತು ಅವಳಿಗೆ. ಮರುಕ್ಷಣವೇ ಪುನಃ ಮತ್ತಷ್ಟು

ನೋವನ್ನುಂಟುಮಾಡುತ್ತಿತ್ತು. ಏಕೆಂದರೆ ಆ ಅಲ್ಪವಿರಾಮದಲ್ಲಿ ಅವಳು ಮತ್ತಷ್ಟು ಪಾಪ ಮಾಡಿದ್ದಳು. ಹೆಸ್ಟರ್ ಒಬ್ಬಳೇ ಪಾಪ ಮಾಡಿದ್ದಳೇನು?

ಅನೇಕ ವೇಳೆ ಅವಳಿಗೆ ಆ ಕೆಂಪು ಅಕ್ಷರ ಒಂದು ವಿಧವಾದ ಹೊಸ ಪರಿಜ್ಞಾನವನ್ನು ಒದಗಿಸಿಕೊಟ್ಟಂತೆ ಎನ್ನಿಸತೊಡಗಿತು. ಮಿಕ್ಕ ಹೃದಯ ಗಳಲ್ಲಡಗಿರುವ ಪಾಪವನ್ನು ಕಂಡು ಅವಳಲ್ಲಿ ಅನುಕಂಪದ ಭಾವ ಬಂದಾಗಲೆಲ್ಲಾ, ಅದನ್ನು ನಂಬುವುದಕ್ಕೇ ಅವಳಿಂದ ಸಾಧ್ಯವಾಗುತ್ತಿರಲಿಲ್ಲ. ಈ ರೀತಿಯಾಗಿ ಅಂತಃಪ್ರೇರಣೆಯಿಂದ ಅರಿತ ಗುಟ್ಟುಗಳನ್ನು ಕಂಡ ಅವಳಿಗೆ ಭಯವಾಗತೊಡಗಿತು. ಅವರ ಪವಿತ್ರತೆಯು ಸೋಗೆಲ್ಲ ಸುಳ್ಳಲ್ಲವೆ. ಅವರೆಲ್ಲರ ರಹಸ್ಯಗಳೂ ಬಯಲಾಗಿದ್ದರೆ ಹೆಸ್ಟರ್ ಪ್ರೈನ್‌ಳ ಜೊತೆಗೆ ಅನೇಕರ ಎದೆಯ ಮೇಲೆ ಆ ಕೆಂಪು ಅಕ್ಷರ ಧಗಧಗಿಸುತ್ತಿರಬೇಕಾಗಿತ್ತು. ಈ ಅಂತಃಪ್ರೇರಣೆಯೆಲ್ಲಾ ನಿಜವೆ ಎನ್ನಿಸುತ್ತಡೆ ಅವಳಿಗೆ. ಅವಳ ಭಾವನೆ ಗಳಲ್ಲೆಲ್ಲಾ ಈ ಭಾವನೆಗಿಂತ ತುಚ್ಛವಾಗಿದ್ದುದು ಮತ್ತೊಂದಿರಲಿಲ್ಲ. ಆಗಿನ ಕಾಲದಲ್ಲಿ ನ್ಯಾಯ ಮತ್ತು ಧರ್ಮಶ್ರದ್ಧೆಗಳ ಮೂರ್ತಿಗಳಾಗಿದ್ದ ಪಾದ್ರಿಗಳನ್ನು ಕಂಡರೆ, ಜನರು, ದೇವತೆಗಳ ಸಮಾನನಾದ ಮರ್ತ್ಯ ಮಾನವನೆಂದು ಭಕ್ತಿ ತೋರಿಸುತ್ತಿದ್ದರು. ಆ ಪೂಜ್ಯರ ಬಳಿ ಹಾದು ಹೋದಾಗಲೆಲ್ಲಾ ಏಕೋ ಅವಳೆದೆಯ ಮೇಲಿದ್ದ ಕಳಂಕದ ಚಿಹ್ನೆ ಅನು ಕಂಪದಿಂದ ತುಡಿದಂತಾಗುತ್ತಿತ್ತು. 'ಯಾವ ಪಾಪಿ ಹತ್ತಿರವಿರ ಬಹುದು?' ಎಂದುಕೊಳ್ಳುತ್ತಾ ಒಲ್ಲದ ಮನಸ್ಸಿನಿಂದ ಕಣ್ಣೆತ್ತಿ ನೋಡಿ ದರೆ ಈ ಪವಿತ್ರ ಪುರುಷನನ್ನು ಬಿಟ್ಟು ಮತ್ತಾರೂ ಕಣ್ಣಿಗೆ ಬೀಳುತ್ತಿರಲಿಲ್ಲ. ಮತ್ತೆ ಕೆಲವು ವೇಳೆ ವಿದ್ಯುತ್ಪ್ರವಾಹವಾದಂತಾಗಿ ಒಂದು ನುಡಿ ಕೇಳಿಸು ತ್ತದೆ—'ಹೆಸ್ಟರ್, ಅಲ್ಲಿ ನೋಡು ನಿನಗೊಬ್ಬಳು ಜೊತೆಗಾರ್ತಿ!' ಕಣ್ಣೆತ್ತಿ ನೋಡಿದಾಗ ಅವಳಿಗೆ ಕಾಣುವುದೇನು? ಓರೆಗಣ್ಣಿನಿಂದ ಆ ಕೆಂಪು ಅಕ್ಷರ ವನ್ನು ನೋಡಿ, ತಕ್ಷಣ ಬೇರೆ ಕಡೆಗೆ ದೃಷ್ಟಿ ತಿರುಗಿಸಿ, ಕೆಂಪೇರಿದ ಕೆನ್ನೆ ಯಿಂದ, ಆ ಒಂದು ಕ್ಷಣದ ನೋಟದಿಂದ ತಮ್ಮ ಪವಿತ್ರತೆಗೆ ಭಂಗ ಬಂತೆಂಬಂತೆ ಮುಖ ತಿರುಗಿಸಿಕೊಂಡು ಹೋಗುವ ಒಬ್ಬಳು ತರುಣಿ. ಆದರೂ ಹೆಸ್ಟರ್ ಪ್ರೈನ್ ಮಿಕ್ಕ ಮಾನವರೆಲ್ಲಾರೂ ತನ್ನಂತೆ ಅಪರಾಧಿಗಳಲ್ಲ ವೆಂದು ನಂಬಲು ಹೆಣಗಾಡಿದಳು.

ಆಗಿನ ಕಾಲದ ಕೀಳು ಜನರು ತಮ್ಮ ಮನಸ್ಸಿಗೆ ತೋಚಿದ್ದನ್ನೆಲಾ ಭಯಂಕರವಾಗಿ ಕತೆಕಟ್ಟುವುದು ರೂಢಿಯಾಗಿದ್ದುದರಿಂದ ಆ ಕೆಂಪು ಅಕ್ಷರದ ಮೇಲೂ ಕತೆ ಕಟ್ಟಿದರು. ಅದು ಮನುಷ್ಯ ಮಾಡಿದ ಸಾಧಾರಣ

ಕೆಂಪುಬಟ್ಟೆಯಲ್ಲವಂತೆ, ಹೆಸ್ಟರ್ ಪ್ರೈನ್ ರಾತ್ರಿಯ ಹೊತ್ತು ಹೊರಗೆ ಸುಳಿದಾಡಿದಾಗ ನರಕದ ಬೆಂಕಿಯಿಂದ ಸುಡುತ್ತಿರುವ ಅದರ ಜ್ವಾಲೆ ಧಗಧಗಿಸುತ್ತಿರುವುದು ಕಾಣುತ್ತಿತ್ತಂತೆ. ಇಂದು ನಾವು ಅದನ್ನು ಸುಳ್ಳೆಂದು ನಂಬದಿದ್ದರೂ, ಆ ಸುದ್ದಿಯಲ್ಲಿ ಹೆಚ್ಚು ನಿಜವೇ ಇತ್ತೆಂದು ಹೇಳಬೇಕು. ಏಕೆಂದರೆ ಅದು ಅಷ್ಟು ಆಳವಾಗಿ ಅವಳ ಎದೆಯನ್ನು ಸುಟ್ಟುಹಾಕಿತ್ತು.

೬

ಪರ್ಲ್! ಅವಳ ಮಗು ಪರ್ಲ್! (ಮುತ್ತು!)—ಹೆಸ್ಟರ್ ತನ್ನ ಮಗು ವಿಗೆ ಆ ಹೆಸರಿಟ್ಟಿದ್ದಳು. ಅಂದರೆ ಮುತ್ತಿನ ಸ್ನಿಗ್ಧಭಾವ, ಎಣೆಯಿಲ್ಲದ ಹೊಳಪು ಅವಳ ಗುಣದಲ್ಲಿ ಮೂಡಿ ಬಂದಿದ್ದಿತೆಂದಲ್ಲ. ಆದರೆ ತನ್ನ ಸರ್ವಸ್ವವನ್ನೂ ಕೊಟ್ಟು, ಬಹಳ ಬೆಲೆ ಬಾಳುವ ಆ ಒಂದೇ ಒಂದು ಆಸ್ತಿಯನ್ನು ಕೊಂಡಿದ್ದಳು! ಅವಳ ಪಾಪವನ್ನು ಎತ್ತಿ ತೋರಿಸುವುದಕ್ಕೆ ಮಾನವ ಒಂದು ಕೆಂಪು ಅಕ್ಷರವನ್ನು ತಗುಲಿಸಿದ್ದ. ಅದರಿಂದಾಗಿ ಅವಳಿಗೆ ಯಾರ ಸಹಾನುಭೂತಿಯೂ ದೊರೆಯುವಂತಿರಲಿಲ್ಲ. ದೇವರು ಅವಳ ಪಾಪದ ಫಲವಾಗಿ ಅವಳಿಗೆ ಆ ಸುಂದರವಾದ ಮಗುವನ್ನು ದಯಪಾಲಿಸಿದ್ದ. ಹೆಸ್ಟರ್‌ಳಿಗೆ ತಾನು ಮಾಡಿದ್ದೂ ಪಾಪವೆಂಬುದು ತಿಳಿದಿತ್ತು. ಅದರ ಫಲವೂ ಒಳ್ಳೆಯದಾಗುತ್ತದೆಂಬ ಆಶೆಯಿರಲಿಲ್ಲ. ತನ್ನ ಅಪರಾಧದ ಫಲವಾಗಿ ಹುಟ್ಟಿದ ಆ ಮಗುವಿನ ಸ್ವಭಾವದಲ್ಲಿ ಯಾವುದಾದರೂ ಕೆಟ್ಟ ವೈಚಿತ್ರ್ಯಗಳು ಇವೆಯೋ ಎಂದು, ದಿನೇ ದಿನೇ ಆ ಮಗು ಬೆಳೆದಂತೆಲ್ಲಾ ಹೆದರತೊಡಗಿದಳು.

ಆ ಮಗುವಿನಲ್ಲಿ ಯಾವ ಅಂಗವಿಕಾರವೂ ಇರಲಿಲ್ಲ. ಅದರ ನ್ಯೂನರಹಿತವಾದ ಆಕಾರ, ಉತ್ಸಾಹ, ಚಟುವಟಿಕೆಗಳಿಂದಾಗಿ ದೇವತೆಗಳ ಆಟದ ಗೊಂಬೆಯಾಗಲು ಯೋಗ್ಯವಾದಂತಿತ್ತು ಆ ಮಗು. ಅಕಳಂಕ ಸೌಂದರ್ಯದೊಂದಿಗೆ ಸ್ವಭಾವಸಹಜವಾದ ಲಾವಣ್ಯವೂ ಸೇರಿ, ಸಾಧಾರಣವಾದ ಉಡುಪನ್ನು ಧರಿಸಿದ್ದರೂ, ಆ ಬಟ್ಟೆಯೇ ಅವಳಿಗೆ ಮನೋಹರವಾಗಿ ಒಪ್ಪುತ್ತಿತ್ತು. ಪರ್ಲ್ ಸಾಧಾರಣವಾದ ಬಟ್ಟೆಗಳನ್ನು ಧರಿಸುತ್ತಿರಲಿಲ್ಲ. ಅವಳ ತಾಯಿ, ಬಹಳ ಬೆಲೆಬಾಳುವ ಬಟ್ಟೆಯನ್ನು ಕೊಂಡು, ತನ್ನ ಕಾಲ್ಪನಿಕ ಶಕ್ತಿಯನ್ನೆಲ್ಲಾ ಉಪಯೋಗಿಸಿ ಕಸೂತಿ ಹಾಕಿ ತನ್ನ ಮಗುವಿಗೆ ತೊಡಿಸುತ್ತಿದ್ದಳು. ಈ ಉಡುಪಿನಿಂದಾಗಿ ಅವಳ ಸೌಂದರ್ಯಕ್ಕೆ ಮತ್ತಷ್ಟು ಕಳೆಯುಂಟಾಗಿ, ಆ ಪುಟ್ಟ ಮಗು ಅತ್ಯಂತ ಮನೋಹರವಾಗಿ ಕಾಣು

ತ್ತಿದ್ದಳು. ಕತ್ತಲೆಯ ಗುಡಿಸಲನ್ನು ತನ್ನ ರೂಪಿನಿಂದ ಬೆಳಗುತ್ತಿದ್ದಳು.

ಆ ಮಗುವಿನ ಸ್ವಭಾವವೂ ವಿಚಿತ್ರವಾಗಿತ್ತು. ತಾನು ಜನಿಸಿದ್ದ ಈ ಪ್ರಪಂಚಕ್ಕೆ ಹೊಂದಿಕೊಳ್ಳುವುದೇ ಅದಕ್ಕೆ ಕಷ್ಟವಾಗಿತ್ತು. ಯಾವ ನಿಬಂಧನೆಗೂ ಅದು ಸಗ್ಗುವಂತಿರಲಿಲ್ಲ. ಅವಳು ಜನ್ಮವೆತ್ತಿದ್ದರಿಂದಲೇ ಒಂದು ದೊಡ್ಡ ಕಟ್ಟಳೆಯನ್ನು ಉಲ್ಲಂಘಿಸಿದಂತಾಗಿತ್ತು. ಅದರ ಫಲ ಸುಂದರವಾಗಿದ್ದರೂ ಅವ್ಯವಸ್ಥಿತವಾದ ತನ್ನದೇ ಒಂದು ವೈಶಿಷ್ಟ್ಯದಿಂದ ಕೂಡಿದ ಮಗು. ಪರ್ಲ್ ಇನ್ನೂ ತನ್ನ ಹೊಟ್ಟೆಯಲ್ಲಿರುವಾಗ ತನ್ನ ಮನೋವಿಕಾರಗಳೇ ಇದಕ್ಕೆ ಕಾರಣವೆಂದು ತಿಳಿದಳು ಹೆಸ್ಟರ್. ಆ ಸಮಯದಲ್ಲಿ ಹೆಸ್ಟರಳ ಮನಸ್ಸಿನ ಹೋರಾಟಗಳೆಲ್ಲಾ ಅವಳ ಮಗುವಿನಲ್ಲಿ ಮೂಡಿಬಂದಿದ್ದವು. ಪರ್ಲ್ ತೋರಿಸುತ್ತಿದ್ದ, ಮೊಂಡಾಟ, ಕೋಪ, ವಿಷಣ್ಣತೆ ಇವೆಲ್ಲಾ ಹೆಸ್ಟರ್‌ಳಿಗೆ ತನ್ನ ಹೃದಯದಲ್ಲಿ ಕುದಿಯುತ್ತಿದ್ದ ಭಾವನೆಗಳನ್ನು ನೆನಪು ಮಾಡಿಕೊಡುತ್ತಿತ್ತು. ಈ ಗುಣಗಳು ಈಗತಾನೇ ಆ ಸಣ್ಣ ಮಗುವಿನ ಸ್ವಭಾವದಲ್ಲಿ ಕಾಣಿಸಿಕೊಳ್ಳುತ್ತಿದ್ದವು. ಆದರೆ ಮುಂದೆ ವರ್ಷಗಳುರುಳಿದಂತೆ ಚಂಡಮಾರುತದಂತೆ ಹೆಚ್ಚಬಹುದಾಗಿತ್ತು.

ಆಗಿನ ಕಾಲದ ಸಂಸಾರದ ನಡವಳಿಕೆಯ ನಿಯಮಗಳು ಈಗಿನದಕ್ಕಿಂತ ಬಹಳ ಬಿಗಿಯಾಗಿದ್ದವು. ಕೋಪ, ಬೈಗುಳ, ಹೊಡೆತ ಇವೆಲ್ಲಾ ಬೈಬಲ್ಲಿಗೆ ಸಮ್ಮತವಾದ ಅಧಿಕಾರದಿಂದ ಉಪಯೋಗಿಸಲ್ಪಡುತ್ತಿತ್ತು. ತಪ್ಪಿಗೆ ಶಿಕ್ಷೆಯನ್ನು ವಿಧಿಸುವುದಕ್ಕೇ ಅಲ್ಲದೆ ಮಕ್ಕಳ ಗುಣಗಳನ್ನು ತಿದ್ದುವುದಕ್ಕೂ ಇದೇ ಮಾರ್ಗವನ್ನೇ ಅನುಸರಿಸುತ್ತಿದ್ದರು. ಹೆಸ್ಟರ್ ಪ್ರೈನ್ ತನ್ನ ಮಗುವನ್ನು ಕಠಿಣವಾಗಿ ಶಿಕ್ಷಿಸುವ ತಪ್ಪಿಗೆ ಕೈಹಾಕಲಿಲ್ಲ. ತನ್ನ ತಪ್ಪುಗಳನ್ನೂ ದೌರ್ಭಾಗ್ಯವನ್ನೂ ನೆನಪಿನಲ್ಲಿಟ್ಟುಕೊಂಡು, ತನ್ನ ಮಗುವಿನ ಮೇಲೆ ಮಮತೆಯಿಂದ ಕೂಡಿದ್ದರೂ ಬಿಗಿಯಾದ ಹತೋಟಿಯನ್ನಿಡತೊಡಗಿದಳು. ಆದರೆ ಅದರ ನಿರ್ವಹಣೆ ಅವಳ ಕೈಮೀರಿದುದಾಗಿತ್ತು. ಒಳ್ಳೆಯ ಮಾತಿನಲ್ಲಿ ಹೇಳಿದ್ದಾಯಿತು, ಕೋಪ ತೋರಿಸಿಯಾಯಿತು. ಯಾವುದಕ್ಕೂ ಸಗ್ಗದಿರಲು ತನ್ನ ಮನಸ್ಸಿಗೆ ಬಂದಂತೆ ಮಾಡಿಕೊಳ್ಳಲಿ ಎಂದು ಹೆಸ್ಟರ್ ಸುಮ್ಮನಾಗಬೇಕಾಯಿತು. ಪರ್ಲ್ ಇನ್ನೂ ಹಸುಳೆಯಾಗಿದ್ದಾಗಲೇ ಅವಳ ತಾಯಿಗೆ ಒಂದು ವಿಚಿತ್ರ ನೋಟದ ಬಳಕೆಯಾಯಿತು. ಆ ನೋಟ ಅವಳ ಕಣ್ಣಲ್ಲಿ ಮೂಡಿದಾಗ ಯಾವ ಉಪಾಯಕ್ಕೂ ಸಗ್ಗುವುದಿಲ್ಲವೆಂಬುದು ಹೆಸ್ಟರ್‌ಳಿಗೆ ತಿಳಿದುಬಿಡುತ್ತಿತ್ತು. ಅಂತಹ ಸಮಯಗಳಲೆಲ್ಲಾ ಪರ್ಲ್ ಮನುಷ್ಯ ಜಾತಿಗೆ ಸೇರಿದವಳೇ ಎಂದು ಸಂಶಯಬರುತ್ತದೆ. ಸ್ವಲ್ಪ

ಕಾಲ ವಿಧವಿಧವಾಗಿ ಆಟವಾಡಿಕೊಂಡಿದ್ದು, ಅನಂತರ ಅಣಕಿಸುತ್ತಾ ಆ ಗುಡಿಸಿಲಿನಿಂದ ಹಾರಿಹೋಗುವ ದೇವತೆಯಂತೆ ಕಾಣುತ್ತಿದ್ದಳು. ಪ್ರಕಾಶ ಮಾನವಾದ ಅವಳ ವಿಶಾಲ ನೇತ್ರಗಳಲ್ಲಿ ಆ ನೋಟ ಕಾಣಿಸಿ ಕೊಂಡಾಗಲೆಲ್ಲಾ, ಗಾಳಿಯಲ್ಲಿ ಹಾರಾಡುತ್ತಿರುವ ಅವಳು ಯಾವ ಕ್ಷಣದಲ್ಲಿಯೋ ಮಾಯವಾಗಿಬಿಡಬಹುದು ಎನ್ನಿಸುತ್ತಿತ್ತು. ಅದನ್ನು ಕಂಡ ಕೂಡಲೇ ಹೆಸ್ಟರ್ ಮಗುವಿನ ಬಳಿಗೆ ಧಾವಿಸಿ ಅವಳನ್ನು ಬಾಚಿ ಬಿಗಿಯಾಗಿ ತನ್ನೆದೆಗೆ ಅಪ್ಪಿ, ಮುತ್ತಿನ ಮಳೆಕರೆಯುತ್ತಾಳೆ. ಉಕ್ಕಿಬರುವ ಪ್ರೀತಿಗಿಂತಲೂ ಹೆಚ್ಚಾಗಿ ತನ್ನ ಪರ್ಲ್ ಇನ್ನೂ ದೇಹಸಮೇತವಾಗಿಯೇ ಇದ್ದಾಳೆ, ಭ್ರಮೆಯಲ್ಲ ಎಂದು ಖಂಡಿತ ಮಾಡಿಕೊಳ್ಳುವ ಸಲುವಾಗಿ ಹಾಗೆ ಮಾಡುತ್ತಾಳೆ. ತನ್ನ ತಾಯಿ ಬಂದು ತನ್ನನ್ನು ಹಿಡಿದುಕೊಂಡಾಗ ಪರ್ಲ್ ಆನಂದದಿಂದ ಕುಣಿದು ಹಾಡತೊಡಗುತ್ತಾಳೆ. ಅವಳ ತಾಯಿಯ ಸಂಶಯ ಮೊದಲಿಗಿಂತ ಹೆಚ್ಚಾಗುತ್ತದೆ. ತಾನು ಅಪಾರವಾದ ಬೆಲೆ ಕೊಟ್ಟು ಪಡೆದ, ತನ್ನ ನಿಧಿಯಾದ ಮಗುವಿಗೂ, ಮತ್ತು ತನಗೂ ನಡುವೆ ಆವರಿಸಿದ್ದ ಈ ಕಟ್ಟನ್ನು ಕಂಡು ಕೆಲವು ವೇಳೆ ಹೆಸ್ಟರ್ ಉದ್ವೇಗದಿಂದ ಅತ್ತುಬಿಡುತ್ತಾಳೆ. ಅವಳ ಹೃದಯದ ಯಾತನೆಯನ್ನರಿಯಲಾರದ ಪರ್ಲ್ ಗಟ್ಟಿಯಾಗಿ ನಗತೊಡಗುತ್ತಾಳೆ. ಮತ್ತೆ ಒಮ್ಮೊಮ್ಮೆ ಕೋಪಗೊಂಡು ಅಳುತ್ತಲೇ, ಬಿಕ್ಕುತ್ತ ತನ್ನ ಪ್ರೇಮವನ್ನು ಮುದ್ದು ಮಾತುಗಳಿಂದ ವ್ಯಕ್ತ ಪಡಿಸಲು ಪ್ರಯತ್ನಪಡುತ್ತಾಳೆ. ಈರೀತಿಯ ಕೋಮಲತೆಯನ್ನು ಹೆಸ್ಟರ್ ನಂಬುವಂತೆಯೂ ಇರಲಿಲ್ಲ. ಏಕೆಂದರೆ ಅದು ಬಂದಂತೆಯೇ ಮಾಯ ವಾಗುತ್ತಿತ್ತು. ಈ ವಿಷಯಗಳನ್ನೆಲ್ಲಾ ಚಿಂತಿಸಿ ತಾನು ಯಾವುದೋ ಭೂತವನ್ನು ಆವಾಹನೆ ಮಾಡಿ ಅದನ್ನು ಹತೋಟಿಯಲ್ಲಿಡುವ ಕಟ್ಟು ಮಾತನ್ನು ತಿಳಿದುಕೊಳ್ಳದೆ ಹೆಣಗುತ್ತಿರುವಂತೆ ಭಾಸವಾಯಿತು ಹೆಸ್ಟರ್ ಪ್ರೈನ್‌ಳಿಗೆ. ಮಗು ನಿದ್ದೆಮಾಡುತ್ತಿದ್ದಾಗ ಮಾತ್ರ ಹೆಸ್ಟರ್‌ಳಿಗೆ ಕೊಂಚ ಶಾಂತಿ ದೊರೆಯುತ್ತಿತ್ತು. ಒಂದೆರಡು ಗಂಟೆಗಳ ಕಾಲ ಈ ಸುಖವನ್ನನು ಭವಿಸುವುದರಲ್ಲಿಯೇ ಪರ್ಲ್ ಎದ್ದುಬಿಡುತ್ತಿದ್ದಳು.

ಎಷ್ಟು ಬೇಗ ತನ್ನ ತಾಯ ಹಸನ್ಮುಖದೆದುರಿಗೆ ಪರ್ಲ್ ಬೆಳೆದು ಬಿಟ್ಟಳು! ವೈಶಿಷ್ಟ್ಯ ಪೂರ್ಣವಾದ ಅವಳ ಕೋಗಿಲೆಯಂತಹ ಕಂಠ ಮಿಕ್ಕ ಮಕ್ಕಳ ದನಿಯ ಜೊತೆಯಲ್ಲಿ ಬೆರೆತು ಕೂಗುತ್ತಿರುವುದನ್ನು ಕೇಳಿ ಹೆಸ್ಟರ್‌ಳಿಗೆ ಎಷ್ಟು ಆನಂದವಾಗಬೇಕಾಗಿತ್ತೊ! ಆದರೆ ಅದು ಖಂಡಿತ ಸಾಧ್ಯವಿರಲಿಲ್ಲ. ಪರ್ಲ್ ಹುಟ್ಟನಿಂದಲೇ ಬಹಿಷ್ಕೃತಳಾಗಿದ್ದಳು. ಅವಳೊಂದು

ದೆವ್ವ, ಪಾಪದ ಪ್ರತೀಕ, ಜ್ಞಾನಸ್ನಾನ ಮಾಡಿ ಕ್ರೈಸ್ತರಾದ ಮಕ್ಕಳ ಜೊತೆ ಯಲ್ಲಿ ಬೆರೆಯುವ ಹಕ್ಕು ಅವಳಿಗಿರಲಿಲ್ಲ. ಅದಕ್ಕಿಂತ ಆಶ್ಚರ್ಯದ ಸಂಗತಿ ಯೆಂದರೆ ತನ್ನ ಸ್ಥಿತಿಯನ್ನರಿತೋ ಏನೋ ಪರ್ಲ್ ಮಿಕ್ಕ ಮಕ್ಕಳ ಜೊತೆ ಸೇರಲು ಬಯಸುತ್ತಿರಲೂ ಇಲ್ಲ. ಯಾವಾಗಲೂ ತನ್ನ ತಾಯ ಬಳಿಯೇ ಇರುತ್ತಾಳೆ—ಅವಳ ಪುಟ್ಟ ಸಂಗಾತಿಯಾಗಿ ಆಕೆಯ ಕೈಹಿಡಿದು ಜೊತೆ ಯಲ್ಲಿಯೇ ನಡೆಯುತ್ತಾಳೆ, ಇಲ್ಲವೇ ಮೂರು ನಾಲ್ಕು ಹೆಜ್ಜೆ ಮುಂದೆ ಓಡುತ್ತಿರುತ್ತಾಳೆ. ಹೀಗೆ ಹೋಗುತ್ತಿರುವಾಗ ಅನೇಕಬಾರಿ ಆ ಊರಿನ ಮಕ್ಕಳು ಅಲ್ಲಲ್ಲೇ ಗುಂಪು ಕಟ್ಟಿಕೊಂಡು ಆಟವಾಡುವುದನ್ನು ಪರ್ಲ್ ಕಂಡಿದ್ದಾಳೆ. ಆ ಊರಿನ ಮಕ್ಕಳು ಆಟವಾಡುವಾಗ ತಮ್ಮ ಹಿರಿಯರ ನಡೆನುಡಿಗಳನ್ನೇ ಅನುಕರಿಸುತ್ತಾರೆ. ಇಗರ್ಜಿಗೆ ಹೋಗುವ ಆಟ; ಕ್ವೇಕರ್ ಪಂಗಡದವರಿಗೆ ಉಪದ್ರವ ಕೊಡುವ ಆಟ; ರೆಡ್ ಇಂಡಿಯನ್ ಜನರೊಡನೆ ಯುದ್ಧ ಮಾಡಿ, ನೆತ್ತಿಯ ಚರ್ಮ ಸುಲಿದುಕೊಳ್ಳುವ ಆಟ; ಒಬ್ಬರಿಗೊಬ್ಬರು ಮಾಟಮಾಡಿ ಹೆದರಿಸುವ ಆಟ ಇಂಥವೇ. ಪರ್ಲ್ ಇವ ನ್ನೆಲ್ಲಾ ಎವೆಯಿಕ್ಕದೆ ನೋಡುತ್ತಿದ್ದರೂ ಆ ಮಕ್ಕಳ ಗೆಳೆತನ ಬೆಳೆಸುವ ಗೋಜಿಗೆ ಹೋಗುತ್ತಿರಲಿಲ್ಲ; ಮಾತನಾಡುವುದಕ್ಕೂ ಹೋಗುತ್ತಿರಲಿಲ್ಲ. ಅವಳ ಸುತ್ತ ಮಕ್ಕಳು ಗೇರಾಯಿಸಿಕೊಂಡರೆ, ಅಸಂಬದ್ಧವಾಗಿ ಅರಚುತ್ತಾ ಅವರೆಡೆಗೆ ಕಲ್ಲು ಬೀಸುತ್ತಾಳೆ. ಇದನ್ನು ಕೇಳಿ ತನಗೆ ತಿಳಿಯದ ಭಾಷೆಯಲ್ಲಿ ಶಪಿಸುತ್ತಿರುವ ಮಾಟಗಾರ್ತಿಯ ಮಾತನ್ನು ಕೇಳಿದಂತೆ ಹೆಸ್ಟರ್ ನಡಗು ತ್ತಾಳೆ.

ಇದರಲ್ಲಡಗಿದ್ದ ಸತ್ಯಾಂಶವೇನೆಂದರೆ, ನಿಷ್ಕರುಣಿಗಳಾದ ತಮ್ಮ ಹಿರಿಯರಂತೆಯೇ ಆ ಪುಟ್ಟ ಸುಧಾರಕರಿಗೂ ಈ ತಾಯಿ ಮಕ್ಕಳನ್ನು ಕಂಡಾಗ, ಇಹಲೋಕಕ್ಕೆ ಸಂಬಂಧವಿರದ, ಲೋಕರೂಢಿಗೆ ವಿರುದ್ಧವಾದವ ರೆಂಬ ಭಾವನೆ ಮೂಡಿತ್ತು. ಅವರಿಬ್ಬರನ್ನು ಕಂಡಾಗಲೆಲ್ಲಾ, ದ್ವೇಷವುಕ್ಕಿ ಬಾಯಿಗೆ ಬಂದಂತೆ ಬೈಯ್ಯುತ್ತಿದ್ದರು. ಆ ದ್ವೇಷ ಪರ್ಲ್‌ಳ ಪುಟ್ಟ ಹೃದ ಯಕ್ಕೆ ಅರಿವಾಗಿ ಸೇಡು ತೀರಿಸಿಕೊಳ್ಳಲು ಪ್ರಯತ್ನಪಡುತ್ತಿದ್ದಳು. ಈ ರೀತಿಯ ಕೋಪ ಪ್ರದರ್ಶನ ಅವಳ ತಾಯಿಗೆ ಒಂದು ವಿಧವಾದ ಸಮಾ ಧಾನವನ್ನುಂಟುಮಾಡುತ್ತಿತ್ತು. ಆದರೂ ಹೆಸ್ಟರ್‌ಳಿಗೆ ತನ್ನ ಮಗುವಿನಲ್ಲ ಡಗಿದ್ದ ದುಷ್ಟ ಛಾಯೆಯನ್ನು ಕಂಡು ಭಯವಾಗುತ್ತಿತ್ತು. ಈ ರೀತಿಯ ಕೋಪ, ದ್ವೇಷಗಳನ್ನು ತನ್ನಿಂದಲೇ ಆ ಮಗು ಪಡೆದಿತ್ತು. ತಾಯಿ ಮಕ್ಕಳಿಬ್ಬರೂ ಸಮಾಜದಿಂದ ದೂರವಾಗಿದ್ದುದರ ಫಲವಾಗಿಯೇ ಪರ್ಲ್‌ಳ

ಮನಸ್ಸಿನಲ್ಲಿ ಈ ಭಾವನೆಗಳು ಬರಲು ಕಾರಣವಾಯಿತು. ಪರ್ಲ್ ಹುಟ್ಟು ವುದಕ್ಕೆ ಮುಂಚೆ ಹೆಸ್ಟರ್ ಕೂಡ ಅದೇ ರೀತಿಯೇ ಇದ್ದಳು. ಆದರೆ ತಾನು ತಾಯಾದ ಮೇಲೆ ಆ ಭಾವನೆಗಳೆಲ್ಲಾ ನಿಧಾನವಾಗಿ ಕಡಮೆಯಾಗ ತೊಡಗಿದ್ದವು

ತಮ್ಮ ಗುಡಿಸಲ ಬಳಿಯಲ್ಲೂ ಪರ್ಲ್ ಯಾರ ಗೆಳೆತನವನ್ನೂ ಬಯಸು ತ್ತಿರಲಿಲ್ಲ. ಒಂಟಿಯಾಗಿಯೇ ಆಟವಾಡಿಕೊಳ್ಳುತ್ತಾಳೆ. ಒಂದು ಕೋಲು, ನಾಲ್ಕಾರು ಹರಕು ಬಟ್ಟೆಯ ಚೂರುಗಳು, ಒಂದು ಹೂವು ಇಷ್ಟೇ ಅವಳ ಆಟದ ಸಾಮಾನುಗಳು. ತನ್ನ ಕಲ್ಪನಾಶಕ್ತಿಯಿಂದ ಏನೇನೋ ರಚಿಸಿ ಕೊಳ್ಳುತ್ತಾಳೆ. ಮರಮರನೆ ಶಬ್ದಮಾಡುತ್ತ ಭೂತಾಕಾರದಲ್ಲಿ ನಿಂತಿರುವ ಕರಿಯ ಪೈನ್ ಮರಗಳೇ ಸುಧಾರಕರು; ತೋಟದಲ್ಲಿ ಬೆಳೆದ ತುಚ್ಛವಾದ ಕಳೆಯ ಗಿಡಗಳೇ ಅವರ ಮಕ್ಕಳು ಎಂದು ಭಾವಿಸಿ, ಪರ್ಲ್ ಅವನ್ನು ಒದ್ದು, ಬುಡಸಹಿತ ಕಿತ್ತು ಕಾಲಕೆಳಗೆ ಹಾಕಿಕೊಂಡು ಹೊಸಗಿಬಿಡುತ್ತಾಳೆ. ಮರುಕ್ಷಣವೇ ಆಯಾಸಗೊಂಡವಳಂತೆ ಕಳೆಗುಂದುತ್ತಾಳೆ. ಅವಳ ಮನಸ್ಸಿ ನಲ್ಲಿ ಸ್ನೇಹಿತರನ್ನು ಕಲ್ಪಿಸಿಕೊಂಡು ಆಟವಾಡಿದ್ದೇ ಇಲ್ಲ. ವಿಷವೃಕ್ಷವನ್ನು ನೆಟ್ಟು, ಅದರಿಂದ ಹೊರಟ ಶತ್ರುಗಳನ್ನು ಧ್ವಂಸಮಾಡಲು ಯುದ್ಧಕ್ಕೆ ನುಗ್ಗುತ್ತಾಳೆ. ಇಷ್ಟು ಪುಟ್ಟ ಮಗು, ಸುತ್ತ ಪ್ರಪಂಚ ತನಗೆ ವಿರೋಧ ವಾಗಿರುವುದನ್ನರಿತು, ಅದನ್ನು ಎದುರಿಸಲು ತನ್ನ ಮನಸ್ಸನ್ನುತರಬೇತು ಮಾಡಿಕೊಳ್ಳುತ್ತಿರುವುದನ್ನು ಕಂಡು, ಇದಕ್ಕೆ ಕಾರಣವನ್ನರಿತ ಹೆಸ್ಟರ್‌ಳ ದುಃಖಕ್ಕೆ ಮಿತಿಯೇ ಇರಲಿಲ್ಲ.

ತನ್ನ ಮಗುವಿನ ಆಟವನ್ನು ಕಂಡಾಗಲೆಲ್ಲಾ ಹೆಸ್ಟರ್‌ಳ ಕೈಲಿದ್ದ ಕಸೂತಿ ತಾನಾಗಿಯೇ ಜಾರಿ ಬೀಳುತ್ತದೆ. ತಡೆಹಿಡಿಯಲು ಪ್ರಯತ್ನಿಸಿ ದರೂ ಸಾಧ್ಯವಾಗದೆ ಅವಳ ಹೃದಯದ ನೋವು ತಾನಾಗಿಯೇ ಕೂಗಿ ಕೊಳ್ಳುತ್ತದೆ—'ಅಯ್ಯೋ ಭಗವಂತ! ನಿನಗೆ ನಿಜವಾಗಿಯೂ ನನ್ನ ಮೇಲೆ ಕರುಣೆಯಿದ್ದರೆ, ಇಂತಹ ಮಗುವನ್ನು ಏಕೆ ಕೊಟ್ಟೆಯಪ್ಪಾ!' ಇದನ್ನು ಕೇಳಿಸಿಕೊಂಡ ಪರ್ಲ್, ಅದರಲ್ಲಡಗಿದ್ದ ನೋವನ್ನರಿತೋ ಏನೋ, ತನ್ನ ಸುಂದರವಾದ ಮುಖವನ್ನು ತಾಯೆಡೆಗೆ ತಿರುಗಿಸಿ ನಸುನಕ್ಕು, ಪುನಃ ತನ್ನ ಆಟದಲ್ಲಿ ಮಗ್ನಳಾಗುತ್ತಾಳೆ.

ಇನ್ನೊಂದು ವಿಚಿತ್ರವೆಂದರೆ, ಪರ್ಲ್ ತನ್ನ ಜೀವನದ ಮೊಟ್ಟಮೊದ ಲಲ್ಲೇ ಕಂಡದ್ದೇನು? ಮಿಕ್ಕ ಮಕ್ಕಳಂತೆ ತನ್ನ ತಾಯ ನಗುಮುಖವನಲ್ಲ, ಅವಳ ಎದೆಯ ಮೇಲಿದ್ದ ಕೆಂಪು ಅಕ್ಷರ! ಪರ್ಲ್ ಹಸುಳೆಯಾಗಿದ್ದಾಗ

ಒಂದು ದಿನ ತನ್ನ ತಾಯಿ ತೊಟ್ಟಿಲ ಬಳಿ ಬಗ್ಗಿದಾಗ, ಸ್ವರ್ಣದಾರದಿಂದ ಕಸೂತಿ ಮಾಡಿದ ಆ ಕೆಂಪು ಅಕ್ಷರ ಅವಳ ಕಣ್ಣಿಗೆ ಬಿತ್ತು. ನಗುತ್ತಾ ಅದರೆಡೆಗೆ ತನ್ನ ಪುಟ್ಟ ಕೈಗಳನ್ನು ಸರ್ರನೆ ಚಾಚಿ ಅದನ್ನು ಹಿಡಿದು ಕೊಂಡಳು. ಅದರ ನಗು ಅರ್ಥಗರ್ಭಿತವಾಗಿದ್ದಂತೆ ತೋರುತ್ತಿತ್ತು. ಹೆಸ್ಟರ್ ಪ್ರೈನ್‌ಳಿಗೆ ಉಸಿರು ಸಿಕ್ಕಿಕೊಂಡಂತಾಗಿ ಆತಂಕ ಚಿಹ್ನೆಯಿಂದ ಮಗುವಿನ ಕೈಕಿತ್ತುಬಿಡುವ ಮನಸ್ಸಾಯಿತು. ಆ ಹಸುಳೆಯ ಅರ್ಥಗರ್ಭಿತ ವಾದ ಹಸ್ತಸ್ಪರ್ಶದಿಂದ ಅವಳ ಹೃದಯಕ್ಕೆ ಅತಿಯಾದ ವೇದನೆಯುಂಟಾ ಯಿತು. ತನ್ನ ತಾಯಿಯ ಯಾತನೆಯೇ ತನಗೆ ಆಟವಾಗಿದ್ದಂತೆ, ಆ ಮಗು ಅವಳನ್ನು ನೋಡಿ ನಗುತ್ತಿತ್ತು. ಅಂದಿನಿಂದ, ಮಗುವು ನಿದ್ದೆ ಮಾಡುತ್ತಿರುವ ಸಮಯ ಬಿಟ್ಟು ಮಿಕ್ಕ ವೇಳೆಯಲ್ಲೆಲ್ಲಾ ಒಂದು ಕ್ಷಣವೂ ಹೆಸ್ಟರ್‌ಳ ಮನಸ್ಸಿಗೆ ಸಮಾಧಾನವಿರುತ್ತಿರಲಿಲ್ಲ. ಒಂದೊಂದು ಸಲ ವಾರ ಗಟ್ಟಲೆ ಆ ನೋಟ ಪರ್ಲ್‌ಳ ಕಣ್ಣಲ್ಲಿ ಮೂಡುವುದಿಲ್ಲ. ಮತ್ತೆ ಸಿಡಿಲೆರಗಿ ದಂತೆ ಒಮ್ಮೆಗೇ ವಿಚಿತ್ರ ನಗುವಿನೊಂದಿಗೆ ಕೂಡಿ ಆ ವಿಲಕ್ಷಣ ನೋಟ ಮೂಡುತ್ತದೆ.

ಎಲ್ಲ ತಾಯಂದಿರೂ ತಮ್ಮ ಮಕ್ಕಳ ಕಣ್ಣಲ್ಲಿ ತಮ್ಮ ಪ್ರತಿಬಿಂಬವನ್ನು ನೋಡಿಕೊಂಡು ಸುಖಪಡುವಂತೆ, ಒಮ್ಮೆ ಹೆಸ್ಟರ್ ಪ್ರೈನ್‌ಳೂ ನೋಡುತ್ತಾ ಕುಳಿತಿದ್ದಾಗ ಇದ್ದಕ್ಕಿದ್ದಂತೆ, ಆ ಕೆಣಕುವ ತುಂಟ ನೋಟ ಮಗುವಿನ ಕಣ್ಣಲ್ಲಿ ಮೂಡಿತು. ಆ ಕಪ್ಪಾದ ಕಣ್ಣುಗಳಲ್ಲಿ ತನ್ನ ಪ್ರತಿಬಿಂಬ ಕಾಣುವ ಬದಲು ಮತ್ತಾವುದೋ ಮುಖ ಕಾಣಿಸತೊಡಗಿತು. ತನ್ನನ್ನು ಹೀಯಾಳಿಸು ವಂತಿದ್ದ ಅಮಾನುಷವಾದ ಆ ಮುಖ ತನಗೆ ಚಿರಪರಿಚಿತವಾದಂತಿತ್ತು. ಮಗುವನ್ನು ಹಿಡಿದಿದ್ದ ದೆವ್ವವೊಂದು ಅದರ ಕಣ್ಣಲ್ಲಿ ಇಣಕಿ ತನ್ನನ್ನು ಅಣ ಕಿಸುವಂತಿತ್ತು. ಮುಂದೆ ಅನೇಕ ಬಾರಿ ಇದೇ ರೀತಿಯ ಭ್ರಾಂತಿಯಿಂದ ಹೆಸ್ಟರ್‌ಳ ಮನಸ್ಸು ಚಿತ್ರಹಿಂಸೆಗೆ ಒಳಗಾಗುತ್ತಿತ್ತು.

ಪರ್ಲ್ ಬೆಳೆದು, ಓಡಾಡುವ ವಯಸ್ಸಿಗೆ ಬಂದ ಮೇಲೆ ಒಂದು ದಿನ ಕೈತುಂಬ ಕಾಡು ಹೂಗಳನ್ನು ಕಿತ್ತು, ತನ್ನ ತಾಯಿಯ ಎದೆಗೆ ಗುರಿಯಿಟ್ಟು ಎಸೆದು ಹಿಗ್ಗುತ್ತಾ ಆಟವಾಡುತ್ತಿದ್ದಳು. ಹೂವು ಕೆಂಪು ಅಕ್ಷರಕ್ಕೆ ತಗುಲಿ ತೆಂದರೆ ಸಾಕು ಕುಣಿದು ಕುಪ್ಪಳಿಸಿ ಕುನ್ನಿ ಪಿಶಾಚಿಯಂತೆ ನರ್ತನ ಮಾಡು ತ್ತಿದ್ದಳು. ಹೆಸ್ಟರ್‌ಳಿಗೆ ತನ್ನ ಎರಡು ಕೈಗಳಿಂದಲೂ ತನ್ನ ಎದೆಯನ್ನು ಮುಚ್ಚಿಕೊಳ್ಳಬೇಕೆಂಬ ಮನಸ್ಸಾಯಿತು. ಆದರೂ ಗರ್ವದಿಂದಲೋ ಅಥವಾ ಸಹನೆಯಿಂದಲೋ, ಇಲ್ಲವೇ ಈ ಯಾತನೆಯಿಂದ ತನ್ನ ಪಾಪಕ್ಕೆ

ಪ್ರಾಯಶ್ಚಿತ್ತವಾಗುತ್ತದೆಂಬ ಭಾವನೆಯಿಂದಲೋ ಏನೋ, ನೆಟ್ಟಗೆ ಕುಳಿತು, ವಿವರ್ಣಳಾಗಿ, ನಿಸ್ತೇಜವಾದ ಕಣ್ಣುಗಳಿಂದ ತನ್ನ ಮಗುವನ್ನೇ ನೋಡುತ್ತಾ ಕುಳಿತಳು. ಒಂದೇ ಸಮನಾಗಿ ತನ್ನೆದೆಯ ಮೇಲೆ ಹೂವಿನ ಮಳೆ ಸುರಿದು ಹೇಳಲಾರದ ವೇದನೆಯುಂಟುಮಾಡುತ್ತಿತ್ತು. ಇಹದಲ್ಲಾಗಲೀ ಪರದಲ್ಲಾಗಲೀ ಆ ವೇದನೆಗೆ ಮದ್ದೇ ಇರಲಿಲ್ಲ. ತನ್ನ ಕೈಯ್ಯಲ್ಲಿದ್ದ ಹೂವೆಲ್ಲಾ ಮುಗಿದ ಮೇಲೆ ಮಗು ಹೆಸ್ಟರ್‌ಳನ್ನೇ ದಿಟ್ಟಿಸಿ ನೋಡುತ್ತಾ ನಿಂತಳು. ಆ ಮಗುವಿನ ಕಣ್ಣಲ್ಲಿ ಪಿಶಾಚಿ ಇಣುಕಿ ನೋಡಿ ತನ್ನನ್ನು ಅಣುಕಿಸುತ್ತಿರುವಂತೆ ಭ್ರಾಂತಿಯುಂಟಾಯಿತು ಹೆಸ್ಟರ್‌ಳಿಗೆ.

'ಮಗು, ಯಾರು ನೀನು?' ಆರ್ತಳಾಗಿ ಕೂಗಿದಳು ಹೆಸ್ಟರ್.

'ಓ, ನಾನು ನಿನ್ನ ಪುಟ್ಟ ಪರ್ಲ್' ಉತ್ತರ ಹೇಳುತ್ತಿದ್ದಂತೆ ಕುಣಿದಾಡುತ್ತಾ ಕುನ್ನಿಪಿಶಾಚಿಯಂತೆ ಚೇಷ್ಟೆ ಮಾಡತೊಡಗಿದಳು. ಮರುಕ್ಷಣದಲ್ಲೇ ಸೂರಿನ ಮೂಲಕ ಹಾರಿಹೋಗುತ್ತಾಳೇನೋ ಎನ್ನಿಸುತ್ತಿತ್ತು.

'ನೀನು ನಿಜವಾಗಿಯೂ ನನ್ನ ಮಗುವೇ?' ಹೆಸ್ಟರ್ ಕೇಳಿದಳು.

ಉದ್ದೇಶಪೂರ್ವಕವಾಗಿಯೇ ಆ ಪ್ರಶ್ನೆಯನ್ನು ಕೇಳಿದಳು. ಆ ಮಗುವಿನ ಬುದ್ಧಿವಂತಿಕೆಯನ್ನು ಕಂಡು, ಅದಕ್ಕೆ ತನ್ನ ಅಸ್ತಿತ್ವದ ರಹಸ್ಯವು ತಿಳಿದಿದ್ದೂ ಈಗ ತೋರ್ಪಡಿಸಿಕೊಳ್ಳಲು ಇಷ್ಟವಿಲ್ಲದೆ ಇದೆಯೆಂಬ ಭಾವನೆಯಿತ್ತು ಆ ಪ್ರಶ್ನೆಯಲ್ಲಿ.

'ಹೌದು, ನಾನೇ ನಿನ್ನ ಪುಟ್ಟ ಪರ್ಲ್,' ಚೇಷ್ಟೆ ಮಾಡುತ್ತಲೇ ಹೇಳಿತು ಮಗು.

'ನೀನು ನನ್ನ ಮಗುವಲ್ಲ! ನೀನು ನನ್ನ ಪರ್ಲ್ ಅಲ್ಲ!' ಮನಸ್ಸು ವ್ಯಗ್ರವಾಗಿದ್ದರೂ, ತನ್ನ ಸ್ವಭಾವಸಹಜವಾದ ಗುಣದಿಂದ ಲೇವಡಿ ಮಾಡುವಂತೆ, 'ನೀನು ಯಾರೋ ಬೇರೆ. ನಿನ್ನನ್ನು ಯಾರು ಇಲ್ಲಿಗೆ ಕಳುಹಿಸಿದವರು?' ಕೇಳಿದಳು.

ತಾಯಿಯ ತೊಡೆಯ ಮೇಲೆ ಬಂದು ಕುಳಿತು, ತಬ್ಬಿಕೊಳ್ಳುತ್ತಾ ಕೇಳಿದಳು ಪರ್ಲ್—'ಹೇಳಮ್ಮ! ನೀನೇ ಹೇಳಮ್ಮ!'

'ದೇವರು ನಿನ್ನನ್ನು ಕಳುಹಿಸಿದ' ಎಂದು ಹೆಸ್ಟರ್‌ಪ್ರೈನ್ ಉತ್ತರ ಕೊಟ್ಟಳು.

ಹಿಂದೆಮುಂದೆ ನೋಡಿ ಹೇಳಿದ ಆ ಉತ್ತರ ಮಗುವಿನ ಚುರುಕಾದ ಬುದ್ಧಿಗೆ ತಿಳಿಯದೆ ಹೋಗಲಿಲ್ಲ. ಸ್ವಭಾವಸಹಜವಾದ ತುಂಟತನದಿಂದಲೋ, ಅಥವಾ ಯಾವುದೋ ಕೆಟ್ಟದನಿಯ ಪಿಸುನುಡಿಯಿಂದಲೋ

ಉತ್ತೇಜಿತಳಾಗಿ, ತನ್ನ ಪುಟ್ಟ ಬೆರಳಿಂದ ಆ ಕೆಂಪು ಅಕ್ಷರವನ್ನು ಸವರುತ್ತಾ,

'ದೇವರು ನನ್ನನ್ನು ಕಳುಹಿಸಲಿಲ್ಲ! ದೇವರು ನನ್ನ ತಂದೆಯಲ್ಲ!' ಎಂದಳು.

'ಹುಷ್, ಸುಮ್ಮನಿರು ಪರ್ಲ್. ಹಾಗೆಲ್ಲಾ ಮಾತನಾಡಬಾರದು. ದೇವರೇ ನಮ್ಮನ್ನೆಲ್ಲಾ ಈ ಪ್ರಪಂಚಕ್ಕೆ ಕಳುಹಿಸಿದ್ದು. ನನ್ನನ್ನು ನಿನ್ನನ್ನು ಎಲ್ಲರನ್ನೂ ಅವನೇ ಕಳುಹಿಸಿದ್ದು ಹಾಗಿಲ್ಲದಿದ್ದಲ್ಲಿ ತುಂಟ ಮಗುವಾದ ನೀನು ಮತ್ತೆಲ್ಲಿಂದ ಬಂದೆ?'

'ಹೇಳು! ಹೇಳು! ನೀನೇ ಹೇಳಬೇಕು!' ನೆಲದ ಮೇಲೆ ಉರುಳಾಡಿ ನಗುತ್ತಾ ಹೇಳಿದಳು ಪರ್ಲ್.

ಹೆಸ್ಟರ್ ಆ ಪ್ರಶ್ನೆಗೆ ಉತ್ತರವನ್ನು ಊಹಿಸುವಂತಿರಲಿಲ್ಲ. ಆಗ ಅವಳಿಗೆ ಒಂದು ವಿಷಯ ನೆನಪಾಗಿ ನಗು ಬಂದದ್ದಲ್ಲದೇ ನಡುಕವೂ ಉಂಟಾಯಿತು. ಆ ಊರಿನ ಜನರು ಪರ್ಲ್‌ಳ ತಂದೆಯಾರೆಂದು ಹುಡುಕಿ ಬೇಸತ್ತು ಕಡೆಗೆ ಪರ್ಲ್ ಒಂದು ಪಿಶಾಚಿಯ ಮಗುವಿರಬೇಕೆಂದು ನಿರ್ಧರಿಸಿದರು. ಬಹಳ ಹಿಂದಿನಿಂದಲೂ, ಕ್ಯಾಥೋಲಿಕ್ ಕಾಲದಿಂದಲೂ ಹಾಗೆಯೇ ಅಂತೆ. ಹೆಣ್ಣಿನ ಪಾಪದ ಫಲವಾಗಿ, ಕೆಡಕನ್ನುಂಟುಮಾಡುವ ಉದ್ದೇಶದಿಂದ ಇಂತಹ ಮಕ್ಕಳು ಜನಿಸುತ್ತಿದ್ದುವಂತೆ. ನ್ಯೂ ಇಂಗ್ಲೆಂಡಿನ ಸುಧಾರಕರಿಗೆ ಪರ್ಲ್ ಒಬ್ಬಳೇ ಆ ಜಾತಿಗೆ ಸೇರಿದವಳಾಗಿರಲಿಲ್ಲ. ಲೂಥರ್ ಕೂಡ, ಅವನ ಶತ್ರುಗಳು ಹೇಳಿದಂತೆ ಆ ಭೂತಗಳ ವಂಶಕ್ಕೆ ಸೇರಿದವನಂತೆ.

೭

ಒಂದು ದಿನ ಹೆಸ್ಟರ್‌ಪ್ರೈನ್ ಗೌವರ್ನರ್ ಬೆಲ್ಲಿಂಗ್‌ಹ್ಯಾಮ್‌ರವರ ಭವನಕ್ಕೆ ಹೋದಳು. ಹೋಗುವಾಗ ಅವರ ಅಜ್ಞೆಯಂತೆ ತಾನು ಕಸೂತಿ ಕೆಲಸ ಮಾಡಿದ ಒಂದು ಜೊತೆ ಕೈಚೀಲಗಳನ್ನು ತೆಗೆದುಕೊಂಡು ಹೋದಳು. ಅದನ್ನು ಅವರು ಯಾವುದೋ ಒಂದು ದೊಡ್ಡ ಸಮಾರಂಭದಲ್ಲಿ ಧರಿಸಬೇಕಾಗಿತ್ತು. ಬಹಿರಂಗ ಚುನಾವಣೆಯಿಂದಾಗಿ, ಹಿಂದೆ ಆಳ್ವಿಕೆ ನಡೆಸುತ್ತಿದ್ದ ಈತ ಒಂದೆರಡು ಹೆಜ್ಜೆ ಕೆಳಮಟ್ಟಕ್ಕೆ ಇಳಿದಿದ್ದರೂ, ಮೊದಲಿನಂತೆಯೇ ತಮ್ಮ ಅಧಿಕಾರ ವರ್ಗದಲ್ಲಿ ತಮ್ಮ ಪದವಿಯ ಗೌರವವನ್ನು ಉಳಿಸಿಕೊಂಡಿದ್ದರು.

ಕೈ ಚೀಲಗಳನ್ನು ತಲಪಿಸುವುದಕ್ಕಿಂತ ಹೆಚ್ಚಾಗಿ, ಹೆಸ್ಟರ್, ತಮ್ಮ

ದೇಶದಲ್ಲೇ ಅತ್ಯಂತ ದೊಡ್ಡ ಮನುಷ್ಯರನ್ನು ಸಂದರ್ಶಿಸುವುದಕ್ಕೆ ಬೇರೆಯೇ ಕಾರಣಗಳಿದ್ದುವು. ಧರ್ಮದಲ್ಲಿಯೂ ಸರ್ಕಾರದಲ್ಲಿಯೂ ಮುಖ್ಯ ಪಾತ್ರ ವಹಿಸಿದ್ದ ಕೆಲವು ಪುರಪ್ರಮುಖರು ತನ್ನ ಮಗುವನ್ನು ತನ್ನಿಂದ ಕಿತ್ತು ಕೊಳ್ಳುವ ಏರ್ಪಾಡು ಮಾಡುತ್ತಿರುವರೆಂಬ ಸುದ್ದಿ ಆಕೆಯ ಕಿವಿಗೆ ಮುಟ್ಟಿತ್ತು. ಈ ಮೊದಲೇ ಹೇಳಿದಂತೆ ಪರ್ಲ್ ಭೂತಾಂಶ ಸಂಭೂತಳು ಎಂದು ಈ ಸಜ್ಜನರು ಭಾವಸಿದ್ದರು. ಆದ್ದರಿಂದ ಹೆಸ್ಟರ್‌ಳ ಆತ್ಮೋ ದ್ಧಾರದ ಹಾದಿಯಲ್ಲಿದ್ದ ಈ ಎಡರನ್ನು ತೊಡೆದು ಹಾಕಲು ಅವರು ನಿರ್ಧರಿಸಿದ್ದರು. ಒಂದು ವೇಳೆ ಆ ಮಗುವಿನಲ್ಲಿ ಧಾರ್ಮಿಕ ಶ್ರದ್ಧೆ ಯುಂಟಾಗಿ, ಮುಕ್ತಿ ಸಾಧಿಸುವ ಶಕ್ತಿ ಆದಕ್ಕಿದ್ದರೆ, ಖಂಡಿತವಾಗಿಯೂ ಹೆಸ್ಟರ್ ಪ್ರೈನ್‌ಳಿಗಿಂತ ಬುದ್ಧಿವಂತರ ರಕ್ಷಣೆಯಿಂದ ಅದಕ್ಕೆ ಲಾಭವಿದೆ. ಈ ಉದ್ದೇಶವನ್ನು ಎತ್ತಿ ಹಿಡಿದು ಅದಕ್ಕಾಗಿ ದುಡಿಯುತ್ತಿದ್ದವರಲ್ಲಿ ಗವರ್ನರ್ ಬೆಲಿಂಗ್‌ಹ್ಯಾಂರವರೇ ಪ್ರಮುಖ ಪಾತ್ರ ವಹಿಸಿದ್ದರೆಂದು ಹೇಳು ತ್ತಿದ್ದರು. ಇಂತಹ ಸಣ್ಣ ವಿಷಯಗಳಲ್ಲೆಲ್ಲಾ ದೊಡ್ಡ ದೊಡ್ಡ ಅಧಿಕಾರಿ ಗಳೇ ಭಿನ್ನಾಭಿಪ್ರಾಯದಿಂದ ಬೇರೆ ಬೇರೆ ಪಂಗಡಗಳಿಗೆ ಸೇರುತ್ತಿದ್ದರು. ಸಣ್ಣ ಪುಟ್ಟ ವಿಷಯಗಳಿಗೆಲ್ಲಾ ಶಾಸನಾಧಿಕಾರಿಗಳನ್ನೂ, ಕಾನೂನನ್ನೂ ನುಂಗಿಬಿಡುತ್ತಿದ್ದವು. ಆಗಿನ ಕಾಲ ಎಂತಹುದೆಂದರೆ, ಒಂದು ಹಂದಿ ಗೋಸ್ಕರ ಜಗಳವುಂಟಾದರೆ ಸಾಕು, ಅದು ಶಾಸನ ಸಭೆಯುವರೆಗೂ ಹೋಗಿ ಅಲ್ಲಿ ಬಿಸಿ ಬಿಸಿ ವಾಗ್ವಾದ ನಡೆದು, ಕಡೆಗೆ ಕಾನೂನಿನ ರಟ್ಟನ್ನೇ ಬದ ಲಾಯಿಸುವುದರಲ್ಲಿ ಪರಿಣಮಿಸುತ್ತಿತ್ತು.

ತನಗೆ ಸಂಪೂರ್ಣ ಹಕ್ಕಿದ್ದರೂ ಸಹ ಹೆಸ್ಟರ್ ಪ್ರೈನ್‌ಳಿಗೆ ಇದರ ಯೋಚನೆ ಬಲವಾಗಿಯೇ ಇತ್ತು. ಒಂದು ಕಡೆ ಸಾರ್ವಜನಿಕರು, ಮತ್ತೊಂದು ಕಡೆ ಒಂಟಿ ಹೆಂಗಸು ತಾನು. ಏನು ಮಾಡಬಲ್ಲಳು? ತನ್ನ ಮಗುವನ್ನೂ ಕರೆದುಕೊಂಡು ಗವರ್ನರ ಭವನಕ್ಕೆ ಹೊರಟಳು. ಪರ್ಲ್ ಈಗ ತನ್ನ ತಾಯಿಯ ಜೊತೆಯಲ್ಲಿ ಮೆಲ್ಲನೆ ಓಡಬಲ್ಲ ವಯಸ್ಸಿಗೆ ಬಂದಿದ್ದಳು. ತನಗೆ ನಡೆಯುವುದಕ್ಕೆ ಬಂದರೂ ತನ್ನನ್ನು ಎತ್ತಿಕೊಳ್ಳು ವಂತೆ ತಾಯಿಯನ್ನು ಕುರಿತು ಹಠಮಾಡುತ್ತಾಳೆ. ಎತ್ತಿಕೊಂಡ ಕೂಡಲೇ ಇಳಿದು, ತನ್ನ ತಾಯಿಗಿಂತ ನಾಲ್ಕಾರು ಹೆಜ್ಜೆ ಮುಂದೆ, ಎಡವಿ ಮುಗ್ಗರಿಸುತ್ತಾ ಓಡುತ್ತಿರುತ್ತಾಳೆ. ಪರ್ಲ್ ಬಹಳ ಸುಂದರವಾದ ಮಗು ವೆಂದು ಈ ಮೊದಲೇ ಹೇಳಿದೆ. ಅದಕ್ಕೆ ತಕ್ಕ ತೇಜಸ್ಸಿನಿಂದ ರಾರಾಜಿಸು ತ್ತಿತ್ತು ಅವಳ ಮುಖ. ಅವಳ ತಾಯಿ, ಅದಕ್ಕೆ ಉಡಪನ್ನು ಹೊಂದಿಸು

ವಾಗಲೂ ತನ್ನ ಕಲ್ಪನಾಶಕ್ತಿಯನ್ನು ಬಹಳವಾಗಿ ಉಪಯೋಗಿಸಿದ್ದಳು. ಕೆಂಪು ಬಣ್ಣದ ಮಕಮಲ್ಲು ಬಟ್ಟೆಯ ಮೇಲೆ ಸ್ವರ್ಣವರ್ಣದ ದಾರದಿಂದ ಸುಂದರವಾಗಿ ಕಸೂತಿ ಮಾಡಿದ ಲಂಗವನ್ನು ತೊಡಿಸಿದ್ದಳು. ಆ ಬಣ್ಣ ದಿಂದಾಗಿ ಫರ್ಲ್ಳ ಸೌಂದರ್ಯ ಮತ್ತಷ್ಟು ಹೆಚ್ಚಿ, ಜಗತ್ತಿನಲ್ಲೇ ಅವಳಷ್ಟು ಸುಂದರವಾದ ಮಗು ಮತ್ತೊಂದಿಲ್ಲ ಎನ್ನುವಂತಿತ್ತು.

ಆ ಉಡುಪಿನ ವೈಶಿಷ್ಟ್ಯವೆಂದರೆ, ಮಗುವಿನ ರೂಪಿನೊಂದಿಗೆ ಬೆರೆತು ನೋಡಿದವರಿಗೆಲ್ಲಾ ತಪ್ಪದೆ ಹೆಸ್ಟರ್ ಪ್ರೈನ್ ಧರಿಸಿದ್ದ ದುರ್ವಿಧಿಯ ಚಿಹ್ನೆ ಯನ್ನೇ ನೆನಪು ಮಾಡಿಕೊಡುತ್ತಿತ್ತು. ಅದು ಆ ಕೆಂಪು ಅಕ್ಷರದ ಮತ್ತೊಂದು ರೂಪ; ಜೀವಂತವಾಗಿರುವ ಕೆಂಪು ಅಕ್ಷರ! ತನ್ನ ಭಾವನೆಗಳ ನ್ನೆಲ್ಲಾ ಆ ಕೆಂಪು ಅಕ್ಷರವೇ ಆವರಿಸಿದಂತೆ, ಹೆಸ್ಟರ್ ಪ್ರೈನ್ ಅನೇಕ ಗಂಟೆ ಗಳ ಕಾಲ ತನ್ನ ಕಲ್ಪನಾಶಕ್ತಿಯನ್ನೆಲ್ಲಾ ಉಪಯೋಗಿಸಿ ತಾನು ತಯಾರಿ ಸಿದ ಉಡುಪಿನಲ್ಲಿ, ತನ್ನ ಪ್ರೀತಿಯ ವಸ್ತುವಿಗೂ ತನ್ನ ಕಳಂಕಕ್ಕೂ ನಡುವೆ ಇರುವ ಸಂಬಂಧವನ್ನು ಕಲ್ಪಿಸಿದ್ದಳು. ಆದರೆ ನಿಜವಾಗಿಯೂ ಅವೆರ ಡಕ್ಕೂ ಸಂಬಂಧವಿದ್ದೇ ಇತ್ತು. ಅದನ್ನು ಪ್ರತಿಪಾದಿಸುವ ಸಲುವಾಗಿಯೇ ಹೆಸ್ಟರ್ ಬಹಳ ಬುದ್ಧಿವಂತಿಕೆಯಿಂದ ಆ ಕೆಂಪು ಅಕ್ಷರದ ಕಳೆ ತನ್ನ ಮಗುವಿನಲ್ಲಿಯೂ ಮೂಡಿಬರುವಂತೆ ಮಾಡಿದ್ದಳು.

ಅವರಿಬ್ಬರೂ ಊರ ಬಳಿಗೆ ಬಂದಾಗ, ಅಲ್ಲಿ ಆಟವಾಡುತ್ತಿದ್ದ, ಸುಧಾರಕರ ಮಕ್ಕಳೆಲ್ಲಾ ತಮ್ಮ ಆಟವನ್ನು ನಿಲ್ಲಿಸಿ, ತಲೆಯೆತ್ತಿ ನೋಡಿ ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳತೊಡಗಿದರು—

'ಅಲ್ಲಿ ನೋಡಿರೋ, ಕೆಂಪು ಅಕ್ಷರ ಧರಿಸಿದವಳು ಹೋಗುತ್ತಿ ದ್ದಾಳೆ. ಅವಳ ಜೊತೆಯಲ್ಲಿರುವ ಮಗು ಕೂಡ ಕೆಂಪು ಅಕ್ಷರದಂತೆಯೇ ಇದೆ. ಬನ್ನಿ, ಬನ್ನಿ, ಅವರ ಮೇಲೆ ಮಣ್ಣು ಎಸೆಯೋಣ!'

ಇವರನ್ನೆಲ್ಲಾ ನೋಡಿ ನಿರ್ಭೀತಳಾದ ಪರ್ಲ್ ಕೂಡಲೇ ಹುಬ್ಬು ಗಂಟಿಕ್ಕಿ, ನೆಲಕ್ಕೆ ಕಾಲನ್ನು ಅಪ್ಪಳಿಸಿ, ಮುಷ್ಟಿ ಬಿಗಿದು ಅವರನ್ನು ಹೆದರಿ ಸುತ್ತಾ, ಒಮ್ಮೆಗೇ ತನ್ನ ಶತ್ರುಗಳ ಗುಂಪಿನ ಮೇಲೆ ಧಾವಿಸಿ, ಅವರ ನ್ನೆಲ್ಲಾ ಚೆಲ್ಲಾ ಪಿಲ್ಲಿ ಮಾಡಿದಳು. ತನ್ನಿಂದ ಪಲಾಯನ ಮಾಡುತ್ತಿರು ವವರ ಎದೆ ನಡುಗಿ ಕುಸಿಯುವಷ್ಟು ಬಲವಾಗಿ ಕಿರಿಚಿದಳು. ಜಯಭೇರಿ ಹೊಡೆದು ನುಗುನಗುತ್ತಾ ತನ್ನ ತಾಯಬಳಿಗೆ ಹಿಂದಿರುಗಿದಳು.

ಮುಂದೆ ದಾರಿಯಲ್ಲಿ ಏನೂ ಅಡಚಣೆಯಿಲ್ಲದೆ ಇಬ್ಬರೂ ಗವರ್ನರ್ ಬೆಲಿಂಗ್ ಹ್ಯಾಮ್‌ರವರ ಭವನಕ್ಕೆ ತಲುಪಿದರು. ಅದೊಂದು ವಿಶಾಲ

ವಾದ ಮರದ ಮನೆ. ಅಂತಹ ಮನೆಗಳನ್ನು ಇಂದಿಗೂ ಅಲ್ಲಲ್ಲಿ ನೋಡು ತ್ತೇವೆ. ಪಾಚಿಕಟ್ಟಿ, ಮುರಿದು ಬೀಳುತ್ತಾ, ಅಲ್ಲಿ ನಡೆದ ಅನೇಕ ಕಷ್ಟ ಸುಖಗಳನ್ನು ನೆನೆದು ಗೋಳುಕರೆಯುತ್ತಾ ಬಿದ್ದಿವೆ. ಆದರೆ ಆಗ ಸಾವನ್ನೇ ಕಾಣದ ಆ ಮನೆ ಸುಖ ಸಂತೋಷಗಳಿಂದ ನಲಿಯುತ್ತಿತ್ತು. ಕಿಟಕಿಗಳಿಗೆ ಹಾಕಿದ್ದ ಬಣ್ಣ ಬಣ್ಣದ ಗಾಜುಗಳ ಮೇಲೆ ಸೂರ್ಯಕಿರಣಗಳು ಬಿದ್ದು ವಿವಿಧ ವರ್ಣಗಳಿಂದ ರಂಜಿಸುತ್ತಿತ್ತು. ಸುಧಾರಕರ ಮಂಡಲಾಧಿ ಪತಿಯೊಬ್ಬನ ಭವನವೆನ್ನುವ ಆ ಮನೆ ಅಲ್ಲಾವುದ್ದೀನನ ಅರಮನೆಗೆ ಸಮಾನವಾಗಿ ಶೋಭಿಸುತ್ತಿತ್ತು. ಒಳಗಡೆಯೆಲ್ಲಾ ಅನೇಕ ವಿಧವಾದ ಪ್ರತಿಮೆಗಳಿಂದಲೂ ಚಿತ್ರಗಳಿಂದಲೂ ಅಲಂಕರಿಸಿದ್ದರು.

ಭವ್ಯವಾದ ಆ ಭವನವನ್ನು ನೋಡಿ ಪರ್ಲ್ ಉಲ್ಲಾಸದಿಂದ ಕುಣಿಯು ತೊಡಗಿದಳು. ಅಷ್ಟೇ ಅಲ್ಲ, ಅಲ್ಲಿರುವ ವರ್ಣರಂಜಿತ ಬೆಳಕಿನಲ್ಲಿ ತನಗೆ ಆಟವಾಡಲು ಬಿಡುವಂತೆ ತಾಯಿಯನ್ನು ಪೀಡಿಸತೊಡಗಿದಳು.

'ಬೇಡ ಚಿನ್ನ ಹಟಮಾಬೇಡ. ನೀನೇ ನಿನ್ನ ಬೆಳಕನ್ನು ಸಂಪಾದಿಸಿ ಕೊಳ್ಳಬೇಕು. ನನ್ನ ಬಳಿ ಏನೂ ಇಲ್ಲ' ಎಂದಳು ಹೆಸ್ಟರ್.

ಬಾಗಿಲ ಬಳಿಗೆ ಬಂದು ಹೆಸ್ಟರ್ ಗಂಟೆ ಬಾರಿಸಿದಳು. ಗವರ್ನರ ಗುಲಾಮು ಬಂದು ಬಾಗಿಲು ತೆಗೆದ. ಅವನು ಸ್ವತಂತ್ರನಾದ ಇಂಗ್ಲೀಷಿ ನವನಾದರೂ, ಏಳು ವರ್ಷಗಳ ಕಾಲ ಗವರ್ನರ ಗುಲಾಮುನಾಗಿದ್ದ. ಆ ಅವಧಿಯಲ್ಲಿ ಅವನು ತನ್ನ ಯಜಮಾನನ ಸ್ವತ್ತು. ಎತ್ತಿನಂತೆ ಅವನನ್ನೂ ವ್ಯಾಪಾರ ಮಾಡಬಹುದಾಗಿತ್ತು.

'ಪೂಜ್ಯರಾದ ಗವರ್ನರ್‌ರವರು ಇದ್ದಾರೆಯೆ?' ಎಂದು ಕೇಳಿದಳು ಹೆಸ್ಟರ್.

ತಾನು ಹಿಂದೆಂದೂ ನೋಡದಿದ್ದ ಆ ಕೆಂಪು ಅಕ್ಷರವನ್ನೇ ದಿಟ್ಟಿಸಿ ನೋಡುತ್ತಾ—'ಹೌದು ಇದ್ದಾರೆ. ಆದರೆ ಅವರ ಜೊತೆಯಲ್ಲಿ ಇಬ್ಬರು ಪಾದ್ರಿಗಳೂ, ಒಬ್ಬ ವೈದ್ಯರೂ ಇದ್ದಾರೆ. ನೀವು ಅವರನ್ನು ನೋಡುವು ದಕ್ಕೆ ಸಾಧ್ಯವಿಲ್ಲವೆಂದು ತೋರುತ್ತದೆ' ಎಂದ.

'ಪರವಾಗಿಲ್ಲ. ನಾನು ಒಳಕ್ಕೆ ಬರುತ್ತೇನೆ' ಎಂದಳು ಹೆಸ್ಟರ್.

ಅವಳ ಮಾತಿನ ಧೋರಣೆಯಿಂದಲೋ ಅಥವಾ ಅವಳೆದೆಯ ಮೇಲೆ ಬೆಳಗುತ್ತಿದ್ದ ಆ ಚಿಹ್ನೆಯನ್ನು ನೋಡಿ ಆಕೆ ದೊಡ್ಡ ಮನುಷ್ಯಳೆಂದು ಭಾವಿಸಿಯೋ, ಆಳು ಅವಳನ್ನು ತಡೆಯಲಿಲ್ಲ.

ತಾಯಿಮಕ್ಕಳಿಬ್ಬರೂ ಮಹಲನ್ನು ಪ್ರವೇಶಿಸಿದರು. ಅದೊಂದು

ವಿಶಾಲವಾದ ಹಜಾರ. ಸುತ್ತಲೂ ಅನೇಕ ಕೋಣೆಗಳಿಗೆ ಬಾಗಿಲುಗಳಿದ್ದವು. ಹಜಾರದ ಒಂದು ಕೊನೆಯಲ್ಲಿ ಮೇಜು ಹಾಕಿ ಅದರ ಮೇಲೆ ಪುಸ್ತಕಗಳನ್ನು ಜೋಡಿಸಿದ್ದರು. ಚಿತ್ತಾರ ಕೆಲಸಮಾಡಿದ ಅನೇಕ ಕುರ್ಚಿಗಳೂ ಮತ್ತು ಒಂದು ಭಾರಿ ಮೇಜೂ ಇದ್ದವು. ಮೇಜಿನ ಮೇಲೆ ಒಂದು ದೊಡ್ಡ ಪಾನಪಾತ್ರೆ ಇತ್ತು. ಎಲ್ಲ ಎಲಿಜಬೆತ್ ರಾಣಿಯ ಕಾಲಕ್ಕೆ ಸೇರಿದುವೆಂದು ಕಾಣುತ್ತದೆ; ಬೆಲಿಂಗ್ ಹ್ಯಾಮ್‌ರವರಿಗೆ ಪಿತ್ರಾರ್ಜಿತವಾಗಿ ಬಂದವು.

ಗೋಡೆಯ ಮೇಲೆ ಸಾಲಾಗಿ ತಮ್ಮ ಪೂರ್ವಜರ ಚಿತ್ರಗಳನ್ನು ತೂಗುಹಾಕಿದ್ದರು. ಕೆಲವರು ಯುದ್ಧ ಕವಚಗಳನ್ನು ತೊಟ್ಟಿದ್ದರು; ಮತ್ತೆ ಕೆಲವರು ಸೌಮ್ಯವಾದ ಉಡುಪನ್ನು ಧರಿಸಿದ್ದರು. ಹಿಂದಿನ ಕಾಲದ ಎಲ್ಲ ಪಟಗಳಂತೆಯೇ ಅವರೂ ಸಹ ಗಡಸು ಮುಖವುಳ್ಳವರಾಗಿದ್ದರು. ಆದರಿಂದಾಗಿ ಅವರು ಗತಿಸಿದ ಮಹನೀಯರಿಗಿಂತ ಭೂತಗಳಂತೆ ಕಾಣುತ್ತಿದ್ದುದಲ್ಲದೆ ಬದುಕಿರುವವರ ನಡತೆಯನ್ನು ಅಸಹನೆಯಿಂದ ಟೀಕಿಸುವವರಂತೆ ಕಾಣುತ್ತಿದ್ದರು.

ಹಜಾರದ ಮಧ್ಯದಲ್ಲಿ ಕೆಲವು ಆಯುಧಗಳನ್ನು ತೂಗುಹಾಕಿದ್ದರು. ಅವು ಮಿಕ್ಕವುಗಳಂತೆ ಹಿಂದಿನಕಾಲದ್ದಾಗಿರಲಿಲ್ಲ. ಗವರ್ನರರು ನ್ಯೂ ಇಂಗ್ಲೆಂಡಿಗೆ ಬರುವುದಕ್ಕೆ ಸ್ವಲ್ಪ ಮುಂಚೆ, ಲಂಡನ್ನಿನ ಪ್ರಸಿದ್ಧ ಶಸ್ತ್ರಕಾರನೊಬ್ಬ ಅವನ್ನು ತಯಾರಿಸಿಕೊಟ್ಟಿದ್ದ. ಒಂದು ಉಕ್ಕಿನ ವೈಗಾಪು, ಕೊರಳ್ಕಾವು, ಜಂಘಾಕವಚ, ಒಂದು ಜೊತೆ ಕೈಕಾಪು, ಒಂದು ಖಡ್ಗ ಮತ್ತು ಇವೆಲ್ಲಕ್ಕಿಂತ ಹೆಚ್ಚಾಗಿ ಆ ಹಜಾರವನ್ನೇ ಬೆಳಗುವಷ್ಟು ಥಳ ಥಳಿಸುತ್ತಿರುವ ಶೀಸಕ ಮತ್ತು ಎದೆಕಾಪುಗಳು ಇದ್ದವು. ಇವನ್ನೆಲ್ಲಾ ಸುಮ್ಮನೆ ಪ್ರದರ್ಶನಕ್ಕಾಗಿ ಇಟ್ಟಿರಲಿಲ್ಲ, ಯುದ್ಧ ಶಿಕ್ಷಣ ಕೊಡುವಾಗಲೆಲ್ಲಾ ಗವರ್ನರರು ಇವನ್ನು ಧರಿಸುತ್ತಿದ್ದರಲ್ಲದೆ, ಪಿಕಾಡ್ ಯುದ್ಧದಲ್ಲಿ ದಳನಾಯಕರಾಗಿದ್ದಾಗ ಸಹ ಧರಿಸಿದ್ದರು. ಅವರು ವೃತ್ತಿಯಲ್ಲಿ ವಕೀಲರಾಗಿದ್ದರೂ, ಈ ಹೊಸ ದೇಶದ ಅವಶ್ಯಕತೆಗೆ ತಕ್ಕಂತೆ ಯೋಧರಾಗಿಯೂ ಆಡಳಿತದಾರರಾಗಿಯೂ ಬದಲಾಗಬೇಕಾಯಿತು.

ಇವೆಲ್ಲವನ್ನೂ ನೋಡಿ ಹಿಗ್ಗುತ್ತಿದ್ದ ಪರ್ಲ್‌ಳು, ಮಿರುಗುತ್ತಿದ್ದ ಎದೆ ಕವಚವನ್ನೇ ಸ್ವಲ್ಪ ಹೊತ್ತು ನೋಡುತ್ತಿದ್ದು 'ಅಮ್ಮಾ, ಅಲ್ಲಿ ನೋಡಮ್ಮಾ ಹೇಗೆ ಕಾಣುತ್ತೀಯ ನೀನು!' ಎಂದಳು.

ಮಗುವಿನ ಮನಸ್ಸಮಾಧಾನಕ್ಕಾಗಿ ಹೆಸ್ಟರ್ ತಲೆಯೆತ್ತಿ ನೋಡಿ

ದಳು. ಉಬ್ಬಿದ ಕನ್ನಡಿಯಂತಿದ್ದ ಆ ಕವಚದಲ್ಲಿ ಕೆಂಪು ಅಕ್ಷರ ಬೃಹದ ಕಾರವನ್ನು ತಾಳಿ ತನ್ನನ್ನೇ ನುಂಗಿಬಿಟ್ಟಂತೆ ಕಾಣುತ್ತಿತ್ತು. ಸೀಸಕ ದಲ್ಲಿಯೂ ಅದೇ ರೀತಿಯ ಪ್ರತಿಬಿಂಬ ಕಾಣುತ್ತಿರುವುದನ್ನು ತನ್ನ ತಾಯಿಗೆ ಬೆಟ್ಟುಮಾಡಿ ತೋರಿಸಿ ಪರ್ಲ್ ನಗತೊಡಗಿದಳು. ಆ ತುಂಟನಗು ಸೀಸಕ ದಲ್ಲಿ ಪ್ರತಿಬಿಂಬಿಸಿ ದಟ್ಟವಾಗಿ ಹರಡಿತ್ತು. ಹೆಸ್ಟರ್‌ಳಿಗೆ ಅದು ತನ್ನ ಮಗುವಿನ ಪ್ರತಿಬಿಂಬವೆಂದು ನಂಬಲು ಸಾಧ್ಯವಾಗದೆ, ಅದು ಪರ್ಲ್‌ಳ ಆಕಾರಕ್ಕೆ ರೂಪುಗೊಳ್ಳುತ್ತಿದ್ದ ಪಿಶಾಚಿಯಂತೆ ಕಾಣಿಸಿತು.

'ಬಾ ಪರ್ಲ್. ಹೊರಗಡೆ ತೋಟಕ್ಕೆ ಹೋಗೋಣ ಬಾ. ಕಾಡಿ ನಲ್ಲಿರುವುದಕ್ಕಿಂತ ಸುಂದರವಾದ ಹೂವುಗಳನ್ನು ನೋಡೋಣ ಬಾ' ಎಂದು ಮಗುವನ್ನೆಳೆದುಕೊಂಡು ಹೊರಟಳು.

ಪರ್ಲ್, ಹಜಾರದ ಇನ್ನೊಂದು ಬದಿಗಿದ್ದ ಕಮಾನು ಕಿಟಕಿಯ ಬಳಿಗೆ ಓಡಿ ತೋಟವನ್ನು ನೋಡತೊಡಗಿದಳು. ತೋಟ ಬಹಳ ಸುಂದರವಾಗಿತ್ತು. ಅನೇಕ ವಿಧವಾದ ತರಕಾರಿ ಗಿಡಗಳು, ಕೋಸು, ಕುಂಬಳಕಾಯಿ ಎಲ್ಲ ಇದ್ದವು. ಅಲ್ಲಿ, ಅನೇಕ ಹೂವಿನ ಗಿಡಗಳ ಜೊತೆಗೆ ಕೆಲವು ಗುಲಾಬಿ ಗಿಡಗಳು, ಸೇಬಿನ ಗಿಡಗಳು ಇದ್ದವು. ಈ ನಾಡಲ್ಲಿ ಮೊದಲು ನೆಲೆಸಿದ ರೆವರೆಂಡ್ ಬ್ಲಾಕ್‌ಸ್ಟನ್ ನೆಟ್ಟ ಗಿಡಗಳ ಸಂತತಿಗೆ ಸೇರಿದ್ದವಿರಬೇಕು ಅವು. ರೆವರೆಂಡ್ ಬ್ಲಾಕ್‌ಸ್ಟನ್ ಪುರಾಣ ಪುರುಷ. ಆತ ಗೂಳಿಯ ಮೇಲೆ ಕುಳಿತು ಸಂಚರಿಸುತ್ತಿದ್ದನಂತೆ.

ಪರ್ಲ್ ಅಲ್ಲಿದ್ದ ಗುಲಾಬಿ ಗಿಡಗಳನ್ನು ನೋಡಿ, ತನಗೊಂದು ಕೆಂಪು ಗುಲಾಬಿ ಹೂವು ಬೇಕೆಂದು ಅಳತೊಡಗಿದಳು. ಹೇಗೆ ಸಮಾಧಾನ ಪಡಿಸಲು ಪ್ರಯತ್ನಿಸಿದರೂ ಅವಳು ಅಳು ನಿಲ್ಲಿಸಲಿಲ್ಲ.

'ಹುಷ್ ಸುಮ್ಮನಿರು ಕಂದ, ಅಳಬಾರದು. ತೋಟದಲ್ಲಿ ಯಾರೋ ಮಾತನಾಡುತ್ತಿರುವುದು ಕೇಳಿಸುತ್ತಿದೆ. ಅಳಬೇಡ ಚಿನ್ನ! ನೋಡು ಗವರ್ನರರೂ ಅವರ ಸಂಗಡಿಗರೂ ಬರುತ್ತಿದ್ದಾರೆ' ಎಂದು ಸಮಾಧಾನ ಮಾಡತೊಡಗಿದಳು ಹೆಸ್ಟರ್.

ಉದ್ಯಾನದಿಂದ ಮಹಲಿನ ಕಡೆಗೆ ಕೆಲವರು ಬರುತ್ತಿದ್ದರು. ತನ್ನನ್ನು ಸಮಾಧಾನ ಪಡಿಸಲು ಪ್ರಯತ್ನ ಪಡುತ್ತಿದ್ದ ತಾಯ ಮೇಲಿನ ಕೋಪದಿಂದ ಗಟ್ಟಿಯಾಗಿ ಕಿರಿಚಿಕೊಂಡು ಸುಮ್ಮನಾದಳು. ತನ್ನ ತಾಯಿಗೆ ವಿಧೇಯ ಳಾಗಿರಬೇಕೆಂಬ ಭಾವನೆಯಿಂದ ಅವಳು ಸುಮ್ಮನಾದುದಲ್ಲ. ಹೊಸಬ ರಾರೋ ಬರುತ್ತಿದ್ದುದರಿಂದ ಅವಳ ಕುತೂಹಲ ಕೆರಳಿತ್ತು.

೮

ಗವರ್ನರ್ ಬೆಲಿಂಗ್‌ಹ್ಯಾಮ್‌ರವರು ಸಾಧಾರಣ ಉಡುಪು ಧರಿಸಿದ್ದರು. ಸಂಗಡ ಇದ್ದವರಿಗೆಲ್ಲಾ ತಮ್ಮ ದೊಡ್ಡಸ್ಥಿಕೆಯನ್ನು ತೋರಿಸಿಕೊಂಡು, ಅದನ್ನು ಉತ್ತಮಪಡಿಸಿದ ತಮ್ಮ ಯೋಜನೆಗಳನ್ನೆಲ್ಲಾ ಅವರಿಗೆ ವಿವರಿಸುತ್ತಿದ್ದರು. ಆತನ ಮುಖ ಕಠಿನವಾಗಿದ್ದುದಲ್ಲದೆ, ವಯಸ್ಸು ಜೀವನದ ಸಂಧ್ಯೆಯನ್ನು ಮೀರಿದ್ದರೂ, ಆತ ಬಹಳ ಕಷ್ಟಪಟ್ಟು ಹೊಂದಿಕೊಂಡಿದ್ದ, ಇಹಲೋಕದ ಸೌಖ್ಯಗಳಿಗೂ ಆತನಿಗೂ ಅರ್ಥಾತ್ ಸಂಬಂಧವಿಲ್ಲವೆಂಬಂತಿತ್ತು. ನಮ್ಮ ಪೂರ್ವಜರು ಮಾನವ ಜೀವನವೇ ಒಂದು ಸಂಗ್ರಾಮವೆಂದು ಭಾವಿಸಿ, ಕರ್ತವ್ಯದ ಆಣತಿಗೆ ತಲೆಬಾಗಿ ತಮ್ಮ ಸಮಸ್ತವನ್ನೂ ಅರ್ಪಿಸಲು ಸಿದ್ಧವಾಗಿದ್ದರೂ, ತಮಗೆ ನಿಲುಕುವ ಈ ರೀತಿಯ ಭೋಗಗಳನ್ನು ತಿರಸ್ಕರಿಸುತ್ತಿದ್ದರೆಂದು ಹೇಳಿದರೆ ತಪ್ಪಾದೀತು.

ಗವರ್ನರರ ಹಿಂದೆ ಧರ್ಮಾಧಿಕಾರಿಗಳಾದ ಜಾನ್‌ವಿಲ್ಸನ್ ನಿಂತಿದ್ದರು. ವೃದ್ಧರಾದ ಆ ಪಾದ್ರಿ ಇಂಗ್ಲೀಷ್ ಚರ್ಚಿನ, ಆರೈಕೆಯಲ್ಲಿಯೇ ಬೆಳೆದು, ಎಲ್ಲ ಸುಖಸಂತೋಷಗಳ ಸವಿಯನ್ನನುಭವಿಸಿ, ಅವುಗಳಲ್ಲಿ ಅವರಿಗಿರುವ ಆಶೆ ಬಹಳ ಬಲವಾಗಿ ಬೆಳೆದಿತ್ತು. ಉಪದೇಶ ವೇದಿಕೆಯ ಮೇಲಾಗಲೀ, ಇತರ ಸ್ಥಳಗಳಲ್ಲಾಗಲೀ, ಬಹಿರಂಗವಾಗಿ ಆತ ಬಹಳ ಕಠಿನವಾಗಿ ಕಾಣಿಸುತ್ತಿದ್ದರೂ, ವೈಯಕ್ತಿಕ ಜೀವನದಲ್ಲಿ ತೋರುತ್ತಿದ್ದ ದಯಾಪರತೆ, ತನ್ನ ಮಿಕ್ಕ ವೃತ್ತಿ ಬಾಂಧವರಿಗಿಂತ ಆತನಿಗೆ ಹೆಚ್ಚಾಗಿ ಗೌರವವನ್ನು ಸಂಪಾದಿಸಿಕೊಟ್ಟಿತ್ತು.

ಇವರಿಬ್ಬರ ಹಿಂದೆ ಇನ್ನಿಬ್ಬರು ಬಂದರು. ಒಬ್ಬಾತ ರೆವರೆಂಡ್ ಆರ್ಥರ್ ಡಿಮ್ಸ್‌ಡೇಲ್ ಮತ್ತೊಬ್ಬ ರೋಜರ್ ಚಿಲಿಂಗ್‌ವರ್ತ್. ಆತ ಎರಡು ಮೂರು ವರ್ಷಗಳಿಂದಲೂ ಆ ಊರಿನಲ್ಲಿಯೇ ನೆಲೆಸಿದ್ದು, ರೆವರೆಂಡ್ ಡಿಮ್ಸ್‌ಡೇಲ್‌ನ ಸ್ನೇಹಿತನಾಗಿದ್ದುದಲ್ಲದೆ ಆತನ ವೈದ್ಯನೂ ಆಗಿದ್ದ. ಈಚೀಚೆಗೆ ಧರ್ಮಾಧಿಕಾರ್ಯಗಳಿಗಾಗಿ ನಿಸ್ವಾರ್ಥಿಯಾಗಿ ದುಡಿದು ದುಡಿದು ಡಿಮ್ಸ್‌ಡೇಲ್‌ರ ಆರೋಗ್ಯ ಬಹಳ ಕೆಟ್ಟಿತ್ತು.

ಎಲ್ಲರಿಗಿಂತ ಮುಂದೆ ಬರುತ್ತಿದ್ದ ಗವರ್ನರರಿಗೆ ಹಜಾರದ ಕಿಟಕಿಯ ಬಳಿ ಬಂದಾಗ ಪರ್ಲ್ ಮಾತ್ರ ಕಾಣಿಸಿದಳು; ಹೆಸ್ಟರ್ ಕಾಣಿಸಲಿಲ್ಲ.

ತಮ್ಮೆದುರಿಗೆ ಕೆಂಪು ಬಟ್ಟೆ ಧರಿಸಿ ನಿಂತಿದ್ದ ಪರ್ಲ್‌ಳನ್ನು ನೋಡಿ ಆಶ್ಚರ್ಯದಿಂದ ಗವರ್ನರ್‌ರು,—'ಇದೇನಿದು? ಜೇಮ್ಸ್ ಚಕ್ರವರ್ತಿಗಳ ಕಾಲದಿಂದ ನಾನು ಇಂತಹ ಆಕೃತಿಗಳನ್ನು ನೋಡಿಯೇ ಇರಲಿಲ್ಲ.

ಈ ಅಥಿತಿ ನಮ್ಮ ಹಜಾರದೊಳಕ್ಕೆ ಹೇಗೆ ಬಂತು?' ಎಂದು ಕೇಳಿದರು.

'ಹೌದು, ಇದಾವ ಕೆಂಪು ಪುಕ್ಕದ ಹಕ್ಕಿ? ಮಗು, ನೀನು ಯಾರು? ನಿನ್ನನ್ನು ಹೀಗೆ ಚಿತ್ರವಿಚಿತ್ರವಾಗಿ ಸಿಂಗರಿಸಲು ನಿನ್ನ ತಾಯಿಗೆ ಏನು ದುಃಖವಿತ್ತು? ನೀನೇನು ಕ್ರಿಶ್ಚಿಯನ್ ಮಗುವೋ ಅಥವಾ ಯಕ್ಷ ಣಿಯೋ?' ಎಂದು ಕೇಳಿದರು ಜಾನ್‌ವಿಲ್ಸನ್.

'ನಾನು ನಮ್ಮ ಅಮ್ಮನ ಮಗು. ನನ್ನ ಹೆಸರು ಪರ್ಲ್!' ಎಂದು ಉತ್ತರ ಬಂತು.

ಮಗುವಿನ ಕೆನ್ನೆ ಸವರಲು ಪ್ರಯತ್ನಿಸುತ್ತಾ—

'ಪರ್ಲ್? (ಮುತ್ತು?)—ಮಾಣಿಕ್ಯ!—ಹವಳ!—ಅಥವಾ ಕೆಂಪು ಗುಲಾಬಿ—ನಿನ್ನ ಬಣ್ಣ ನೋಡಿದರೆ ಹಾಗಿದೆ! ಆದರೆ ನಿನ್ನ ತಾಯಿಯೆಲ್ಲಿ?' ಎಂದು ತಲೆಯೆತ್ತಿ ಹೆಸ್ಟರ್ ಪ್ರೈನ್‌ಳನ್ನು ನೋಡಿದರು.

'ನಾವು ಇಷ್ಟು ಹೊತ್ತೂ ಮಾತನಾಡುತ್ತಿದ್ದೆವಲ್ಲ—ಇದೇ ಮಗು. ಅಲ್ಲಿ ನೋಡಿ ಇದರ ತಾಯಿ, ಅಭಾಗಿನಿ ಹೆಸ್ಟರ್ ಪ್ರೈನ್!' ಎಂದು ಗವರ್ನರರ ಕಿವಿಯಲ್ಲಿ ಪಿಸುಗುಟ್ಟಿದರು ವಿಲ್ಸನ್.

'ಹೌದೇನು? ಮಗುವನ್ನು ನೋಡಿದ ಕೂಡಲೇ ಅದರ ತಾಯಿ ಯಾರೆಂದು ಊಹಿಸಬಹುದಾಗಿತ್ತು. ಅವಳೂ ಒಳ್ಳೆಯ ಸಮಯಕ್ಕೇ ಬಂದಿದ್ದಾಳೆ. ಈಗಲೇ ಈ ವಿಚಾರವನ್ನು ಇತ್ಯರ್ಥ ಮಾಡಿಬಿಡೋಣ' ಎಂದು ಹೇಳಿ ಬೆಲಿಂಗ್‌ಹ್ಯಾಮ್ ತಮ್ಮ ಮೂವರು ಅತಿಥಿಗಳೊಂದಿಗೆ ಹಜಾರದೊಳಕ್ಕೆ ಬಂದರು.

'ಹೆಸ್ಟರ್ ಪ್ರೈನ್, ನಿನ್ನ ವಿಚಾರವಾಗಿ ಬಹಳ ಮಾತುಕತೆ ನಡೆದಿದೆ. ಇಲ್ಲಿರುವ ನಿನ್ನ ಮಗುವಿನ ಪರಿಶುದ್ಧವಾದ ಆತ್ಮವನ್ನು ದಾರಿತಪ್ಪಿದ ನಿನ್ನಂತಹವಳ ಜವಾಬ್ದಾರಿಗೆ ಬಿಟ್ಟರೆ, ಮನಃಪೂರ್ವಕವಾಗಿ ನಮ್ಮ ಕರ್ತವ್ಯವನ್ನು ಮಾಡುತ್ತೇವೆಯೇ ಎಂದು ಬಹಳವಾಗಿ ಯೋಚಿಸಿದ್ದೇವೆ. ಆ ಪುಟ್ಟ ಮಗುವಿನ ಯೋಗಕ್ಷೇಮದ ಜವಾಬ್ದಾರಿಯನ್ನು ನಿನ್ನಿಂದ ತಪ್ಪಿಸಿ, ಅದಕ್ಕೆ ಧರ್ಮಬೋಧೆಯನ್ನು ಮಾಡುವುದು ನಮ್ಮ ಕರ್ತವ್ಯ ವಾಗಿದೆ. ಮಗುವಿನ ತಾಯಿಯಾದ ನೀನೇ ಹೇಳು! ಈ ಸ್ಥಿತಿಯಲ್ಲಿದ್ದು ಕೊಂಡು ನೀನೇನು ಮಾಡಬಲ್ಲೆ?' ಎಂದರು ಗವರ್ನರ್.

'ನನ್ನ ಮಗುವಿಗೆ ಇದರಿಂದ ನಾನು ಕಲಿತ ಪಾಠವನ್ನು ಉಪದೇಶಿಸ ಬಲ್ಲೆ' ಎಂದು ಕೆಂಪು ಚಿಹ್ನೆಯ ಮೇಲೆ ಬೆಟ್ಟುಬಿಟ್ಟು ತೋರಿದಳು ಹೆಸ್ಟರ್.

'ಅದು ನಿನ್ನ ಕಳಂಕದ ಲಾಂಛನ! ಆ ಅಕ್ಷರ ಎತ್ತಿತೋರುವ

ಕಳಂಕದಿಂದಲೇ, ನಿನ್ನ ಮಗುವನ್ನು ಬೇರೆಯವರ ವಶಕ್ಕೆ ಕೊಡ ಬೇಕೆಂದಿರವುದು.'

'ಆದರೂ ಈ ಚಿಹ್ನೆ ನನಗೆ ಬುದ್ಧಿ ಕಲಿಸಿದೆ—ದಿನವೂ ಕಲಿಸು ತ್ತಿದೆ—ಈ ಕ್ಷಣದಲ್ಲೂ ಕಲಿಸುತ್ತಿದೆ. ಆದ್ದರಿಂದ ನನ್ನ ಮಗುವೂ ಬುದ್ಧಿ ಕಲಿತು ಆದರಿಂದ ಉತ್ತಮಗೊಳ್ಳಬಲ್ಲಳೇ ಹೊರತು, ಆದರಿಂದ ನನಗೇನೂ ಲಾಭವಿಲ್ಲ.' ಮುಖವಿವರ್ಣವಾದರೂ ಎದೆಗೆಡದೆ ಸಾವಧಾನವಾಗಿ ಹೇಳಿ ದಳು ಹೆಸ್ಟರ್.

'ನಾವೇ ಬೇರೆ ವಿಧವಾಗಿ ಯೋಚಿಸಿದ್ದೇವೆ. ನಾವು ಈಗ ಏನು ಮಾಡಬೇಕೆಂದಿರುವೆವೆನ್ನುವುದನ್ನು ಸರಿಯಾಗಿ ನೋಡು. ಮಾಸ್ಟರ್ ವಿಲ್ಸರ್, ದಯಮಾಡಿ ಈ ಮಗುವನ್ನು ಪರೀಕ್ಷಿಸಿ ಅವಳ ವಯಸ್ಸಿಗೆ ಸಹಜ ವಾಗಿ ಕ್ರಿಶ್ಚಿಯರ್ನ ಶಿಕ್ಷಣ ಹೊಂದಿದ್ದಾಳೆಯೋ ನೋಡಿ' ಎಂದರು.

ಆ ವೃದ್ಧ ಪಾದ್ರಿ ಒಂದು ಕುರ್ಚಿಯ ಮೇಲೆ ಕುಳಿತು ಪರ್ಲ್ಳನ್ನು ತಮ್ಮ ಕಾಲಮಧ್ಯೆ ನಿಲ್ಲಿಸಿಕೊಳ್ಳಲು ಪ್ರಯತ್ನ ಪಟ್ಟರು. ತನ್ನ ತಾಯಿಯ ಹೊರತು ಮಿಕ್ಕಾರ ಸಲಿಗೆಯ ಸ್ಪರ್ಶವೂ ಬಳಕೆಯಿಲ್ಲದ ಪರ್ಲ್ ಅವರ ಕೈಯಿಂದ ತಪ್ಪಿಸಿಕೊಂಡು, ಕಿಟಕಿಯಿಂದ ಹೊರಗೆ ಹೋಗಿ, ಹಾರಿ ಹೋಗಲು ಸಿದ್ಧವಾಗಿರುವ ಸುಂದರವಾದ ಹಕ್ಕಿಯಂತೆ ಮೆಟ್ಟಿಲ ಮೇಲೆ ನಿಂತುಕೊಂಡಳು. ವಿಲ್ಸರ್ರಿಗೆ ಬಹಳ ಆಶ್ಚರ್ಯವಾಯಿತು. ಯಾವ ಮಗುವೂ ಈ ರೀತಿ ತಪ್ಪಿಸಿಕೊಳ್ಳುತ್ತಿರಲಿಲ್ಲ! ಎಲ್ಲ ಮಕ್ಕಳಿಗೂ ಆತ ಪ್ರೀತಿಪಾತ್ರರಾಗಿದ್ದರು! ಆದರೂ ತಮ್ಮ ಪರೀಕ್ಷೆಯನ್ನು ಮುಂದುವರಿಸ ತೊಡಗಿದರು.

'ಪರ್ಲ್, ನೀನು ಬೋಧನೆಗೆ ಗಮನ ಕೊಟ್ಟು, ಯುಕ್ತ ಕಾಲದಲ್ಲಿ ಅತ್ಯಂತ ಬೆಲೆಬಾಳುವ ಮುತ್ತನ್ನು ನಿನ್ನೆದೆಯಲ್ಲಿ ಧರಿಸುವಂತಾಗಬೇಕು. ನಿನ್ನನ್ನು ಸೃಷ್ಟಿಸಿದವರಾರೆಂದು ನೀನು ಬಲ್ಲೆಯಾ?' ಎಂದು ಗಂಭೀರವಾಗಿ ಕೇಳಿದರು ವಿಲ್ಸರ್.

ತನ್ನನ್ನು ಸೃಷ್ಟಿಸಿದವರಾರೋ ಪರ್ಲ್ಳಿಗೆ ಸರಿಯಾಗಿ ಗೊತ್ತಿರಲಿಲ್ಲ. ಕರ್ತವ್ಯನಿಷ್ಠರ ಮನೆತನಕ್ಕೆ ಸೇರಿದ ಹೆಸ್ಟರ್ ತನ್ನ ಮಗುವಿಗೆ ಆಗಿಂದಾಗ್ಗೆ ಧರ್ಮವಿಚಾರಗಳನ್ನು ಹೇಳಿಕೊಟ್ಟಿದ್ದಳು. ಪರ್ಲ್ ಕೇವಲ ಮೂರು ವರ್ಷ ವಯಸ್ಸಾಗಿದ್ದಾಗ್ಯೂ, ನ್ಯೂ ಇಂಗ್ಲೆಂಡ್ ಬಾಲಬೋಧೆಯಿಂದಾಗಲೀ, ವೆಸ್ಟ್ ಮಿನ್‌ಸ್ಟರ್ ಪ್ರಶ್ನೋತ್ತರ ಬೋಧೆಯಿಂದಾಗಲೀ, ಪ್ರಶ್ನೆ ಕೇಳಿ ದ್ದರೆ—ಆ ಪುಸ್ತಕಗಳ ಹೆಸರು ತಿಳಿಯದಿದ್ದರೂ ಆ ಪ್ರಶ್ನೆಗಳಿಗೆ—ಉತ್ತರ

ಹೇಳುವಷ್ಟನ್ನು ಕಲಿತಿದ್ದಳು. ಆದರೂ ಎಲ್ಲ ಮಕ್ಕಳಂತೆಯೇ ಇವಳಿಗೂ ಸರಿಯಾದ ಸಮಯದಲ್ಲಿ ಜವಾಬು ಹೇಳಲು ತೋಚದೆಯೋ, ಅಥವಾ ಇಷ್ಟವಿಲ್ಲದೆಯೋ ಸುಮ್ಮನಿದ್ದುಬಿಟ್ಟಳು. ರೆವರೆಂಡ್ ವಿಲ್ಸನ್‌ರವರು ಪುನಃ ಪುನಃ ಕೇಳಿದ ಮೇಲೆ ತನ್ನನ್ನು ಯಾರೂ ಸೃಷ್ಟಿಸಿಲ್ಲವೆಂದೂ, ಸೆರೆಮನೆಯ ಬಳಿಯಿರುವ ಕಾಡು ರೋಜಾ ಗಿಡದಿಂದ ತನ್ನ ತಾಯಿ ತನ್ನನ್ನು ಕಿತ್ತು ಕೊಂಡಳೆಂದೂ ಹೇಳಿದಳು.

ಹೊರಗೆ ಉದ್ಯಾನದಲ್ಲಿ ಬೆಳೆದಿದ್ದ ರೋಜಾ ಹೂಗಳನ್ನು ನೋಡಿ ಈ ಭಾವನೆ ಉಂಟಾಯಿತೆಂದು ಕಾಣುತ್ತದೆ. ಇದರ ಜೊತೆಗೆ ಅವಳು ಇಲ್ಲಿಗೆ ಬರುವಾಗ ಸೆರೆಮನೆಯ ರೋಜಾಗಿಡಗಳ ಬಳಿ ಹಾದು ಬಂದದ್ದು ನೆನಪಾಗಿರಬೇಕು.

ರೋಜರ್ ಚಿಲಿಂಗ್‌ವರ್ತ್ ನಸುನಕ್ಕು ಪಕ್ಕದಲ್ಲಿದ್ದ ಚಿಕ್ಕ ಪಾದ್ರಿಯ ಕಿವಿಯಲ್ಲಿ ಏನೋ ಪಿಸುಗುಟ್ಟಿದ. ಹೆಸ್ಟರ್ ಪ್ರೈನ್ ಅವನ ಕಡೆ ನೋಡಿ, ತನ್ನ ಅದೃಷ್ಟ ತಕ್ಕಡಿಯಲ್ಲಿ ತೂಗಾಡುತ್ತಿರುವ ಸಮಯದಲ್ಲೂ, ಅವನಲ್ಲಾಗಿದ್ದ ಬದಲಾವಣೆಯನ್ನು ಗಮನಿಸಿ ಗಾಬರಿಗೊಂಡಳು. ಅವನ ಕಂದು ಬಣ್ಣದ ಮುಖ ಮತ್ತಷ್ಟು ಕಪ್ಪಾಗಿತ್ತು. ಅವನ ಆಕಾರ ಮತ್ತಷ್ಟು ವಿಕಾರವಾಗಿತ್ತು. ಅವನ ದೃಷ್ಟಿಯನ್ನು ಒಂದು ಕ್ಷಣ ಎದುರಿಸಿ, ಮತ್ತೆ ತನ್ನ ಮುಂದಿದ್ದ ವಿಷಯಕ್ಕೆ ಗಮನ ಕೊಡತೊಡಗಿದಳು.

'ಅನ್ಯಾಯ! ಮೂರು ವರ್ಷ ತುಂಬಿರುವ ಈ ಮಗುವಿಗೆ ತನ್ನನ್ನು ಸೃಷ್ಟಿಮಾಡಿದವರಾರೆಂದು ತಿಳಿಯದಿರುವುದು ಶುದ್ಧ ಅನ್ಯಾಯ! ಅವಳ ಆತ್ಮವೂ ಕಗ್ಗತ್ತಲಲ್ಲೇ ಇರುವುದರಲ್ಲಿ ಸಂಶಯವೇ ಇಲ್ಲ. ಇನ್ನು ಮುಂದಕ್ಕೆ ವಿಚಾರಣೆ ಮಾಡುವ ಅವಶ್ಯಕತೆಯಿಲ್ಲವೆಂದು ಕಾಣುತ್ತದೆ' ಎಂದರು, ಮಗುವಿನ ಉತ್ತರ ಕೇಳಿ ಚಕಿತರಾದ ಗವರ್ನರ್.

ಸರ್ರನೆ ತನ್ನ ಮಗುವನ್ನು ಬಾಚಿ ತಬ್ಬಿಕೊಂಡು, ಸುಧಾರಕರ ಪಂಗಡದ ಆ ವೃದ್ಧ ನ್ಯಾಯಾಧಿಪತಿಯನ್ನು ದುರುದುರನೆ ನೋಡತೊಡಗಿದಳು ಹೆಸ್ಟರ್. ಜಗತ್ತಿನಿಂದಲೇ ಹೊರದೂಡಲ್ಪಟ್ಟು, ಏಕಾಂಗಿಯಾದ ತನಗಿದ್ದ ಆಸ್ತಿ, ತನ್ನ ಹೃದಯದ ಬೆಳಕು ಆ ಮಗು. ಪ್ರಪಂಚ ರದ್ದು ಮಾಡಲಾಗದ ಹಕ್ಕು ತನಗಿದೆಯೆಂದು ಭಾವಿಸಿ, ಅದನ್ನು ಉಳಿಸಿಕೊಳ್ಳಲು ಸಾಯುವವರೆಗೂ ಹೊಡೆದಾಡಲು ಹೆಸ್ಟರ್ ಸಿದ್ಧಳಾಗಿದ್ದಳು.

'ದೇವರು ನನಗೆ ಈ ಮಗುವನ್ನು ದಯಪಾಲಿಸಿದ! ಅವನು ನನ್ನಿಂದ ಕಿತ್ತುಕೊಂಡ ಎಲ್ಲದರ ಪ್ರತಿಯಾಗಿ ಇದನ್ನು ಕೊಟ್ಟಿದ್ದಾನೆ.

ಅವಳೇ ನನ್ನ ಭಾಗ್ಯ!-ಅವಳೇ ನನ್ನ ಪೀಡೆ-ನನ್ನನ್ನು ಜೀವಂತಳಾಗಿಟ್ಟಿರುವವಳು ಅವಳೇ! ನನಗೆ ಶಿಕ್ಷೆಯನ್ನೂ ಕೊಡುತ್ತಾಳೆ! ಅವಳೇ ಕೆಂಪು ಅಕ್ಷರವಾಗಿರುವುದು ನಿಮಗೆ ಕಾಣುವುದಿಲ್ಲವೇ? ವ್ಯತ್ಯಾಸವೆಂದರೆ ಅದು ಪ್ರೀತಿಸಬಹುದಾದ ಕೆಂಪು ಅಕ್ಷರ. ಅದರಿಂದಾಗಿ ನನ್ನ ಪಾಪಕ್ಕೆ ಪ್ರಾಯಶ್ಚಿತ್ತ ಮಾಡುವ ಕೋಟಿ ಪಾಲು ಶಕ್ತಿ ಅದಕ್ಕಿದೆ. ನೀವು ಅವಳನ್ನು ನನ್ನಿಂದ ಕಿತ್ತುಕೊಳ್ಳಲಾರಿರಿ! ನಾನು ಮೊದಲು ಸಾಯುತ್ತೇನೆ' ಎಂದಳು ಹೆಸ್ಟರ್.

'ಅಯ್ಯೋ ಹುಚ್ಚಿ, ಮಗುವನ್ನು ನಿನಗಿಂತ ಚೆನ್ನಾಗಿ ನೋಡಿಕೊಳ್ಳುತ್ತೇವೆ' ಎಂದರು ವಿಲ್ಸನ್.

'ದೇವರು ಈ ಮಗುವನ್ನು ನನ್ನ ರಕ್ಷಣೆಗೆ ಕೊಟ್ಟಿದ್ದಾನೆ. ನಾನು ಅವಳನ್ನು ತ್ಯಜಿಸುವುದಿಲ್ಲ!' ಕಿರಿಚಿಕೊಳ್ಳುವಷ್ಟು ಜೋರಾಗಿ ದನಿಯನ್ನು ಏರಿಸಿ ನುಡಿದು, ಸರ್ರನೆ ಡಿಮ್ಸ್‌ಡೇಲ್‌ನ ಕಡೆಗೆ ತಿರುಗಿ ಹೇಳಿದಳು—'ನನ್ನ ಪರವಾಗಿ ನೀವು ವಾದಿಸಿರಿ. ನೀವು ನಮ್ಮ ಮಂಡಲಿಯ ಧರ್ಮಾಧಿಕಾರಿ. ನನ್ನ ಆತ್ಮದ ರಕ್ಷಣೆ ನಿಮಗೆ ಸೇರಿದುದರಿಂದ, ಅದನ್ನು ಇವರೆಲ್ಲರಿಗಿಂತ ನೀವು ಚೆನ್ನಾಗಿ ಅರಿತಿರುವಿರಿ. ನನ್ನ ಮಗುವನ್ನು ಕಳೆದುಕೊಳ್ಳಲಾರೆ! ನನಗಾಗಿ ಮಾತನಾಡಿ ಅದನ್ನು ಉಳಿಸಿಕೊಡಿ. ಇವರಾರಿಗೂ ಇಲ್ಲದ ಅನುಕಂಪ ನಿಮಗಿದೆ. ನೀವು ನನ್ನ ಹೃದಯ ವೇದನೆಯನ್ನು ಅರಿತಿರುವಿರಲ್ಲದೆ, ತಾಯ ಹಕ್ಕು ಬಾಧ್ಯತೆಗಳನ್ನು ತಿಳಿದಿದ್ದೀರಿ. ಈ ಕೆಂಪು ಅಕ್ಷರ ಮತ್ತು ಮಗು ಇವೆರಡರ ಹೊರತೂ ಇನ್ನೇನೂ ಇಲ್ಲದಾಗ ಆ ಹಕ್ಕು ಬಾಧ್ಯತೆಗಳು ಮತ್ತಷ್ಟು ಬಲವಾಗಿರುತ್ತವೆ ಎಂಬುದನ್ನೂ ನೀವು ಬಲ್ಲಿರಿ. ಅದನ್ನು ರಕ್ಷಿಸುವುದು ನಿಮ್ಮ ಭಾರ! ನನ್ನ ಮಗುವನ್ನು ಕಳೆದುಕೊಳ್ಳಲಾರೆ! ಅದರ ಜವಾಬ್ದಾರಿ ನಿಮ್ಮದು!'

ಈ ವಿಧವಾದ ಮೊರೆಯಿಂದ ಅವಳಿಗೆ ಹುಚ್ಚು ಹಿಡಿಯುವುದೊಂದು ಬಾಕಿ, ಎಂದು ಅರಿತು ಡಿಮ್ಸ್‌ಡೇಲ್ ಅವಳ ಪರವಾಗಿ ವಾದಿಸಲು ಮುಂದೆ ಬಂದ. ಮುಖ ಕೊಂಚ ಕಳೆಗುಂದಿತು; ಕೈ ಎದೆ ಮೇಲಿತ್ತು. ಮನಸ್ಸು ಕ್ಷೋಭೆಗೊಂಡಾಗಲೆಲ್ಲಾ ಆತನ ಕೈ ತಾನಾಗಿಯೇ ಎದೆಯ ಮೇಲೆ ಹೋಗುತ್ತಿತ್ತು. ಈಚೆಗೆ ಬಡವಾಗಿದ್ದ. ಆರೋಗ್ಯ ಕೆಟ್ಟಿತ್ತೋ, ಏನು ಕಾರಣವೋ ತಿಳಿಯದು, ಅವನ ವಿಶಾಲವಾದ ಕಣ್ಣುಗಳು ನಿಸ್ತೇಜವಾಗಿದ್ದುವು. ಅದರಲ್ಲಡಗಿದ್ದ ನೋವು ಎದ್ದು ಕಾಣುತ್ತಿತ್ತು.

ಕಂಪಿಸುತ್ತಿರುವ ಗಂಭೀರವಾದ ದನಿಯಿಂದ ಮಾತನಾಡಲು

ತೊಡಗಿದ. ಆ ಹಜಾರವೆಲ್ಲ ಅವನ ಧ್ವನಿಯನ್ನು ಪ್ರತಿಧ್ವನಿಗೈಯ್ಯುತ್ತಿತ್ತು–'ಅವಳು ಹೇಳುವುದರಲ್ಲಿ ಸತ್ಯವಿದೆ! ಭಗವಂತನು ಅವಳಿಗೆ ಆ ಮಗುವನ್ನು ದಯಪಾಲಿಸುವುದರ ಜೊತೆಗೆ, ಆ ಮಗುವಿನ ಸ್ವಭಾವಕ್ಕನುಗುಣವಾದ ಆವಶ್ಯಕತೆಗಳ ಅರಿವನ್ನೂ ಆಕೆಗೆ ಕೊಟ್ಟಿದ್ದಾನೆ. ಅದನ್ನು ಮಿಕ್ಕ ಮಾನವರಾರಿಂದಲೂ ಅರಿಯಲು ಸಾಧ್ಯವಿಲ್ಲ. ಅಷ್ಟೇ ಅಲ್ಲ ಈ ತಾಯಿ ಮಕ್ಕಳ ಬಾಂಧವ್ಯದಲ್ಲಿ ಒಂದು ವಿಧವಾದ ಪವಿತ್ರತೆ ಅಡಗಿಲ್ಲವೆ?'

'ಅದು ಹೇಗೆ ಮಾಸ್ಟರ್ ಡಿಮ್ಸ್‌ಡೇಲ್? ದಯವಿಟ್ಟು ಅದನ್ನು ವಿಷದಪಡಿಸಿ!' ಎಂದು ಮಧ್ಯೆ ಬಾಯಿ ಹಾಕಿದರು ಗವರ್ನರ್.

ಡಿಮ್ಸ್‌ಡೇಲ್ ಮುಂದುವರಿಸುತ್ತ 'ಹೌದು, ಅದು ನಿಜವಾದ ಮಾತು. ನಾವು ಹಾಗೆ ಭಾವಿಸದಿದ್ದ ಪಕ್ಷದಲ್ಲಿ, ಸೃಷ್ಟಿಕರ್ತನಾದ ದೇವರು ಪಾಪವನ್ನು ಗಣನೆಗೆ ತಂದುಕೊಳ್ಳದೆ, ಹೇಯವಾದ ಕಾಮಕ್ಕೂ ಪವಿತ್ರವಾದ ಪ್ರೇಮಕ್ಕೂ ಏನೂ ಬೇಧ ಕಲ್ಪಿಸಿಲ್ಲವೆಂದು ಹೇಳಿದಂತಾಗುತ್ತದೆಯಲ್ಲವೆ? ಈ ಮಗುವನ್ನು ಅವಳ ತಂದೆಯ ಪಾಪ, ತಾಯಿಯ ಕಳಂಕಗಳ ರೂಪವಾಗಿ ಸೃಷ್ಟಿಸಿದ್ದಾನೆ. ಇಲ್ಲಿ ತನ್ನ ಹಕ್ಕುಬಾಧ್ಯತೆಗಳಿಗಾಗಿ ಬೇಡಿಕೊಳ್ಳುತ್ತಿರುವ ಅಭಾಗಿನಿಯ ಮನಸ್ಸಿನ ಮೇಲೆ ಪರಿಣಾಮವುಂಟುಮಾಡುವುದಕ್ಕಾಗಿಯೇ ಇವಳನ್ನು ಸೃಷ್ಟಿಸಿದ್ದಾನೆ. ಅವಳ ಜೀವನದಲ್ಲಿ ಇದೊಂದು ವರವನ್ನು ಕರುಣಿಸಿದ್ದಾನೆ. ಆಕೆಯೇ ಹೇಳಿದಂತೆ ಅದು ಅವಳ ಪ್ರಾಯಶ್ಚಿತ್ತಕ್ಕೆ ಸಾಧನ. ಆ ಸಂತೋಷದ ಮಧ್ಯೆ ಒಂದೊಂದು ಗಳಿಗೆಯೂ ಯಾತನೆ ಅಡಗಿಯೇ ಇರುತ್ತದೆ. ತನ್ನ ಹೃದಯವನ್ನು ಸುಡುತ್ತಿರುವ ಆ ಕೆಂಪು ಚಿಹ್ನೆಯನ್ನು ಅವಳು ಮಗುವಿನ ಉಡುಪಿನಲ್ಲಿ ಪ್ರತಿಪಾದಿಸಿಲ್ಲವೇ?' ಎಂದನು.

'ಚೆನ್ನಾಗಿ ಹೇಳಿದೆ! ಅದೆಲ್ಲ ಬರಿಯ ಬೂಟಾಟಿಕೆ ಎಂದು ನನ್ನ ಭಾವನೆ' ಎಂದರು ವಿಲ್ಸನ್.

'ಹಾಗಲ್ಲ!—ಹಾಗಲ್ಲ! ಭಗವಂತನು ಮಗುವನ್ನು ಸೃಷ್ಟಿಸಿರುವ ಉದ್ದೇಶವನ್ನು ಅವಳು ಅರಿತಿದ್ದಾಳೆ. ಸೈತಾನನ ಪ್ರೇರಣೆಯಿಂದ ಅವಳು ಮತ್ತಷ್ಟು ಪಾಪಕೃತ್ಯಗಳನ್ನು ಮಾಡದಿರಲೆಂಬ ಉದ್ದೇಶದಿಂದಲೇ ಈ ವರವನ್ನು ದಯಪಾಲಿದ್ದಾನೆಂಬುದು ಅವಳಿಗೆ ತಿಳಿದಿದೆಯೆಂದು ನನಗೆ ಖಂಡಿತವಾಗಿದೆ. ಆದ್ದರಿಂದ ಮಗುವನ್ನು ಈ ಅಭಾಗನಿಯ ವಶಕ್ಕೆ ಕೊಡುವುದು ಉತ್ತಮ. ಪ್ರತಿಯೊಂದು ಕ್ಷಣವೂ ತಾನು ಮಾಡಿದ ತಪ್ಪಿನ ನೆನಪಾಗಿ, ಬುದ್ಧಿಕಲಿತು ಭಗವಂತನ ಸದುದ್ದೇಶವನ್ನು ನೆರವೇಸರಲು

ಅನುಕೂಲವಾಗುತ್ತದೆ. ಮಗುವನ್ನು ಅವಳು ಮುಕ್ತಿ ಸಾಧನೆಯೆಡೆಗೆ ಕರೆದೊಯ್ದರೆ, ಮಗು ತಾನಾಗಿಯೇ ತಾಯಿಯನ್ನು ಅತ್ತ ಕರೆದೊಯ್ಯುತ್ತದೆ! ಇಲ್ಲಿರುವ ಪಾಪಿಯಾದ ತಾಯಿ, ಆ ಪಾಪಿಯಾದ ತಂದೆಗಿಂತಲೂ ನೆಮ್ಮದಿಯಾಗಿರುತ್ತಾಳೆ. ಆ ತಾಯಿ ಮಕ್ಕಳಿಬ್ಬರ ಹಿತಕ್ಕಾಗಿಯೂ, ಭಗವಂತ ತನಗೆ ತೋರಿದಂತೆ ಅವರನ್ನಿಟ್ಟಿರುವ ಹಾಗೆಯೇ ಬಿಟ್ಟುಬಿಡೋಣ' ಎಂದ ಡಿಮ್ಸ್‌ಡೇಲ್.

'ನೀವು ಬಹಳ ಶ್ರದ್ಧೆಯಿಂದ ಮಾತನಾಡಿದಿರಿ' ಎಂದು ನಗುತ್ತಾ ರೋಜರ್ ಚಿಲಿಂಗ್‌ವರ್ತ್ ಹೇಳಿದ.

'ಆತನ ಮಾತಿನಲ್ಲಿ ತೂಕವಿದೆ. ತಾವೇನು ಹೇಳುತ್ತೀರಿ ಮಾಸ್ಟರ್ ಬೆಲಿಂಗ್‌ಹ್ಯಾಮ್. ಅವನು ಬಡಪಾಯಿಯ ಪರವಾಗಿ ವಾದಿಸಿದುದು ಸರಿಯಲ್ಲವೇ?' ಎಂದರು ರೇ ವಿಲ್ಸನ್.

'ಸರಿಯಾಗಿಯೇ ವಾದಿಸಿದ್ದಾರೆ. ಆದ್ದರಿಂದ ಈ ವಿಷಯವನ್ನು ಸದ್ಯಕ್ಕೆ ಹೀಗೆಯೇ ಬಿಟ್ಟಿರೋಣ. ಈ ಹೆಂಗಸಿನ ವಿಷಯದಲ್ಲಿ ಬೇರೆ ಅಪವಾದ ಬರದಿದ್ದ ಪಕ್ಷದಲ್ಲಿ ಹೀಗೆಯೇ ಇರಲಿ. ನೀವಾಗಲೀ ಅಥವಾ ಮಾಸ್ಟರ್ ಡಿಮ್ಸ್‌ಡೇಲ್‌ರವರಾಗಲೀ ಮಗುವನ್ನು ಪರೀಕ್ಷಿಸಿ ಅದಕ್ಕೆ ಧರ್ಮಬೋಧೆ ಮಾಡುವ ಕ್ರಮವನ್ನು ಕೈಕೊಳ್ಳಬೇಕು. ಅಷ್ಟೇ ಅಲ್ಲ ಪ್ರಾಪ್ತ ವಯಸ್ಸಿನಲ್ಲಿ ಅವಳು ಶಾಲೆಗೂ ಚರ್ಚಿಗೂ ಕ್ರಮವಾಗಿ ಹೋಗುತ್ತಿರುವುದು ಸದ್ಗೃಹಸ್ಥರೆಲ್ಲರಿಗೂ ತಿಳಿಯಬೇಕು' ಎಂದರು ಗವರ್ನರ್.

ಡಿಮ್ಸ್‌ಡೇಲ್, ತನ್ನ ಮಾತು ಮುಗಿದ ಕೂಡಲೇ ಮಿಕ್ಕವರಿಂದ ಸರಿದು ಕಿಟಕಿಯ ಬಳಿ ಹೋಗಿ ನಿಂತ. ಅವನ ಮುಖ ಕಿಟಕಿಯ ತೆರೆಗಳಿಂದ ಕೊಂಚ ಮರೆಯಾಗಿತ್ತು. ತಾನಾಡಿದ ಮಾತಿನ ಭಾವೋದ್ರೇಕದಿಂದ ಆತನ ನೆರಳು ಕಂಪಿಸಿತ್ತಿರುವಂತೆ ಕಾಣುತ್ತಿತ್ತು. ಪರ್ಲ್ ಮೆಲ್ಲಗೆ ಅವನ ಬಳಿಗೆ ಸರಿದು ತನ್ನೆರಡು ಕೈಗಳಿಂದಲೂ ಆತನ ಕೈ ತೆಗೆದುಕೊಂಡು ತನ್ನ ಕೆನ್ನೆಯಿಂದ ನೇವರಿಸತೊಡಗಿದಳು. ಇದನ್ನು ನೋಡಿದ ಹೆಸ್ಟರ್‌ಳಿಗೆ 'ಅವಳು ತನ್ನ ಕಂದನೇ?' ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುವಂತಾಯಿತು. ಆದರೂ ಆ ಮಗುವಿನ ಅಂತರಂಗದಲ್ಲಿ ಅಡಗಿದ್ದ ಪ್ರೇಮ ವ್ಯಕ್ತವಾಗುತ್ತಿತ್ತು. ಆ ಪಾದ್ರಿ ಕೂಡ ಕತ್ತು ತಿರುಗಿಸಿ, ಮಗುವಿನ ತಲೆಯ ಮೇಲೆ ಕೈಯಿಟ್ಟು, ಒಂದು ಕ್ಷಣ ಹಿಂದೆ ಮುಂದೆ ನೋಡಿ ಅನಂತರ ಅದರ ಹಣೆಯ ಮೇಲೆ ಮುದ್ದಿಟ್ಟ. ಪರ್ಲ್ ನಕ್ಕು, ಹಜಾರದಲ್ಲೆಲ್ಲಾ ಹಾರಾಡುವಂತೆ ಕುಣಿದಾಡತೊಡಗಿದಳು. ಅದನ್ನು ಕಂಡ ವಿಲ್ಸನ್‌ರವರಿಗೆ ಅವಳ

ಪಾದ ನೆಲಕ್ಕೆ ತಗಲುತ್ತಿದೆಯೋ ಇಲ್ಲವೋ ಎಂದು ಸಂಶಯವಾಯಿತು. 'ಆ ಚಿಕ್ಕ ಮಗುವಿನಲ್ಲಿ ಮಂತ್ರಶಕ್ತಿಯಿದೆಯೆಂದು ಕಾಣುತ್ತದೆ' ಎಂದು ಡಿಮ್ಸ್‌ಡೇಲ್‌ರೊಡನೆ ಹೇಳಿದರು.

'ವಿಚಿತ್ರವಾದ ಮಗು! ಅವಳಲ್ಲಿರುವ ತಾಯಿಯ ಅಂಶ ಚೆನ್ನಾಗಿ ಗೋಚರವಾಗುತ್ತದೆ. ಆ ಮಗುವಿನ ರೂಪ ಮತ್ತು ಸ್ವಭಾವ ರಚನೆಯ ಸೂಕ್ಷ್ಮ ದೃಷ್ಟಿಯಿಂದ ಪರೀಕ್ಷೆ ಮಾಡಿದಲ್ಲಿ ಅದರ ತಂದೆ ಯಾರೆಂದು ಊಹಿಸುವುದು ಒಬ್ಬ ತತ್ವಶಾಸ್ತ್ರಜ್ಞರಿಗೆ ಕಷ್ಟವಾಗುತ್ತದೆಯೆ?' ಎಂದು ಬಾಯಿ ಹಾಕಿ ಹೇಳಿದ ರೋಜರ್ ಚಿಲಿಂಗ್‌ವರ್ತ್.

'ಇಲ್ಲ; ಅಕ್ರೈಸ್ತವಾದ ತತ್ವಶಾಸ್ತ್ರದ ಜಾಡಿನಿಂದ ಈ ಸಮಸ್ಯೆಗಳನ್ನು ಊಹಿಸುವುದು ಪಾಪವಾಗುತ್ತದೆ. ಅದನ್ನೆಲ್ಲಾ ಮರೆತು ಪ್ರಾರ್ಥನೆ ಮಾಡುವುದು ಉತ್ತಮ; ಒಂದು ವೇಳೆ ನಮಗೆ ಆ ಸಮಸ್ಯೆಗೆ ಉತ್ತರ ದೊರೆತರೂ, ಭಗವಂತನ ಇಚ್ಛೆಯಾದಾಗ ಅದು ಬಯಲಾಗುವವರೆಗೂ ನಾವು ಸುಮ್ಮನಿದ್ದು ಬಿಡುವುದು ಇನ್ನೂ ಉತ್ತಮ. ಆದ್ದರಿಂದ ಪ್ರತಿಯೊಬ್ಬ ಕ್ರೈಸ್ತನಿಗೂ, ಆ ದಿಕ್ಕಿಲ್ಲದ ಮಗುವಿಗೆ ತಂದೆಯಂತೆ ಕರುಣೆ ತೋರುವ ಹಕ್ಕಿರುತ್ತದೆ' ಎಂದರು ವಿಲ್ಸನ್.

ವಿಷಯ ಸಮಾಧಾನವಾಗಿ ಇತ್ಯರ್ಥವಾದುದರಿಂದ ಹೆಸ್ಟರ್ ತನ್ನ ಮಗುವಿನೊಡನೆ ಗವರ್ನರ ಮಹಲಿನಿಂದ ಹೊರಟಳು. ಅವರಿಬ್ಬರೂ ಮೆಟ್ಟಲಿಳಿಯುತ್ತಿರುವಾಗ, ಕೋಣೆಯಿಂದ ಕಿಟಕಿಯನ್ನು ತೆಗೆದು, ಗವರ್ನರ ಸಹೋದರಿ ಮಿಸಸ್ ಹಿಬ್ಬಿನ್ಸ್ ಹೊರಗೆ ತಲೆ ಹಾಕಿದಳು. ಆಕೆಯದು ಬಹಳ ಒರಟು ಸ್ವಭಾವ. ಮುಂದೆ ಕೆಲವು ವರ್ಷಗಳಲ್ಲೇ ಮಾಟಗಾರ್ತಿಯೆಂದು ಆಕೆಗೆ ಮರಣದಂಡನೆ ವಿಧಿಸಲ್ಪಟ್ಟಿತು!

'ಹೋ....ಹೋ....ಹೆಸ್ಟರ್ ಪ್ರೈನ್, ಈ ದಿನ ರಾತ್ರಿ ನಮ್ಮ ಜೊತೆಗೆ ಬರುತ್ತೀಯಾ? ಕಾಡಿನಲ್ಲಿ ಬಹಳ ಸಂಭ್ರಮದ ಸಭೆಯಿದೆ. ಅದೂ ಅಲ್ಲದೆ ಅಂದಗಾರ್ತಿ ಹೆಸ್ಟರ್ ಪ್ರೈನ್‌ಳನ್ನೂ ಕರೆದುಕೊಂಡು ಬರುತ್ತೇನೆಂದು ಕಪ್ಪು ಮನುಷ್ಯನಿಗೆ ಮಾತು ಕೊಟ್ಟಿದ್ದೆ.' ಎಂದಳು ಮಿಸ್ಟರ್ ಹಬ್ಬಿನ್ಸ್.

'ನನ್ನನ್ನು ಕ್ಷಮಿಸುವಂತೆ ದಯವಿಟ್ಟು ಆತನಿಗೆ ಹೇಳಿ. ನಾನು ಮನೆಗೆ ಹೋಗಿ ನನ್ನ ಮಗುವನ್ನು ಕಾದುಕೊಳ್ಳಬೇಕು. ಅವರೇನಾದರೂ ಅವಳನ್ನು ನನ್ನಿಂದ ಕಿತ್ತುಕೊಂಡಿದ್ದ ಪಕ್ಷಕ್ಕೆ ನಾನಾಗಿಯೇ ನಿಮ್ಮ ಜೊತೆಯಲ್ಲಿ ಮನಸಾರೆ ಬಂದು ಕರಾಳನ ಪುಸ್ತಕದಲ್ಲಿ ನನ್ನ ರಕ್ತದಿಂದ ರುಜು ಮಾಡಿ ಪ್ರಮಾಣ ಮಾಡುತ್ತಿದ್ದೆ' ಎಂದಳು.

'ನಿನ್ನನ್ನು ಬೇಗನೆ ಅಲ್ಲಿಗೆ ಕರಸಿಕೊಳ್ಳುತ್ತೇವೆ' ಎಂದು ಸಿಡಿಗುಟ್ಟುತ್ತಾ ಮಾರ್ಟಗಾರ್ತಿ ತನ್ನ ತಲೆಯನ್ನು ಹಿಂದಕ್ಕೆಳೆದುಕೊಂಡಳು.

ಈ ಸಂಗತಿ ದಂತ ಕತೆಯಲ್ಲ; ನಿಜವಾಗಿಯೂ ನಡೆದದ್ದು ಎಂದು ನಾವು ನಂಬಿದ ಪಕ್ಷಕ್ಕೆ, ಪಾದ್ರಿಯ ಮಾತಿನಂತೆ ಮಗು ತನ್ನ ತಾಯಿಯನ್ನು ಪಾಪದಿಂದ ಪಾರು ಮಾಡಿದ್ದಕ್ಕೆ ಉದಾಹರಣೆ ದೊರೆತ್ತಿತ್ತು. ಇಷ್ಟು ಬೇಗನೆ ಆ ಮಗು ತನ್ನ ತಾಯಿಯನ್ನು ಸೈತಾನನ ಹಿಡಿತದಿಂದ ಪಾರು ಮಾಡಿತ್ತು.

೯

ರೋಜರ್ ಚಿಲಿಂಗ್‌ವರ್ತ್ ಎಂಬ ಅಭಿದಾನದ ಹಿಂದೆ ಮತ್ತೊಂದು ಹೆಸರು ಅಡಗಿತ್ತು. ಆದರೆ ಅದನ್ನು ಆತ ತ್ಯಜಿಸಿದ್ದ. ಹೆಸ್ಟರ್ ಪ್ರೈನ್‌ಳ ಕಳಂಕ ಪ್ರದರ್ಶನದ ದಿವಸ, ಕಾಡುಮೇಡುಗಳಲ್ಲಿ ಪ್ರಯಾಣ ಮಾಡಿ ಆಯಾಸಗೊಂಡಿದ್ದ ಒಬ್ಬ ವೃದ್ಧ ನೆರೆದಿದ್ದ ಆ ಜನಸ್ತೋಮದಲ್ಲಿದ್ದನೆಂದು ಈ ಮೊದಲೇ ಹೇಳಿದೆ. ಆಕೆಯೇ ತನ್ನ ಸುಖಸಂತೋಷಗಳ ಪ್ರತೀಕವಾಗಿರುವುದನ್ನು ಕಾಣಲು ಬಯಸಿ ಬಂದಿದ್ದ ಆತ, ಕಳಂಕದ ಪ್ರತೀಕವಾಗಿ ಜನರೆಲ್ಲರೆದುರಿಗೆ ಅವಳು ನಿಂತಿರುವುದನ್ನು ನೋಡಿದ. ಗೌರವಯುತವಾದ ಅವಳ ದೇಹವನ್ನು ಎಲ್ಲರೂ ಕಾಲಿನಿಂದ ಹೊಸಕಿ ಹಾಕಿದ್ದರು. ಆ ಮಾರು ಕಟ್ಟೆಯಲ್ಲಿ ಕಳಂಕ ಬಹಿರಂಗವಾಗಿ, ಅವಳ ಸುತ್ತ ತಾಂಡವವಾಡುತ್ತಿತ್ತು. ಅವಳ ಬಂಧುಗಳಿಗೆ ಈ ಸುದ್ದಿ ಮುಟ್ಟಿದ್ದರೆ, ಅವರ ಬಾಂಧವ್ಯ ಖಂಡಿತವಾಗಿ ಕಡಿದುಹೋಗಿ, ಅಪವಾದವೊಂದು ಅವಳ ಬಂಧುವಾಗಿ ಉಳಿಯುತ್ತಿತ್ತು. ಆದರೆ ಆತ, ತನಗೂ ಅವಳಿಗೂ ಪವಿತ್ರವಾದ ನಿಕಟ ಬಾಂಧವ್ಯವಿದ್ದರೂ ಸಹ, ತನಗೆ ಇಷ್ಟವಿಲ್ಲದ ಅವಳು ತನ್ನವಳೆಂದು ಹೇಳಿಕೊಳ್ಳುವ ಕಾರಣವಿರಲಿಲ್ಲ. ತಾನೂ ಅವಳಂತೆಯೇ ಕಳಂಕದ ವೇದಿಕೆಯ ಮೇಲೆ ನಿಲ್ಲಕೂಡದೆಂದು ನಿರ್ಧರಿಸಿದ್ದ. ಹೆಸ್ಟರ್ ಪ್ರೈನ್‌ಳ ಹೊರತು ಮತ್ತಾರಿಗೂ ಅವನ ರಹಸ್ಯ ಗೊತ್ತಿರಲಿಲ್ಲ. ಆ ರಹಸ್ಯ ಹೆಸ್ಟರ್‌ಳ ಮೌನದ ಬೀಗ ಮುದ್ರೆಯಿಂದ ಭದ್ರವಾಗಿತ್ತು. ಆದ್ದರಿಂದ ಮಾನವಕುಲದ ಪಟ್ಟಿಯಿಂದಲೇ ತನ್ನ ಹೆಸರನ್ನು ಅಳಿಸಿಹಾಕಿ, ತನಗಿದ್ದ ಹಿಂದಿನ ಬಾಂಧವ್ಯಗಳನ್ನು ಕಡಿದುಕೊಂಡು, ಅದೃಶ್ಯನಾಗಲು ಬಯಸಿದ. ಅದಕ್ಕೆ ತಕ್ಕಂತೆ ಅವನು ಸಮುದ್ರದಲ್ಲಿ ಮುಳುಗಿಹೋದನೆಂದು ಸುದ್ದಿಯೂ ಹಬ್ಬಿತ್ತು. ಈ ಕಾರ್ಯಸಾಧನೆಯಾದ ಕೂಡಲೇ, ಹೊಸ ಹೊಸ ವಿಷಯಗಳು ಅವನ ಮನಸ್ಸಿನಲ್ಲಿ ಮೂಡಿ

ದುವು. ಅಂತೆಯೇ ಒಳ್ಳೆಯದಲ್ಲದಿದ್ದರೂ, ಅಪರಾಧವಾಗದ ಸಂಕಲ್ಪಗಳೂ ಅವನ ಮನಸ್ಸಿನಲ್ಲಿ ರೂಪುಗೊಂಡು, ಆತನ ಮನಶ್ಶಕ್ತಿಯ ವಿನಿಯೋಗಕ್ಕೆ ದಾರಿಯಾಯಿತು.

ಈ ಉದ್ದೇಶ ಸಾಧನೆಗಾಗಿ, ಅವನು ರೋಜರ್ ಚಿಲ್ಲಿಂಗ್‌ವರ್ತ್ ಎಂದು ಹೆಸರಿಟ್ಟುಕೊಂಡು ಆ ಸುಧಾರಕರ ಊರಿನಲ್ಲಿ ನೆಲೆಸಿದ. ಬಹಳ ಹಿಂದೆ ವೈದ್ಯಶಾಸ್ತ್ರ ವ್ಯಾಸಂಗ ಮಾಡಿದ್ದುದರಿಂದ ತಾನು ವೈದ್ಯನೆಂದು ಹೇಳಿಕೊಂಡ. ಎಲ್ಲರೂ ಆತನನ್ನು ಆದರದಿಂದ ಕಂಡರು. ಆ ಪ್ರದೇಶದಲ್ಲಿ ವೈದ್ಯರು ಬಹಳ ವಿರಳವಾಗಿದ್ದರು. ಬಾಸ್ಟನ್ನಿನಲ್ಲಿ ಇದುವರೆಗೂ ವೈದ್ಯಶಾಸ್ತ್ರವನ್ನು ಬಲ್ಲ ಧರ್ಮಾಧಿಕಾರಿಗಳೊಬ್ಬರಿದ್ದರು. ವಿದ್ಯಾಪ್ರಸಸ್ತಿಗಳನ್ನು ಪಡೆಯದಿದ್ದರೂ ಆತನಿಗಿದ್ದ ಪ್ರಶಸ್ತಿಗಳೆಲ್ಲಾ ದೈವಭಕ್ತಿ ಮತ್ತು ಧರ್ಮಶ್ರದ್ಧೆಗಳ ರೂಪದಲ್ಲಿದ್ದವು. ಆದ್ದರಿಂದ ರೋಜರ್ ಚಿಲ್ಲಿಂಗ್‌ವರ್ತ್ ಬಂದುದು ಅವರಿಗೆ ಬಹಳ ಅನುಕೂಲವೇ ಆಯಿತು. ಆತನು ತನಗೆ ವೈದ್ಯಕೀಯಲ್ಲಿದ್ದ ಪರಿಶ್ರಮವನ್ನೂ ಪಾಂಡಿತ್ಯವನ್ನೂ ಬಹಳ ಬೇಗನೆ ತೋರಿಸಿಕೊಟ್ಟ. ತಾನು ರೆಡ್ ಇಂಡಿಯನ್ನರ ಸೆರೆಯಲ್ಲಿದ್ದಾಗ, ಪ್ರಕೃತಿ ಆ ಅನಾಗರೀಕರಿಗೆ ಕರುಣಿಸಿದ್ದ ವರಗಳಾದ ಗಿಡಮೂಲಿಕೆಗಳ ಉಪಯೋಗವನ್ನು ಬಹಳ ಚೆನ್ನಾಗಿ ಕಲಿತಿದ್ದ.

ಹೊರನೋಟಕ್ಕೆ ಈ ಅಪರಿಚಿತ ಪಂಡಿತ ಧಾರ್ಮಿಕ ವಿಷಯಗಳಲ್ಲಿ ಆದರ್ಶಪ್ರಾಯನಾಗಿದ್ದ. ಈ ಊರಿಗೆ ಬಂದ ಸ್ವಲ್ಪ ದಿನಗಳಲ್ಲೇ ತನ್ನ ಆಧ್ಯಾತ್ಮಿಕ ಗುರುವಾಗಿ ರೆವರೆಂಡ್ ಡಿಮ್ಸ್‌ಡೇಲ್‌ನನ್ನು ಆರಿಸಿಕೊಂಡ. ಡಿಮ್ಸ್‌ಡೇಲ್‌ನ ಪಾಂಡಿತ್ಯ ಆಕ್ಸ್‌ಫರ್ಡಿನಲ್ಲೆಲ್ಲಾ ಪ್ರಸಿದ್ಧವಾಗಿತ್ತು. ಆತನನ್ನು ಮೆಚ್ಚಿಕೊಂಡಿದ್ದವರೆಲ್ಲಾ, ಧರ್ಮೋದ್ಧಾರಕ್ಕಾಗಿ ಬಂದ ದೇವದೂತನೆಂದು ಭಾವಿಸಿದ್ದುದಲ್ಲದೆ, ಕ್ರೈಸ್ತಧರ್ಮ ಪ್ರಾರಂಭವಾದಾಗ ಅದಕ್ಕಾಗಿ ಮಹತ್ಕಾರ್ಯಗಳನ್ನು ಸಾಧಿಸಿದ ಹಿಂದಿನ ಪಾದ್ರಿಗಳಂತೆಯೇ, ಈತನೂ ಸತ್ವಹೀನನಾಗಿದ್ದ ನ್ಯೂ ಇಂಗ್ಲೆಂಡ್ ಚರ್ಚನ್ನು ಉದ್ಧಾರ ಮಾಡುತ್ತಾನೆಂದು ನಂಬಿದ್ದರು. ಇದೇ ಸಮಯದಲ್ಲಿ ಡಿಮ್ಸ್‌ಡೇಲ್‌ನ ಆರೋಗ್ಯ ಕೆಡಲು ಆರಂಭವಾಗಿತ್ತು. ಆತನ ಸ್ವಭಾವವನ್ನು ಚೆನ್ನಾಗಿ ಅರಿತಿದ್ದವರೆಲ್ಲಾ, ಆತನ ಕೆನ್ನೆಗಳು ಬತ್ತಿಹೋದುದಕ್ಕೆ ಕಾರಣ ಹೇಳತೊಡಗಿದರು. ವ್ಯಾಸಂಗದಲ್ಲಿ ಹೆಚ್ಚು ಆಸಕ್ತಿ, ಧಾರ್ಮಿಕಕಾರ್ಯಗಳ ನಿರ್ವಹಣೆ, ಮತ್ತು ಆತ್ಮಶುದ್ಧಿಗಾಗಿ ಮಾಡುತ್ತಿದ್ದ ಉಪವಾಸ ವ್ರತಗಳು—ಇವೇ ಕಾರಣಗಳೆಂದು ಊಹಿಸಿದರು. ಮತ್ತೆ ಕೆಲವರು, ಡಿಮ್ಸ್‌ಡೇಲ್ ಸತ್ತರೆ,

ಪ್ರಪಂಚಕ್ಕೆ ಆತನ ಪಾದಸ್ಪರ್ಶದ ಭಾಗ್ಯವನ್ನು ಪಡೆಯುವ ಯೋಗ್ಯತೆ ಇಲ್ಲವೆಂದು ಹೇಳತೊಡಗಿದರು. ಆದರೆ ಆತನಾದರೋ, ದೇವರು ತನ್ನನ್ನು ಈ ಪ್ರಪಂಚದಿಂದ ತೆಗೆದು ಹಾಕಿದ ಪಕ್ಷದಲ್ಲಿ, ಸೇವೆ ಮಾಡುವ ಭಾಗ್ಯದ ಯೋಗ್ಯತೆ ತನಗಿಲ್ಲದಿರುವುದರಿಂದಲೇ ಎಂದು ತನ್ನ ಸ್ವಭಾವ ಸಹಜವಾದ ನಮ್ರತೆಯಿಂದ ಹೇಳುತ್ತಿದ್ದ. ಆವನ ದೇಹ ಕೃಷವಾಗತೊಡಗಿತು; ಧ್ವನಿ ಕಂಚು ಹೊಡೆದಂತಿದ್ದರೂ, ಏನೋ ಒಂದು ವಿಧವಾದ ಯಾತನೆ ಅಡಗಿತ್ತು ಅದರಲ್ಲಿ; ಸ್ವಲ್ಪ ಗಾಬರಿಯಾದರೆ ಎದೆಯ ಮೇಲೆ ಕೈಯಿಟ್ಟುಕೊಳ್ಳುತ್ತಾನೆ, ಮುಖ ಮೊದಲು ಕೆಂಪೇರಿ ಅನಂತರ ಯಾತನೆಯನ್ನು ಸೂಚಿಸುವಂತೆ ವಿವರ್ಣವಾಗುತ್ತದೆ.

ಬೆಳಗುತ್ತಿರುವ ನಂದಾದೀಪ ಆರಿಹೋಗುವ ಕಾಲ ಸನ್ನಿಹಿತವಾಗುತ್ತಿರುವುದೇನೋ ಎನ್ನುವಷ್ಟು ಆ ಪಾದ್ರಿಯ ದೇಹಸ್ಥಿತಿ ಕೆಟ್ಟಿತ್ತು. ಅದೇ ಸಮಯಕ್ಕೆ ರೋಜರ್ ಚಿಲ್ಲಿಂಗ್‌ವರ್ತ್ ಆ ಊರಿಗೆ ಬಂದ. ಆತ ಎಲ್ಲಿಂದ ಬಂದನೆಂದು ಯಾರಿಗೂ ತಿಳಿದಿರಲಿಲ್ಲ. ಆಕಾಶದಲ್ಲಿ ಹಾರಿಬಂದನೋ, ಅಥವಾ ಭೂಮಿಯ ಕೆಳಗಿಂದ ಎದ್ದು ಬಂದನೋ ಎನ್ನುವಷ್ಟು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತ್ತು. ಆತ ಬಹಳ ಚತುರನೆಂದು ಎಲ್ಲರಿಗೂ ತಿಳಿದಿತ್ತು. ಸಾಮಾನ್ಯ ದೃಷ್ಟಿಗೆ ಕೆಲಸಕ್ಕೆ ಬಾರದಂತೆ ಕಾಣುವ, ಮೂಲಿಕೆಗಳು ಬೇರುಗಳು, ಕಾಡುಹೂಗಳು, ಮತ್ತು ವನವೃಕ್ಷಗಳ ಕೊಂಬೆಗಳು ಇವುಗಳಲ್ಲಡಗಿರುವ ಗುಣವನ್ನರಿತು ಆತ ಸಂಗ್ರಹಿಸುತ್ತಿದ್ದ. ದೊಡ್ಡ ವಿದ್ವಾಂಸರೂ, ವಿಜ್ಞಾನಿಗಳೂ ತನ್ನ ಜೊತೆಯವರಾಗಿದ್ದರೆಂದು ಆತ ಹೇಳಿಕೊಳ್ಳುತ್ತಿದ್ದ. ವಿದ್ವಾಂಸರಲ್ಲಿ ಅಷ್ಟೊಂದು ಪ್ರಶಸ್ತಿ ಪಡೆದ ಆತ ಇಲ್ಲಿಗೇಕೆ ಬಂದಿದ್ದ ? ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನೆಲಸಬೇಕಾದ ಆತ ಈ ಬರಡು ಪ್ರದೇಶಕ್ಕೆ ಏತಕ್ಕಾಗಿ ಬಂದಿರಬಹುದು ? ಈ ಪ್ರಶ್ನೆಗೆ ಉತ್ತರವಾಗಿ ಒಂದು ವದಂತಿ ಹರಡಿತ್ತು. ಅದು ಎಷ್ಟು ಅಸಂಬದ್ಧವಾದಿದ್ದರೂ, ಬುದ್ಧಿವಂತರು ಸಹ ಅದನ್ನು ನಂಬಿದ್ದರು. ಜರ್ಮನಿಯ ವಿಶ್ವವಿದ್ಯಾಲಯದಲ್ಲಿ ಪ್ರಸಿದ್ಧ ವೈದ್ಯನಾಗಿದ್ದಾತನು ಗಾಳಿಯಲ್ಲಿ ಹಾರಿಬಂದು ಡಿಮ್ಸ್‌ಡೇಲನ ಮನೆಯ ಬಾಗಿಲಿಗೆ ಬರುವಂತೆ ದೇವರೇ ಕರುಣಿಸಿದ್ದನಂತೆ! ಅವರಿಗಿಂತ ಸ್ವಲ್ಪ ಜ್ಞಾನಿಗಳಾದವರು, ರಂಗಸ್ಥಳಕ್ಕೆ ಲಾಯಖ್ಖಾದ ಈ ಸಂಗತಿಯನ್ನು ನಂಬಿದ್ದರೂ, ಸಮಯಕ್ಕೆ ಸರಿಯಾಗಿ ರೋಜರ್ ಚಿಲ್ಲಿಂಗ್‌ವರ್ತ್ ಬಂದುದರಲ್ಲಿ ದೈವದ ಕೈವಾಡವಿತ್ತೆಂದು ನಂಬಿದರು.

ವೈದ್ಯನು ಪಾದ್ರಿಯಲ್ಲಿ ತೋರುತ್ತಿದ್ದ ಆಸಕ್ತಿ, ಆತನ ಮಂಡಲಿಗೇ

ಸೇರಿ ಆತನ ಸ್ನೇಹ ವಿಶ್ವಾಸಗಳನ್ನು ಪಡೆಯುವುದಾಕ್ಕಾಗಿ, ಎಂಬ ಜನರ ಊಹೆ ಸಹಜವಾಯಿತು. ಪಾದ್ರಿಯ ದೇಹಸ್ಥಿತಿಯನ್ನು ಕಂಡು ಬಹಳ ಗಾಬರಿ ತೋರಿ, ಆತನ ವ್ಯಾಧಿಯನ್ನು ಗುಣಮಾಡಲು ಬಹಳ ಕಾತರನಾಗಿದ್ದ. ಬೇಗನೆ ಚಿಕಿತ್ಸೆ ಪ್ರಾರಂಭಿಸಿದಲ್ಲಿ, ಅದರಿಂದ ಗುಣವಾಗುವುದರಲ್ಲಿ ಸಂದೇಹವಿರಲಿಲ್ಲ. ಪಾದ್ರಿಗಳು, ದೊಡ್ಡವರು, ಚಿಕ್ಕವರು, ತರುಣಿಯರು ಮೊದಲಾಗಿ ಡಿಮ್ಸ್‌ಡೇಲನ ಶಿಷ್ಯಮಂಡಲಿಯವರೆಲ್ಲಾ ವೈದ್ಯನಿಂದ ಚಿಕಿತ್ಸೆ ತೆಗೆದುಕೊಳ್ಳಬೇಕೆಂದು ಒತ್ತಾಯ ಮಾಡತೊಡಗಿದರು. ಡಿಮ್ಸ್‌ಡೇಲ್ ಅವರ ಮಾತನ್ನೆಲ್ಲಾ ಸೌಮ್ಯವಾಗಿಯೇ ನಿರಾಕರಿಸಿದ.

‘ನನಗೆ ಯಾವ ಔಷಧಿಯೂ ಬೇಕಾಗಿಲ್ಲ’ ಎಂದನವನು.

ಆದರೆ ವಾರವಾರಕ್ಕೂ ಕೆನ್ನೆ ರಕ್ತಹೀನವಾಗುತ್ತಿದ್ದುವು; ದನಿಯ ಕಂಪನ ಹೆಚ್ಚುತ್ತಿತ್ತು; ಸದಾ ಎದೆಯಮೇಲೆ ಕೈ ಅದುಮಿ ಹಿಡಿದುಕೊಳ್ಳುವುದಂತೂ ಈಗ ಅಭ್ಯಾಸವೇ ಆಗಿಹೋಯಿತು. ಹೀಗೆ ಕ್ಷೀಣವಾಗುತ್ತಿದ್ದ ಆತ ಹಾಗೆ ಹೇಳುವುದುಂಟೆ? ತನ್ನ ದುಡಿತದಿಂದ ಬೇಸರ ಬಂದಿತ್ತೇ? ಸಾಯಬೇಕೆಂದು ಮನಸ್ಸಾಗಿತ್ತೇ? ಈ ರೀತಿಯಾಗಿ ವೃದ್ಧ ಪಾದ್ರಿಗಳೂ, ಧರ್ಮಾಧಿಕಾರಿಗಳೂ ಡಿಮ್ಸ್‌ಡೇಲನನ್ನು ಪ್ರಶ್ನಿಸಿ, ಆತನನ್ನು ತರಾಟೆಗೆ ತೆಗೆದುಕೊಂಡರು. ಭಗವಂತ ತಾನಾಗಿಯೇ ಸಹಾಯ ನೀಡುತ್ತಿರುವಾಗ ಅದನ್ನು ತಿರಸ್ಕರಿಸುವುದು ಮಹಾ ಪಾಪವೆಂದು ಹೇಳಿದರು. ಡಿಮ್ಸ್‌ಡೇಲ್ ಇದನ್ನೆಲ್ಲಾ ಮೌನವಾಗಿ ಕೇಳಿ, ಕೊನೆಗೆ ವೈದ್ಯನ ಸಲಹೆ ಸ್ವೀಕರಿಸುತ್ತೇನೆಂದು ಮಾತುಕೊಟ್ಟ.

ತನ್ನ ಮಾತಿನಂತೆ ಡಿಮ್ಸ್‌ಡೇಲ್, ರೋಜರ್ ಚಿಲಿಂಗ್‌ವರ್ತನ ಸಲಹೆಯನ್ನು ಪಡೆದ.

‘ನನ್ನ ದುಡಿತ, ದುಃಖ, ಪಾಪ, ಯಾತನೆ ಇವೆಲ್ಲಾ ನನ್ನೊಂದಿಗೆ ಮುಗಿಯಬೇಕೆಂದು ದೇವರ ಇಚ್ಛೆಯಾಗಿದ್ದ ಪಕ್ಷದಲ್ಲಿ ನನಗೇನೋ ಬಹಳ ಸಂತೋಷವೇ. ಪ್ರಾಪಂಚಿಕವಾದವು ನನ್ನ ದೇಹದೊಡನೆ ಸಮಾಧಿಯಾಗಿ, ಆಧ್ಯಾತ್ಮಿಕವಾದವು ನನ್ನೊಡನೆ ಪರಲೋಕಕ್ಕೆ ಹೋಗಬೇಕೆಂದಿದ್ದರೆ, ಸುಮ್ಮನೆ ನನಗಾಗಿ ನಿಮ್ಮ ಚತುರತೆಯನ್ನು ಪರೀಕ್ಷೆ ಮಾಡಿದಂತಾಗುತ್ತದೆ.’

‘ಸಣ್ಣ ವಯಸ್ಸಿನ ಪಾದ್ರಿಗಳೆಲ್ಲಾ ಹೀಗೆಯೇ ಮಾತನಾಡುವುದು. ತಾರುಣ್ಯದಲ್ಲಿರುವವರು, ಇನ್ನೂ ಸರಿಯಾಗಿ ಕಾಲೂರಲಿಲ್ಲ. ಅಷ್ಟರಲ್ಲೇ ಜೀವದ ಮೇಲಿನ ಆಸೆ ತೊರೆದರೆ! ದೇವರ ಜೊತೆಯಲ್ಲಿ ಭೂಮಿಯಮೇಲೆ ಸಂಚರಿಸುತ್ತಿರುವ ಮಹಾತ್ಮರು, ಆತನೊಡನೆ ಜೆರೂಸಲೆಮ್ಮಿನ ಚಿನ್ನದ

ರಸ್ತೆಗಳ ಮೇಲೆ ಓಡಾಡಲು ಸಂತೋಷದಿಂದ ಹೊರಟು ಹೋಗುತ್ತಾರೆ' ಎಂದ ರೋಜರ್ ಚಿಲಿಂಗ್‌ವರ್ತ್.

ಪಾದ್ರಿಯ ಮುಖದ ಮೇಲೆ ಯಾತನೆ ಮಿಂಚಿ ಮಾಯವಾಯಿತು. ತನ್ನ ಎದೆಯ ಮೇಲೆ ಕೈಯಿಟ್ಟುಕೊಂಡು, 'ಇಲ್ಲ, ನನಗೆ ಅಲ್ಲಿ ನಡೆಯುವಷ್ಟು ಯೋಗ್ಯತೆಯಿದ್ದಿದ್ದರೆ, ಇಲ್ಲಿ ದುಡಿಯಲು ಮತ್ತಷ್ಟು ಸಂತೋಷವಾಗುತ್ತಿತ್ತು' ಎಂದನು.

'ಉತ್ತಮರು ಯಾವಾಗಲೂ ತಮ್ಮ ವಿಷಯದಲ್ಲಿ ಸಣ್ಣ ಮಾತನ್ನೇ ಹೇಳಿಕೊಳ್ಳುತ್ತಾರೆ' ಎಂದ ವೈದ್ಯ.

ಈ ರೀತಿಯಲ್ಲಿ ರೋಜರ್ ಚಿಲಿಂಗ್‌ವರ್ತ್, ಡಿಮ್ಸ್‌ಡೇಲನ ವೈದ್ಯನಾದ. ವೈದ್ಯನಿಗೆ ವ್ಯಾಧಿಯೊಂವೇ ಆಸಕ್ತಿಯನ್ನುಂಟುಮಾಡಿದುದಲ್ಲದೆ, ಅವನ ನಡತೆಯನ್ನೂ ಗುಣಗಳನ್ನೂ ಅರಿತುಕೊಳ್ಳುವ ಮನಸ್ಸಾಯಿತು. ವಯಸ್ಸಿನಲ್ಲಿ ಅಷ್ಟೊಂದು ಅಂತರವಿದ್ದ ಅವರಿಬ್ಬರೂ ಬರಬರುತ್ತಾ ಆಗಾಗ್ಗೆ ಜೊತೆಯಲ್ಲಿರತೊಡಗಿದರು. ಪಾದ್ರಿಯ ಆರೋಗ್ಯಕ್ಕಾಗಿಯೂ ಮತ್ತು ವೈದ್ಯನ ಗಿಡಮೂಲಿಕೆಗಳಿಗಾಗಿಯೂ ಅವರಿಬ್ಬರೂ ಸಮುದ್ರ ತೀರದಲ್ಲಿಯೂ, ಕಾಡಿನಲ್ಲಿಯೂ ಹರಟೆ ಹೊಡೆಯುತ್ತಾ ನಡೆದಾಡತೊಡಗಿದರು. ಒಬ್ಬನ ಕೋಣೆಯಲ್ಲಿ ಮತ್ತೊಬ್ಬ ಹೋಗಿ ಕಾಲ ಕಳೆಯುತ್ತಿದ್ದರು. ಆ ವಿಜ್ಞಾನಿಯ ಅಪಾರವಾದ ಜ್ಞಾನ, ತನ್ನ ಜೊತೆಯವರಾದ ಮಿಕ್ಕ ಪಾದ್ರಿಗಳಲ್ಲೂ ಕಾಣಿಸಿದ ಭಾವನೆಗಳು ಡಿಮ್ಸ್‌ಡೇಲನನ್ನು ಆಕರ್ಷಿಸಿದವು. ವೈದ್ಯನ ಈ ಗುಣಗಳನ್ನು ಕಂಡು ಚಕಿತನಾದ. ಡಿಮ್ಸ್‌ಡೇಲ್ ನಿಜವಾದ ದೈವಭಕ್ತ, ಮತ ಶ್ರದ್ಧೆಯುಳ್ಳವನು. ಆತನ ಮನೋಭಾವನೆ ಬಹಳ ಉತ್ತಮ ಮಟ್ಟದ್ದಾಗಿದ್ದುದಲ್ಲದೆ, ದಿನೇ ದಿನೇ ಆ ಮಾರ್ಗದಲ್ಲಿ ಮುಂದುವರೆಯುತ್ತಿತ್ತು. ಯಾವ ದರ್ಜೆಯ ಸಮಾಜದಲ್ಲಾಗಲೀ ಆತನು ಪ್ರಗತಿಪರ ದೃಷ್ಟಿಯುಳ್ಳವನೆಂದು ಹೇಳಲಾಗುತ್ತಿರಲಿಲ್ಲ. ಯಾವಾಗಲೂ ಒಂದು ವಿಧವಾದ ಮತ ಶ್ರದ್ಧೆಯ ಭಾರವಿದ್ದರೇನೇ ಅವನ ಮನಸ್ಸಿಗೆ ಶಾಂತಿ. ಅದರ ಸೆರೆಯಲ್ಲಿ ಆಸರೆ ಪಡೆಯುತ್ತಾನೆ. ಅವರೂ ಒಂದೊಂದು ವೇಳೆ ಮಾತು ಬೇರೆದಾರಿ ಹಿಡಿದಾಗ ಅವನಿಗೆ ಒಂದು ವಿಧವಾದ ಸಂತೋಷವೇ ಉಂಟಾಗುತ್ತಿತ್ತು. ಸೂರ್ಯರಶ್ಮಿಯನ್ನು ಕಾಣದ, ಗಾಳಿಯಾಡದ ಕೋಣೆಯ ಮಂಕು ದೀಪದ ಬೆಳಕಿನಲ್ಲಿ ಪುಸ್ತಕಗಳ ಮಧ್ಯೆ ದಿನೇ ದಿನೇ ಸವೆಯುತ್ತಿದ್ದ ಜೀವಕ್ಕೆ, ಕಿಟಕಿ ತೆರೆದು ಗಾಳಿಯಾಡಲು ಬಿಟ್ಟಂತಾಗುತ್ತಿತ್ತು. ಆದರೆ ಆ ಗಾಳಿಯ ಕೊರೆತ

ಹೆಚ್ಚುಕಾಲ ಅನುಭವಿಸಲು ಹಿತವಾಗಿರುತ್ತಿರಲಿಲ್ಲ. ಆದ್ದರಿಂದ ಪಾದ್ರಿಯೂ ಮತ್ತು ವೈದ್ಯನೂ ಮತ್ತೆ 'ಸಾಂಪ್ರದಾಯಿಕವಾದ ಮಾತಿನ ಎಲ್ಲೆಯೊಳಕ್ಕೇ ಹಿಂದಿರುಗುತ್ತಿದ್ದರು.

ರೋಜರ್ ಚಿಲಿಂಗ್‌ವರ್ತ್ ತನ್ನ ರೋಗಿಯಸ್ವಭಾವವನ್ನು ಸೂಕ್ಷ್ಮವಾಗಿ ಪರಿಶೀಲಿಸತೊಡಗಿದ. ಅವನು ರೂಢಿಯ ಮಾತನ್ನು ಬಿಟ್ಟು ಸ್ವಲ್ಪ ಅತ್ತಿತ್ತ ಹೋದಾಗಲೆಲ್ಲಾ ಬಹಳ ಜಾಗರೂಕತೆಯಿಂದ ಅವನ ಸ್ವಭಾವದಲ್ಲಿ ಬದಲಾವಣೆಯೇನಾದರೂ ಕಂಡು ಬರಬಹುದೇನೋ ಎಂದು ಕಾಯುತ್ತಿದ್ದ. ರೋಗಿಗೆ ಚಿಕಿತ್ಸೆ ಪ್ರಾರಂಭಿಸುವುದಕ್ಕೆ ಮೊದಲು ಆತನನ್ನು ಚೆನ್ನಾಗಿ ಪರಿಶೀಲಿಸುವುದು ಅತಿ ಮುಖ್ಯವೆಂದು ವೈದ್ಯ ಭಾವಿಸಿದ್ದ. ಶಾರೀರಿಕ ವ್ಯಾಧಿಗಳಿಗೂ, ಮಾನಸಿಕ ವೈಲಕ್ಷಣಗಳಿಗೂ ಸಂಬಂಧವಿದ್ದೇ ಇರುತ್ತದೆ. ಆರ್ಥರ್ ಡಿಮ್ಸ್‌ಡೇಲನಲ್ಲೂ ಸಹ ವಿಚಾರ ಶಕ್ತಿಯೂ ಮನಸ್ಸಿನ ಸೂಕ್ಷ್ಮತೆಯೂ ಬಹಳ ಹೆಚ್ಚಾಗಿದ್ದುದರಿಂದ ಅವನ ವ್ಯಾಧಿಗೆ ಮೂಲಕಾರಣ ಮನಸ್ಸೇ ಆಗಿತ್ತು. ಆದ್ದರಿಂದ ರೋಜರ್ ಚಿಲಿಂಗ್‌ವರ್ತ್ ಬಹಳ ಜಾಗರೂಕತೆಯಿಂದ, ರೋಗಿಯ ಹೃದಯಾಂತರಾಳವನ್ನು ಪ್ರವೇಶಿಸ ತೊಡಗಿ, ಅವನ ಸ್ವಂತನಿಯಮಗಳು, ನೆನಪುಗಳು ಇವುಗಳನ್ನೆಲ್ಲಾ ಹುಷಾರಾಗಿ ತೂಗಿನೋಡುತ್ತಾ, ಕತ್ತಲೆಯ ಗವಿಯನ್ನು ಹೊಕ್ಕು ನಿಧಿ ಹುಡುಕುತ್ತಿರುವವನಂತೆ ವ್ಯಾಧಿಯ ಮೂಲಕಾರಣವನ್ನು ಹುಡುಕಲು ಪ್ರಯತ್ನಿಸ ತೊಡಗಿದ. ಸಮಯ ದೊರೆತಾಗ ಬಹಳ ಬುದ್ಧಿವಂತಿಕೆಯಿಂದ ಪರೀಕ್ಷಿಸುವವನ ದೃಷ್ಟಿಯಿಂದ ಯಾವ ರಹಸ್ಯವೂ ತಪ್ಪಿಸಿಕೊಳ್ಳಲಾರದು. ರಹಸ್ಯವನ್ನು ಹುದುಗಿಟ್ಟುಕೊಂಡಿರುವ ಮನುಷ್ಯನಂತೂ ತನ್ನ ವೈದ್ಯನೊಡನೆ ಸಲಿಗೆಯಿಂದಲೇ ಇರಬಾರದು. ಆಗೊಂದು ಈಗೊಂದು ಮಾತನಾಡುತ್ತಾ, ಯಾವಾಗಲೋ ಅವನ ರಹಸ್ಯವೆಲ್ಲಾ ಬಯಲಾಗುತ್ತದೆ.

ಬರಬರುತ್ತಾ ಆ ಇಬ್ಬರ ನಡುವೆ ಸಲಿಗೆ ಬೆಳೆಯತೊಡಗಿತು. ಮಾನವನ ತಿಳಿವಳಿಕೆಗೆಟಕುವ ವಿಷಯಗಳನ್ನೆಲ್ಲಾ ಅವರು ಚರ್ಚಿಸುತ್ತಿದ್ದರು. ನೀತಿಶಾಸ್ತ್ರ, ಧರ್ಮಶಾಸ್ತ್ರ, ಊರಿನ ವಿಷಯಗಳು ಎಲ್ಲವನ್ನು ಕುರಿತು ಮಾತನಾಡುತ್ತಿದ್ದರು. ಒಬ್ಬರೊಡನೊಬ್ಬರು ತಮ್ಮ ಸ್ವಂತ ವಿಚಾರಗಳನ್ನು ಮಾತನಾಡಿಕೊಂಡರೂ, ಗುಟ್ಟು ಮಾತ್ರ ಹೊರಬೀಳುತ್ತಿರಲಿಲ್ಲ. ಆದರೂ ರೋಗಿಯ ಮನಸ್ಸಿನಲ್ಲಿ ಯಾವುದೋ ರಹಸ್ಯ ಅಡಗಿದೆಯೆಂದು ರೋಜರ್ ಚಿಲಿಂಗ್‌ವರ್ತ್ ಭಾವಿಸಿದ್ದ. ಆತನ ಶಾರೀರಕ ವ್ಯಾಧಿಯೂ ಸರಿಯಾಗಿ ಅರ್ಥವಾಗಿರಲಿಲ್ಲ. ಆ ಸಂಕೋಚ ವಿಚಿತ್ರವಾಗಿತ್ತು.

ಸ್ವಲ್ಪ ದಿನ ಕಳೆದ ಮೇಲೆ, ರೋಜರ್ ಚಿಲಿಂಗ್‌ವರ್ತ್‌ನ ಸೂಚನೆಯಂತೆ, ಇಬ್ಬರೂ ಒಂದೇ ಮನೆಯಲ್ಲಿ ವಾಸಮಾಡುವಂತೆ ಡಿಮ್ಸ್‌ಡೇಲ್‌ನ ಗೆಳೆಯರು ಏರ್ಪಾಡು ಮಾಡಿದರು. ಕಾತುರನೂ, ಆತ್ಮೀಯನೂ ಆದ ವೈದ್ಯನು ಅವನನ್ನು ಸೂಕ್ಷ್ಮವಾಗಿ ಪರೀಕ್ಷಿಸಲಿ ಎನ್ನುವುದೇ ಅವರ ಉದ್ದೇಶವಾಗಿತ್ತು. ಈ ಸುದ್ದಿ ಕೇಳಿದ ತಕ್ಷಣ ಊರಿಗೆ ಊರೇ ಸಂತೋಷಗೊಂಡಿತು. ಮದುವೆಯಾಗದಿದ್ದ ಕಾರಣ, ಆತನ ಸೌಖ್ಯಕ್ಕೆ ಇದೊಂದೇ ಒಳ್ಳೆಯ ಮಾರ್ಗವಾಗಿದ್ದುದು. ಮದುವೆಯಾಗೆಂದು ಬಲವಂತ ಮಾಡಿದರೂ ಆರ್ಥರ್ ಡಿಮ್ಸ್‌ಡೇಲ್ ಅದಕ್ಕೆ ಒಪ್ಪದೆ, ಬ್ರಹ್ಮಚಾರಿಯಾಗಿ ಉಳಿಯುವುದೇ ಚರ್ಚಿನ ಕರ್ತವ್ಯಗಳಲ್ಲೊಂದು ಎಂದು ಭಾವಿಸಿದ್ದ. ಆದ್ದರಿಂದ ಅವರಿವರು ನೀಡುವ ಆಹಾರ, ನೆರಳು ಇವೇ ಆಧಾರವಾಗಿದ್ದ ಆತನಿಗೆ ತಂದೆಯ ಸಮಾನನಾದ ಅನುಭವಶಾಲಿ ರೋಜರ್ ಚಿಲಿಂಗ್‌ವರ್ತ್‌ನು ಸಿಕ್ಕಿದ್ದು ಬಹಳ ಅನುಕೂಲವೇ ಆಯಿತು.

ಗೆಳೆಯರಿಬ್ಬರೂ ಆ ಊರಿನ ಒಬ್ಬ ಯೋಗ್ಯಳಾದ ಧಾರ್ಮಿಕ ಶ್ರದ್ಧೆಯುಳ್ಳ ವಿಧವೆಯ ಮನೆಯಲ್ಲಿ ವಾಸಿಸತೊಡಗಿದರು. ಆ ಮನೆ ಪ್ರಾರ್ಥನಾ ಮಂದಿರದ ಸಮೀಪದಲ್ಲೇ ಇತ್ತು. ಮನೆಯ ಒಂದು ಪಕ್ಕದಲ್ಲಿ ಸ್ಮಶಾನವಿದ್ದಿತು. ಒಂದು ವಿಧದಲ್ಲಿ ಅದು ಅವರಿಬ್ಬರಿಗೂ ಅನುಕೂಲವಾಗಿಯೇ ಇತ್ತು. ತಾಯಿಯಂತೆ ಡಿಮ್ಸ್‌ಡೇಲನನ್ನು ನೋಡಿಕೊಳ್ಳುತ್ತಿದ್ದ ಆಕೆ, ಅವನಿಗೆ ಗಾಳಿ ಬೆಳಕು ಚೆನ್ನಾಗಿರುವ ಮನೆಯ ಮುಂದಿನ ಕೋಣೆಯನ್ನು ಬಿಟ್ಟುಕೊಟ್ಟು, ಕಿಟಕಿಗಳಿಗೆಲ್ಲಾ ತೆರೆಗಳನ್ನು ಹಾಕಿಕೊಟ್ಟಿದ್ದಳು. ಗೋಡೆಗಳನ್ನೆಲ್ಲಾ ಚಿತ್ರ ನೇಯ್ದ ಬಟ್ಟೆಗಳಿಂದ ಶೃಂಗರಿಸಿದ್ದರು. ಅದರಲ್ಲಿ ಬೈಬಲಿನ ಕಥೆಯಾದ ಡೇವಿಡ್ ಮತ್ತು ಬಾತ್ಸೇಬಾ, ಪ್ರವಾದಿ ನಾತಾನ್ ಮೊದಲಾದ ಚಿತ್ರಗಳನ್ನು ಬಿಡಿಸಿದ್ದರು. ಈ ಕೋಣೆಯಲ್ಲಿ ಆ ಪಾದ್ರಿ ಆಗಿನ ಕಾಲದಲ್ಲಿ ದೊರೆಯುತ್ತಿದ್ದ ಧಾರ್ಮಿಕ ಗ್ರಂಥಗಳನ್ನೆಲ್ಲಾ ಸಂಗ್ರಹಿಸಿಟ್ಟುಕೊಂಡ. ಮನೆಯ ಮತ್ತೊಂದು ಕಡೆ ರೋಜರ್ ಚಿಲಿಂಗ್‌ವರ್ತ್ ತನ್ನ ವ್ಯಾಸಂಗದ ಕೋಣೆಯನ್ನೂ ಮತ್ತು ಪ್ರಯೋಗಶಾಲೆಯನ್ನೂ ಸಿದ್ಧಮಾಡಿಕೊಂಡ. ಇಂದಿನ ವಿಜ್ಞಾನಿಗಳ ದೃಷ್ಟಿಯಿಂದ ಆ ಪ್ರಯೋಗಶಾಲೆ ತುಂಬ ಅಪೂರ್ಣವಾಗಿದ್ದರೂ, ಅಲ್ಲೊಂದು ಬಟ್ಟಿಯಿಳಿಸುವ ಯಂತ್ರವೂ ರಸಾಯನಿಕ ವಸ್ತುಗಳನ್ನು ಬೆರೆಸಲು ಸಲಕರಣೆಗಳೂ ಇದ್ದವು. ಹೀಗೆ ಸಿದ್ಧಮಾಡಿಕೊಂಡು ಇಬ್ಬರೂ ಒಂದೊಂದು ಕಡೆ ಇದ್ದರೂ ಆಗಾಗ್ಗೆ ಒಬ್ಬರನ್ನೊಬ್ಬರು ವಿಚಾರಿಸಿಕೊಳ್ಳತೊಡಗಿದರು.

ಡಿಮ್ಸ್‌ಡೇಲನ ಗೆಳೆಯರೆಲ್ಲಾ, ಜನರ ಬಹಿರಂಗವಾದ ಮತ್ತು ಗುಪ್ತ ಪ್ರಾರ್ಥನೆಗಳನ್ನೆಲ್ಲಾ ಮನ್ನಿಸಿ, ದೇವರೇ ಅವನ ವ್ಯಾಧಿಯನ್ನು ಗುಣ ಮಾಡುವ ಸಲುವಾಗಿ ಇಷ್ಟೆಲ್ಲಾ ಅನುಕೂಲಗಳನ್ನು ಒದಗಿಸಿಕೊಟ್ಟಿರುವ ನೆಂದು ಭಾವಿಸಿದರು. ಆದರೆ ಮತ್ತೆ ಕೆಲವರು ಇತ್ತೀಚೆಗೆ ಡಿಮ್ಸ್‌ಡೇಲ ನಿಗೆ ಮತ್ತು ವೈದ್ಯನಿಗೂ ನಡುವೆ ಇದ್ದ ಸಂಬಂಧವನ್ನು ವಿಚಿತ್ರ ದೃಷ್ಟಿ ಯಿಂದ ನೋಡತೊಡಗಿದರೂ, ಅರಿಯದ ಜನ ಸ್ವತಃ ನೋಡಲು ಪ್ರಯತ್ನಿ ಸಿದರೆ, ಅವರು ಖಂಡಿತವಾಗಿಯೂ ಮೋಸಹೋಗುತ್ತಾರೆ. ಆದರೆ ಎಂದಿ ನಂತೆ ಅವರು ಒಂದು ತೀರ್ಮಾನಕ್ಕೆ ಬಂದಾಗ ಅದರಲ್ಲಿ ದೋಷವಿರುವು ದಿಲ್ಲ ; ಮಾನವಾತೀತವಾದ ಒಂದು ವಿಧವಾದ ಸತ್ಯ ಬಯಲಾಗುತ್ತದೆ. ಆ ಊರಿನ ಜನಕ್ಕೆ ರೋಜರ್ ಚಿಲಿಂಗ್‌ವರ್ತನ ಮೇಲಿದ್ದ ದುರಭಿ ಪ್ರಾಯವನ್ನು ಸಮರ್ಥಿಸಲು ಯಾವ ತಳಹದಿಯೂ ಇರಲಿಲ್ಲ. ಈಗೆ ಸುಮಾರು ಮೂವತ್ತು ವರ್ಷಗಳ ಹಿಂದೆ, ಲಂಡನ್ ಪಟ್ಟಣದಲ್ಲಿ ಸರ್ ಥಾಮಸ್ ಓವರ್‌ಬರಿಯವರ ಕೊಲೆಯಾದಾಗ ಅಲ್ಲೊಬ್ಬ ವೈದ್ಯನಿದ್ದನಂತೆ. ಅವನು ಆಗ ಬೇರೆ ಯಾವುದೋ ಹೆಸರನ್ನಿಟ್ಟುಕೊಂಡು, ಆ ಕೊಲೆಗೆ ಸಂಬಂಧಪಟ್ಟ ಇಂದ್ರಜಾಲಿಕ ಡಾಕ್ಟರ್ ಫೋರ್ಮನ್ನನ ಸಂಗಡ ಇದ್ದ ನೆಂದು ಒಬ್ಬಾತ ಹೇಳಿದ. ಈ ವೈದ್ಯ ರೆಡ್ ಇಂಡಿಯನ್ನರ ಸೆರೆಯಲ್ಲಿ ದ್ದಾಗ, ಅವರ ಪೂಜಾರಿಗಳಿಂದ, ಆಶ್ಚರ್ಯಕರವಾಗಿ ಗುಣಮಾಡುವ ಕಣ್ಣುಕಟ್ಟು ವಿದ್ಯೆಯನ್ನು ಕಲಿತುಬಂದಿರುವನೆಂದು ಮತ್ತೆ ಕೆಲವರು ಅಂದು ಕೊಳ್ಳುತ್ತಿದ್ದರು. ಒಟ್ಟಿನಲ್ಲಿ ರೋಜರ್ ಚಿಲಿಂಗ್‌ವರ್ತ್ ಇಲ್ಲಿಗೆ ಬಂದ ಮೇಲೆ ಅದರಲ್ಲೂ ಡಿಮ್ಸ್‌ಡೇಲನ ಜೊತೆಯಲ್ಲಿ ವಾಸಿಸತೊಡಗಿದ ಮೇಲೆ, ಅವನಲ್ಲಿ ಬಹಳ ಮಾರ್ಪಾಟಾಗಿದೆಯೆಂದು ಜನ ಆಡಿಕೊಳ್ಳತೊಡಗಿದರು. ಮೊದಮೊದಲು ಆತನ ಮುಖ ಶಾಂತವಾಗಿ, ಧ್ಯಾನಾಸಕ್ತನಾಗಿ, ವಿದ್ವ ತ್ಪೂರ್ಣವಾಗಿದ್ದಿತು. ಈಗ ಮೊದಲು ಕಾಣದಿದ್ದ ಭೀಷಣವಾದ ತುಂಟ ನೋಟವೊಂದು ಕಾಣುತ್ತಿತ್ತು. ಹೆಚ್ಚು ಹೆಚ್ಚಾಗಿ ನೋಡಿದಂತೆಲ್ಲ ಅದು ಮತ್ತಷ್ಟು ಸ್ಪಷ್ಟವಾಗತೊಡಗಿತು. ಅವನ ಪ್ರಯೋಗ ಶಾಲೆಯಲ್ಲಿ ಪಾತಾಳ ದಿಂದ ತಂದ ಬೆಂಕಿಯನ್ನು ಉಪಯೋಗಿಸುತ್ತಾನೆ; ಆದರ ಹೊಗೆಯಿಂದಲೇ ಅವನ ಮುಖವೆಲ್ಲಾ ಕಪ್ಪಾಗುತ್ತಿದೆ ಎಂದು ಅರಿಯದವರು ಆಡಿಕೊಳ್ಳ ತೊಡಗಿದರು.

ಒಟ್ಟಿನಲ್ಲಿ ಇದೇ ಅಭಿಪ್ರಾಯ ಎಲ್ಲ ಜನರಲ್ಲೂ ಹರಡಿತು. ಹಿಂದಿನ ಕ್ರೈಸ್ತ ಸನ್ಯಾಸಿಗಳಿಗಾದಂತೆಯೇ, ರೆವರೆಂಡ್ ಆರ್ಥರ್ ಡಿಮ್ಸ್‌ಡೇಲ್‌ರವ

ರನ್ನೂ ಸಹ ಸೈತಾನನೋ ಅಥವ ಅವನ ಕಡೆಯವನೋ ರೋಜರ್ ಚಿಲಿಂಗ್‌ವರ್ತ್‌ನ ರೂಪದಲ್ಲಿ ಬಂದು ಕಾಡಿಸುತ್ತಿರಬೇಕೆಂದು ಅಭಿಪ್ರಾಯ ಪಟ್ಟರು. ದೇವರಿಂದ ಅಪ್ಪಣೆ ಪಡೆದ ಆ ಪಿಶಾಚಿ, ಪಾದ್ರಿಯ ಸಲಿಗೆ ಸಂಪಾದಿಸಿ ಅವನ ಆತ್ಮ ನಾಶಮಾಡಲು ತೊಡಗಿತ್ತು. ಆದರೆ ಖಂಡಿತ ವಾದ ವಿಜಯ ಯಾರಿಗೆಂದು, ಜನಕ್ಕೆ ಅನುಮಾನವಿರಲಿಲ್ಲ. ಪಾದ್ರಿ ಈ ಕಷ್ಟವನ್ನು ಜಯಿಸಿ, ಬೆಳಗುತ್ತಾ ಹೊರಬರುವುದರಲ್ಲಿ ಜನಕ್ಕೆ ನಂಬಿಕೆ ಯಿಂದ, ಆಸೆಯಿಂದ ಎದುರು ನೋಡತೊಡಗಿದರು. ಆದರೂ ಆ ಜಯ ವನ್ನು ಗಳಿಸಬೇಕಾದರೆ ಅವನು ಪಡಬೇಕಾದ ಯಾತನೆಯನ್ನು ಯೋಚಿಸಿ ದರೆ ವ್ಯಸನವಾಗುತ್ತಿತ್ತು.

ಆ ಪಾದ್ರಿಯ ನಿಸ್ತೇಜವಾದ ಕಣ್ಣಿನಲ್ಲಿ ಅಡಗಿದ್ದ ಆ ಹೆದರಿಕೆಯನ್ನು ನೋಡಿದರೆ ಆ ಹೋರಾಟ ಎಷ್ಟು ದಾರುಣವಾದುದೆಂದು ಅನ್ನಿಸುತ್ತಿತ್ತಲ್ಲದೆ ವಿಜಯ ಕೂಡ ಅನುಮಾನಾಸ್ಪದವಾಗತೊಡಗಿತು.

## ೧೦

ತನ್ನ ಜೀವನದಲ್ಲೆಲ್ಲಾ ರೋಜರ್ ಚಿಲಿಂಗ್‌ವರ್ತ್ ಶಾಂತ ಸ್ವಭಾವ ದವನೂ, ತಕ್ಕಮಟ್ಟಿಗೆ ದಯಾಳುವೂ ಆಗಿದ್ದನು. ತನ್ನ ನಿತ್ಯ ಜೀವನದಲ್ಲಿ ಪ್ರಾಮಾಣಿಕನಾಗಿ ಬಾಳಿದ್ದ. ತನಗಾಗಿದ್ದ ಅನ್ಯಾಯವನ್ನು ಮನಸ್ಸಿನಲ್ಲಿಟ್ಟು ಕೊಂಡಿರುವುದಕ್ಕಿಂತ ಆತನಿಗೆ ಸತ್ಯವನ್ನು ಕಂಡುಹಿಡಿಯುವುದರಲ್ಲಿ ಹೆಚ್ಚು ಆಸಕ್ತಿಯುಂಟಾಗಿತ್ತು. ಅವನು ತನ್ನ ತನಿಖೆ ಮುಂದುವರಿಸಿಂದತೆಲ್ಲಾ ಒಂದು ವಿಧವಾದ ಘೋರ ಮಂತ್ರ ಶಕ್ತಿಯ ಹಿಡಿತಕ್ಕೆ ಸಿಕ್ಕಿ ಅದಕ್ಕೆ ತಲೆ ಬಾಗಬೇಕಾಯಿತು. ಅವನು ಆ ಪಾದ್ರಿಯ ಹೃದಯವನ್ನು ಅಗೆದು, ಚಿನ್ನ ಕ್ಕಾಗಿ ಹುಡುಕಾಡುತ್ತಿರುವ ಗಣಿಯ ಕೆಲಸಗಾರನಂತೆ ಹುಡುಕ ತೊಡಗಿದ; ಇಲ್ಲ, ಸಮಾಧಿಯನ್ನು, ಸತ್ತವನೊಂದಿಗೆ ಹೂಳಲ್ಪಟ್ಟ ಒಡವೆಗಾಗಿ ಅಗೆದು ಅಲ್ಲಿ ಒಂದು ಕೊಳೆತ ಹೆಣವೊಂದನ್ನು ನೋಡುವ ಗುಳಿ ಅಗೆಯುವವನಂತೆ ಅರಸತೊಡಗಿದ.

ಕೆಲವು ವೇಳೆ ಅವನ ಕಣ್ಣುಗಳಲ್ಲಿ ಬೆಳಕು ಮೂಡುತ್ತಿತ್ತು. ಆ ಬೆಳಕು ಅಪಶಕುನ ಸೂಚಿಸುತ್ತಿತ್ತು. ಅರಸ ತೊಡಗಿದ್ದ ಗಣಿಯಲ್ಲಿ ಅವನನ್ನು ಉತ್ತೇಜನಗೊಳಿಸುವ ಸೂಚನೆಗಳು ಕಂಡು ಬಂದಿದ್ದಿರಬೇಕು.

'ಈ ಮನುಷ್ಯನನ್ನು ಎಲ್ಲರೂ ಬಹಳ ಯೋಗ್ಯನೆಂದು ತಿಳಿದುಕೊಂಡಿ ದ್ದಾರೆ. ಅವನು ಸನ್ಯಾಸಿಯಂತೆ ಕಂಡರೂ, ಅವನ ತಂದೆಯಿಂದಲೋ,

ಅಥವಾ ತಾಯಿಯಿಂದಲೋ ವಿಷಯ ಲಂಪಟತೆಯನ್ನು ಹೊಂದಿದ್ದಾನೆ. ಇದೇ ಮಾರ್ಗವನ್ನೇ ಅನುಸರಿಸಿ ಮುಂದಕ್ಕೆ ಹೋಗುವುದು ಉತ್ತಮ'ಎಂದು ತನಗೆ ತಾನೇ ಹೇಳಿಕೊಂಡ ವೈದ್ಯ.

ಪಾದ್ರಿಯ ಹೃದಯುವನ್ನು ಬಹಳ ಕಾಲ ಹುಡುಕಿದ ಮೇಲೆ, ಅಲ್ಲಿ ಅನೇಕ ಬೆಲೆ ಬಾಳುವ ವಸ್ತುಗಳು ದೊರೆಯುಬಹುದು. ತಮ್ಮ ಜನಾಂಗದ ಶ್ರೇಯೋಭಿಲಾಷೆ, ಪರರ ಮೇಲೆ ವಿಶ್ವಾಸ, ಉತ್ತಮವಾದ ಭಾವನೆಗಳು, ವ್ಯಾಸಂಗದಿಂದಲೂ ಧ್ಯಾನದಿಂದಲೂ ಬಲಗೊಂಡಿರುವ ಧಾರ್ಮಿಕದೃಷ್ಟಿ, ಮೊದಲಾದ ಎಣೆಯಿಲ್ಲದ ಬೆಲೆಯುಳ್ಳ ವಸ್ತುಗಳು ದೊರೆಯುಬಹುದು. ಆದರೆ ಇವೆಲ್ಲ ಅಲ್ಲಿ ಬೇರೆ ಏನನ್ನೋ ಅರಸುತ್ತಿರುವ ಅನ್ವೇಷಕರಿಗೆ ಕಸಕ್ಕೆ ಸಮಾನ. ಅವನು ಪುನಃ ಮತ್ತೊಂದು ದೃಷ್ಟಿಯಿಂದ ಅರಸಬೇಕಾಗ ಬಹುದು. ಆದುದರಿಂದ ಆ ವೈದ್ಯ ಬಹಳ ಜಾಗರೂಕನಾಗಿ ತನ್ನ ಕೆಲಸ ವನ್ನು ಮುಂದುವರಿಸತೊಡಗಿದ. ನಿಧಿಯನ್ನು ತನ್ನ ಕಣ್ಣುಗೊಂಬೆಯಂತೆ ಕಾಪಾಡಿಕೊಂಡು ಎಚ್ಚೆತ್ತು ಕಾದುಕೊಂಡಿರುವವನ ಕೋಣೆಯೊಳಕೆ ನುಗ್ಗುವ ಕಳ್ಳನಂತೆ ಮೆಲ್ಲನೆ ಮುಂದುವರಿಯತೊಡಗಿದ. ಅವನು ಎಷ್ಟೇ ಹುಷಾರಾಗಿ ಹೆಜೆಯಿಟ್ಟರೂ, ಎಲ್ಲೋ ಕಾಲಸಪ್ಪಳವಾಗಿ ಬಿಡುತ್ತದೆ, ಬಟ್ಟೆಯ ಮರಮರ ಶಬ್ದವಾಗಿಬಿಡುತ್ತದೆ, ತನ್ನ ನೆರಳು ಆ ಕೋಣೆಯಲ್ಲಿರು ವವನ ಮೇಲೆ ಬಿದ್ದುಬಿಡುತ್ತದೆ. ಡಿಮ್ಸ್‌ಡೇಲನಿಗೂ ಅಂತಃಪ್ರೇರಣೆಯಿಂದ ಮಸಕುಮಸಕಾಗಿ ತನ್ನ ಹಿತ ಶತ್ರು ತನ್ನೊಡನೆ ಗೆಳೆತನ ಬೆಳೆಸುತ್ತಿರುವು ದರ ಅರಿವಾಗುತ್ತದೆ. ರೋಜರ್ ಚಿಲಿಂಗ್‌ವರ್ತ್‌ನಿಗೂ ಅದೇ ರೀತಿ ಅಂತಃಪ್ರೇರಣೆಯಿತ್ತು. ಪಾದ್ರಿ ಗಾಬರಿಗೊಂಡು ಅವನೆಡೆಗೆ ನೋಡಿದಾಗ, ಇವನೂ ಜಾಗರೂಕನಾಗಿ, ಅವನನ್ನು ಪರೀಕ್ಷಿಸುತ್ತಿದ್ದರೂ ಅನುಕಂಪ ತೋರುವವನಂತೆ ಸುಮ್ಮನೆ ಕುಳಿತುಬಿಡುತ್ತಾನೆ.

ಸಾಧಾರಣವಾಗಿ ಗೊಂದಲದಲ್ಲಿರುವ ಮನಸ್ಸಿಗೆ ಮಂಕುಹಿಡಿಯು ವಂತೆ ಡಿಮ್ಸ್‌ಡೇಲನ ತಲೆಯಲ್ಲೂ ಮಂಕು ಕವಿದಿದ್ದುದಲ್ಲದೆ, ಮನುಷ್ಯ ವರ್ಗವನ್ನೇ ಸಂಶಯ ದೃಷ್ಟಿಯಿಂದ ನೋಡತೊಡಗಿದ್ದ. ಆದುದರಿಂದಲೇ ಅವನಿಗೆ ಈ ವೈದ್ಯನ ಸ್ವಭಾವವನ್ನು ಅರಿತುಕೊಳ್ಳಲಾಗಲಿಲ್ಲ. ಅವನು ಯಾರನ್ನೂ ತನ್ನ ಆತ್ಮೀಯನೆಂದು ನಂಬುತ್ತಿರಲಿಲ್ಲವಾದುದರಿಂದ, ತನ್ನ ಶತ್ರು ಕಣ್ಣೆದುರಿಗೆ ಬಂದು ನಿಂತಾಗಲೂ ಅದನ್ನು ಪತ್ತೆ ಹಚ್ಚಲು ಸಾಧ್ಯ ವಾಗಲಿಲ್ಲ. ಆ ವೈದ್ಯನೊಡನೆ ಸಲಿಗೆಯಿಂದ ಮಾತನಾಡುತ್ತಾನೆ; ಅವನನ್ನು ತನ್ನ ಕೋಣೆಗೆ ಕರೆದುಕೊಂಡು ಬರುತ್ತಾನೆ; ಇಲ್ಲವೇ ತಮಾಷೆ

ಗಾಗಿ ತಾನೇ ಅವನ ಪ್ರಯೋಗ ಶಾಲೆಗೆ ಹೋಗಿ, ಅಲ್ಲಿ ಔಷಧಿಗಳನ್ನು ತಯಾರಿಸುವುದನ್ನು ನೋಡುತ್ತಾ ಕುಳಿತಿರುತ್ತಾನೆ.

ಒಂದು ದಿನ ಪ್ರಯೋಗಶಾಲೆಯ ಕಿಟಕಿಯ ಮೇಲೆ ಮೊಣಕೈಯೂರಿ, ಕೈಯನ್ನು ಹಣೆಗೆ ಆಸರೆಯಾಗಿಟ್ಟುಕೊಂಡು, ಹೊರಗಿದ್ದ ಮಸಣದ ಕಡೆಗೇ ನೋಡುತ್ತ ವೈದ್ಯನೊಡನೆ ಮಾತನಾಡುತ್ತಿದ್ದ ಡಿಮ್ಸ್‌ಡೇಲ್. ರೋಜರ್ ಚಿಲಿಂಗ್‌ವರ್ತ್ ನೋಡಲು ಅಸಹ್ಯವಾದ ಕೆಲವು ಗಿಡಗಳನ್ನು ಪರೀಕ್ಷಿಸುತ್ತಿದ್ದ.

'ಆ ಜಬ್ಬಲಾದ ಕಪ್ಪು ಎಲೆಯ ಗಿಡಗಳನ್ನು ಎಲ್ಲಿಂದ ತಂದಿರಿ ?' ಎಂದು ಮುಖ ತಿರುಗಿಸದೆ ಕೇಳಿದ ಡಿಮ್ಸ್‌ಡೇಲ್. ಇತ್ತೀಚೆಗೆ ಅವನು ಯಾರೊಡನೆಯೂ ಮುಖಕೊಟ್ಟು ಮಾತನಾಡುತ್ತಿರಲಿಲ್ಲ.

ವೈದ್ಯ ತನ್ನ ಪರೀಕ್ಷೆಯನ್ನು ಮುಂದುವರಿಸುತ್ತಾ: 'ಇಲ್ಲೇ, ಪಕ್ಕದಲ್ಲಿರುವ ಸಮಾಧಿ ಭೂಮಿಯಲ್ಲಿ, ಇದೇನೋ ನನಗೂ ಹೊಸದಾಗಿದೆ. ಯಾವುದೋ ಹೆಸರಿಲ್ಲದ ಗೋರಿಯ ಮೇಲೆ ಬೆಳೆದುಕೊಂಡಿತ್ತು. ಅವನ ನೆನಪು ಮಾಡಿಕೊಡುವುದಕ್ಕೇ ಇವು ಬೆಳೆದಿದ್ದವೋ ಏನೋ. ಇದು ಅವನ ಹೃದಯದಲ್ಲಡಗಿದ್ದ ರಹಸ್ಯದ ಫಲವಾಗಿ ಬೆಳೆದುಕೊಂಡಿರಬೇಕು. ಪಾಪ ಅವನು ಬದುಕಿದ್ದಾಗಲೇ ಅದನ್ನು ಬಯಲು ಮಾಡಿದ್ದರೆ ಚೆನ್ನಾಗಿರುತ್ತಿತ್ತು' ಎಂದ.

'ಆ ರಹಸ್ಯವನ್ನು ಬಯಲು ಮಾಡಲು ಮನಸ್ಸಿದ್ದರೂ, ಅವನಿಗೆ ಸಾಧ್ಯವಿಲ್ಲದಿದ್ದ ಪಕ್ಷಕ್ಕೆ....' ಎಂದ ಡಿಮ್ಸ್‌ಡೇಲ್.

'ಯಾಕೆ ಸಾಧ್ಯವಿಲ್ಲ ? ಪ್ರಕೃತಿಯೇ ಪಾಪಗಳನ್ನೊಪ್ಪಿಕೊಳ್ಳುವಂತೆ, ಕೂಗಿ ಕರೆಯುತ್ತಿರುವಾಗ ಸುಮ್ಮನಿರುವ ಅವಶ್ಯಕತೆಯೆಲ್ಲಿಯದು ? ಹೂಳಲ್ಪಟ್ಟ ಅವನ ಅಪರಾಧದ ರಹಸ್ಯವನ್ನು ಬಯಲು ಮಾಡುವುದಕ್ಕೇ ಅಲ್ಲವೇ ಈ ಕಪ್ಪುಗಿಡಗಳು ಬೆಳೆದುಕೊಂಡಿರುವುದು' ಎಂದ ವೈದ್ಯ.

'ಸ್ವಾಮಿ, ಅದೆಲ್ಲ ತಮ್ಮ ಕಲ್ಪನೆ. ನನ್ನ ಊಹೆ ಸರಿಯಾಗಿರುವ ಪಕ್ಷಕ್ಕೆ, ರಹಸ್ಯ ಹೃದಯದಲ್ಲಿ ಹುದುಗಿಟ್ಟುಕೊಂಡೇ ಹೂಳಲ್ಪಟ್ಟವನ ಅಪರಾಧವನ್ನು, ಮಾತಿನಿಂದಾಗಲೀ, ಚಿನ್ಹೆಯಿಂದಾಗಲೀ ಬಯಲು ಮಾಡುವುದಕ್ಕೆ ಕರುಣಾಮಯನಾದ ಭಗವಂತನೊಬ್ಬನನ್ನು ಬಿಟ್ಟು ಮತ್ತಾರಿಂದಲೂ ಸಾಧ್ಯವಿಲ್ಲ. ಅಪರಾಧವನ್ನು ಹುದುಗಿಟ್ಟುಕೊಂಡಿರುವ ಹೃದಯ, ಪ್ರಪಂಚದಲ್ಲಿ ಹುದುಗಿರುವ ರಹಸ್ಯಗಳೆಲ್ಲಾ ಬಯಲಾಗುವವರೆಗೂ, ತನ್ನ ರಹಸ್ಯವನ್ನು ಕಾಪಾಡಿಕೊಂಡಿರಬೇಕು.'

'ಹಾಗಿದ್ದಲ್ಲಿ ಅವನ್ನೇಕೆ ಇಲ್ಲೇ ಬಹಿರಂಗಪಡಿಸಬಾರದು? ಅಪರಾಧಿ

ಗಳು ಅದರಿಂದ ಒದಗುವ ಅಸದಳವಾದ ಶಾಂತಿಯನ್ನೇಕೆ ದೊರಕಿಸಿಕೊಳ್ಳ ಬಾರದು ?' ಓರೆನೋಟದಿಂದ ಪಾದ್ರಿಯನ್ನೇ ನೋಡುತ್ತಾ ರೋಜರ್ ಚಿಲಿಂಗ್‌ವರ್ತ್ ಕೇಳಿದ.

ಆ ಮಾತಿನಿಂದ ಎದೆ ಮಿಡಿದು ನೋವಾದವನಂತೆ ತನ್ನ ಎದೆಯ ಮೇಲೆ ಕೈಯಿಟ್ಟುಕೊಂಡು ಪಾದ್ರಿ, 'ಸಾಧಾರಣವಾಗಿ ಅವರು ಹಾಗೆಯೇ ಮಾಡುತ್ತಾರೆ. ಅನೇಕ ಮಂದಿ ತಮ್ಮ ಮೃತ್ಯು ಶಯ್ಯೆಯಲ್ಲಿ ರುವಾಗಲೇ ಅಲ್ಲದೆ, ದೇಹ ದೃಢವಾಗಿರುವಾಗಲೇ ಅವರ ರಹಸ್ಯಗಳನ್ನು ನನ್ನೊಂದಿಗೆ ಹೇಳಿಕೊಂಡಿದ್ದಾರೆ. ಅದನ್ನು ತೋಡಿಕೊಂಡನಂತರ, ಓಹ್, ಆ ನನ್ನ ಪಾಪಪೂರಿತ ಸೋದರರಿಗೆ ಅದೆಷ್ಟು ಮನಶ್ಶಾಂತಿ ದೊರೆ ತಿರುವುದನ್ನು ಕಂಡಿದ್ದೇನೆ ! ತನ್ನ ಕಲುಷಿತವಾದ ಉಸಿರಿನ ಬೇಗೆಯಲ್ಲಿ ಉಸಿರು ಸಿಕ್ಕಿಕೊಂಡು ನರಳಿ ನಿರ್ಮಲವಾದ ಗಾಳಿ ಬೀಸುತ್ತಿರುವ ಆವರಣಕ್ಕೆ ಹೊಕ್ಕಂತಾಗುತ್ತದೆ ಅವರ ಮನಸ್ಸು. ಹಾಗಿಲ್ಲದೆ ಒಬ್ಬ ಪಾಪಿ—ಉದಾಹರಣೆಗೆ ಒಬ್ಬ ಕೊಲೆಗಡುಕ—ತಾನು ಕೊಂದವನ ಹೆಣ ವನ್ನು ತಕ್ಷಣವೇ ಜಗತ್ತಿಗೆಲ್ಲಾ ಗೊತ್ತಾಗುವಂತೆ ಬಿಸಾಡದೆ ತನ್ನ ಹೃದಯ ದಲ್ಲೇ ಏಕೆ ಬಚ್ಚಿಟ್ಟುಕೊಳ್ಳಲು ಇಚ್ಛಿಸುತ್ತಾನೆ ! ' ಎಂದ.

'ಆದರೂ ಕೆಲವರು ತಮ್ಮ ರಹಸ್ಯಗಳನ್ನು ಹೂತಿಟ್ಟಿರುತ್ತಾರೆ.'

'ನಿಜ ಅಂಥವರೂ ಇದ್ದಾರೆ. ಅದಕ್ಕೆ ಕೆಲವು ಕಾರಣಗಳೂ ಇವೆ. ಕೆಲವರು ಸ್ವಭಾವತಃ ಗೋಪ್ಯವಾಗಿರುತ್ತಾರೆಂದು ನಾವು ಭಾವಿಸಬಹು ದಷ್ಟೆ. ತಾವು ಪಾಪಿಗಳಾಗಿದ್ದರೂ, ದೇವರ ಸೇವೆಗಾಗಿ, ಮಾನವನ ಶ್ರೇಯಸ್ಸಿಗಾಗಿ ದುಡಿಯುತ್ತಿರುವವರು ಮಾನವನ ದೃಷ್ಟಿಯಲ್ಲಿ ಕೀಳಾಗಲು ಬೆದರಿ ಆ ರೀತಿ ಇರಬಹುದಲ್ಲ! ಆದರೂ ತಮ್ಮ ಸಹ ಮಾನವರ ದೃಷ್ಟಿ ಯಲ್ಲಿ ಹೊಸ ಮಂಜಿನಂತೆ ಪರಿಶುದ್ಧವಾಗಿ ಕಂಡರೂ, ಪಾಪದ ಕಲೆಗಳಿಂದ ಕೂಡಿರುವ ಹೃದಯವನ್ನು ಹೊತ್ತು ಹೇಳಲಾರದಂಥ ಯಾತನೆಯನ್ನು ಅನುಭವಿಸುತ್ತಿರಬಹುದಲ್ಲವೆ.'

'ಅಂಥವರು ಆತ್ಮವಂಚಕರು. ನ್ಯಾಯವಾಗಿ ತಮಗೆ ಸಲ್ಲಬೇಕಾದ ಅಪಮಾನವನ್ನು ಸಹಿಸಲು ಅಂಜುತ್ತಾರೆ. ಮಾನವ ಕೋಟಿಯಲ್ಲಿ ಪ್ರೀತಿ, ದೇವರ ಸೇವೆಯಲ್ಲಿ ಶ್ರದ್ಧೆ—ಈ ಉದಾತ್ತ ಭಾವನೆಗಳೊಂದಿಗೆ ಅವರ ಅಪರಾಧದ ಪಾಪ ಅವರ ಹೃದಯದಲ್ಲಿದ್ದರೂ ಇರಬಹುದು. ಆದರೆ ಆ ಪಾಪವೇ ಉಗ್ರರೂಪ ತಾಳಿ, ಅವರಲ್ಲೇ ನರಕ ಕೂಪವನ್ನು ಹರಡು ತ್ತದೆ. ಅವರು ದೇವರಲ್ಲಿ ಭಕ್ತಿ ತೋರಬೇಕೆಂಬ ಆಸೆಯಿದ್ದ ಪಕ್ಷದಲ್ಲಿ,

ತಮ್ಮ ಕಲುಷಿತವಾದ ಕೈಗಳಿಂದ ಭಗವಂತನಿಗೆ ನಮಸ್ಕರಿಸದಿರಲಿ. ಮಾನವ ಸೇವೆ ಮಾಡಬೇಕೆಂದಿದ್ದ ಪಕ್ಷಕ್ಕೆ, ಮನಃಪೂರ್ವಕವಾಗಿ ದೇಹ ದಂಡನೆಯಿಂದ ಆತ್ಮ ಪ್ರಾಯಶ್ಚಿತ್ತ ಮಾಡಿಕೊಳ್ಳಲಿ! ಸತ್ಯವನ್ನು ಬಿಟ್ಟು ಕಪಟ ನಾಟಕ ಹೂಡುವುದು ಒಳ್ಳೆಯದೆಂದರೆ ನಾನು ಸಮ್ಮತಿಸ ಲಾರೆ. ನಾನು ಹೇಳುವುದನ್ನು ಕೇಳಿ—ಅಂಥವರು ಖಂಡಿತವಾಗಿಯೂ ಆತ್ಮವಂಚಕರು!' ಎಂದು ಒತ್ತಿ ಒತ್ತಿ ನುಡಿದ ರೋಜರ್ ಚಿಲಿಂಗ್ ವರ್ತ್.

'ಇರಬಹುದು' ಎಂದು ಪಾದ್ರಿ ಉದಾಸೀನನಾಗಿ ಹೇಳಿದ. ತನ್ನ ಸೂಕ್ಷ್ಮವಾದ ಮನಸ್ಸನ್ನು ಕಲಕುವ ಯಾವುದೇ ಮಾತಿನಿಂದಾದರೂ ನುಣಿಚಿಕೊಳ್ಳುವ ಚಾತುರ್ಯ ಅವನಿಗಿದ್ದುದರಿಂದ ಮಾತನ್ನು ಬೇರೆ ಕಡೆಗೆ ತಿರುಗಿಸುವ ನೆವದಿಂದ 'ಈಗ ನಿಜವಾಗಿಯೂ, ನಿರ್ಬಲವಾದ ನನ್ನ ಈ ದೇಹ ಪಂಜರಕ್ಕೆ ನಮ್ಮ ವೈದ್ಯಭಾನುಗಳಿಂದ ಲಾಭವಾಗುತ್ತದೆಯೇ ಎಂದು ಕೇಳಬಯಸುತ್ತೇನೆ ಎಂದನು.

ರೋಜರ್ ಚಿಲಿಂಗ್‌ವರ್ತ್ ಅದಕ್ಕೆ ಉತ್ತರಿಸುವ ಮೊದಲೇ, ಪಕ್ಕದ ಸುಡುಗಾಡಿನಲ್ಲಿ ಒಂದು ಚಿಕ್ಕ ಮಗು ಗಟ್ಟಿಯಾಗಿ ನಗುತ್ತಿರುವುದು ಕೇಳಿ ಸಿತು. ಪಾದ್ರಿ ಕಿಟಕಿಯಿಂದ ಹೊರಗೆ ನೋಡಿದ. ಹೆಸ್ಟರ್ ಪ್ರೈನ್ ತನ್ನ ಪುಟ್ಟ ಮಗಳೊಂದಿಗೆ ಕಾಲುದಾರಿಯಲ್ಲಿ ನಡೆದು ಹೋಗುತ್ತಿದ್ದಳು. ಪರ್ಲ್ ತುಂಬ ಮುದ್ದಾಗಿ ಕಾಣುತ್ತಿದ್ದಳಲ್ಲದೆ, ಸಂತೋಷಭರಿತಳಾಗಿದ್ದಳು. ಅಲ್ಲಿದ್ದ ಸಮಾಧಿಗಳ ಮೇಲೆಲ್ಲ ಭಯಭಕ್ತಿಗಳಿಲ್ಲದೆ ಕುಣಿದು ಕುಪ್ಪಳಿಸಿ ಕೊಂಡು ಬರುತ್ತಿದ್ದಳವಳು. ಅಲ್ಲಿದ್ದ ಒಬ್ಬ ದೊಡ್ಡ ಮನುಷ್ಯನ ಸಮಾಧಿಯ ಮೇಲೆ—ಐಸಾಕ್ ಜಾನ್‌ಸನ್‌ನ ಸಮಾಧಿಯೋ ಏನೋ—ಕುಣಿಯ ಲಾರಂಭಿಸಿದಳು. ಸ್ವಲ್ಪ ಗಂಭೀರವಾಗಿ ವರ್ತಿಸೆಂದು ತನ್ನ ತಾಯಿ ಕೂಗಿ ಹೇಳುತ್ತಿದ್ದರೂ ಕೇಳದೆ, ಆ ಸಮಾಧಿಯ ಪಕ್ಕದಲ್ಲಿದ್ದ ಗಿಡದಿಂದ ಮುಳ್ಳು ಕಾಯಿಗಳನ್ನು ಪರ್ಲ್ ಕೀಳತೊಡಗಿದಳು. ಹಿಡಿ ತುಂಬಾ ಆ ಕಾಯಿ ಗಳನ್ನು ಕಿತ್ತುಕೊಂಡು ತನ್ನ ತಾಯಿಯ ಎದೆಯ ಮೇಲಿದ್ದ ಕೆಂಪು ಅಕ್ಷರದ ಸುತ್ತ ಅವೆಲ್ಲ ಕಚ್ಚಿಕೊಳ್ಳುವಂತೆ ಅಲಂಕರಿಸಿದಳು. ಹೆಸ್ಟರ್ ಅವನ್ನು ಕಿತ್ತುಹಾಕಲಿಲ್ಲ.

'ಈ ವೇಳೆಗೆ ಕಿಟಕಿಯನ್ನು ಸಮೀಪಿಸಿದ್ದ ರೋಜರ್ ಚಿಲಿಂಗ್‌ವರ್ತ್ ಗಂಭೀರವಾಗಿ ನಸುನಗುತ್ತಾನೋಡುತ್ತಿದ್ದ.

'ಆ ಮಗುವಿನ ಸ್ವಭಾವದಲ್ಲಿ, ಅಧಿಕಾರಕ್ಕೆ ಗೌರವ ಕೊಡುವುದಾ

ಗಲೀ, ನಿಯಮ ಬದ್ಧತೆಯಾಗಲೀ ಮೂಡಿಬಂದಿಲ್ಲ. ಆ ದಿನ ದನದ ನೀರಿನ ತೊಟ್ಟಿಯ ಬಳಿ ನೋಡಿದೆನಲ್ಲ. ಗೌರ್ನರರ ಮೇಲೆಯೇ ನೀರೆರಚು ತ್ತಿದ್ದಳು. ಅವಳು ಏನು ಅನ್ನುವುದು ದೇವರಿಗೆ ಗೊತ್ತು. ಅವಳೇನು ಕೇಡನ್ನುಂಟುಮಾಡುವ ಕುನ್ನಿ ಪಿಶಾಚಿಯೆ? ಅವಳಿಗೆ ವ್ಯಾಮೋಹ ಗಳಿವೆಯೆ? ಅವಳನ್ನು ಮಾನವ ಜಾತಿಗೆ ಸೇರಿದವಳೆಂದು ಗುರುತಿಸುವ ಬಗೆಯಾದರೂ ಯಾವುದು?' ಎಂದ ರೋಜರ್ ಚಿಲಿಂಗ್‌ವರ್ತ್.

'ಕಾನೂನಿಗೆ ವಿರುದ್ಧವಾದ ಸ್ವಾತಂತ್ರ್ಯವನ್ನು ಬಿಟ್ಟರೆ ಬೇರೆಯಾ ವುದೂ ಇಲ್ಲ. ಅವಳಲ್ಲಿ ಒಳ್ಳೆಯತನವಿದೆಯೇ ಎನ್ನುವುದೂ ನನಗೆ ತಿಳಿಯದು' ಎಂದ ಡಿಮ್ಸ್‌ಡೇಲ್, ತನ್ನಲ್ಲಿಯೇ ತರ್ಕಮಾಡುತ್ತಿರುವವ ನಂತೆ.

ಆ ಮಗುವಿಗೆ ಇವರಿಬ್ಬರ ದನಿ ಕೇಳಿಸಿರಬೇಕು. ಕಿಟಕಿಯ ಕಡೆ ತಲೆಯೆತ್ತಿ ನೋಡಿ, ಬುದ್ಧಿವಂತಿಕೆಯಿಂದ ಕೂಡಿದ ತುಂಟನಗು ನಗುತ್ತಾ, ಒಂದು ಮುಳ್ಳುಕಾಯನ್ನು ಡಿಮ್ಸ್‌ಡೇಲನ ಕಡೆಗೆ ಎಸೆದಳು. ಅದರ ಏಟಿ ನಿಂದ ಗಾಬರಿಗೊಂಡು ಪೆಚ್ಚಾಗಿ ಹೋದ ಆ ಪಾದ್ರಿ. ಇದನ್ನು ಕಂಡು ಕೊಂಡ ಮಗು ಅತಿಯಾದ ಸಂತೋಷದಿಂದ ಚಪ್ಪಾಳೆ ತಟ್ಟಿ ಕುಣಿಯ ತೊಡಗಿದಳು. ತನಗೆ ಅರಿವಿಲ್ಲದೆಯೇ ಹೆಸ್ಟರ್ ಪ್ರೈನ್ ಸಹ ತಲೆಯೆತ್ತಿ ನೋಡುತ್ತಿದ್ದಳು. ಆ ನಾಲ್ವರೂ ಒಬ್ಬರನ್ನೊಬ್ಬರು ಮೂಕರಾಗಿ ದಿಟ್ಟಿಸು ತ್ತಿದ್ದರು. ಪರ್ಲ್ ಜೋರಾಗಿ ನಗುತ್ತಾ ಮತ್ತೆ ಕೂಗಲಾರಂಭಿಸಿದಳು: 'ಬಾಮ್ಮಾ, ಅಮ್ಮಾ ಹೋಗೋಣ ಬಾ. ಇಲ್ಲದಿದ್ದರೆ ಆ ಕರಿಯ ಮುದುಕ ನಿನ್ನನ್ನು ಹಿಡಿದುಕೊಂಡು ಬಿಡುತ್ತಾನೆ. ಈಗಾಗಲೇ ಆ ಪಾದ್ರಿ ಗಳನ್ನು ಹಿಡಿದುಕೊಂಡು ಬಿಟ್ಟಿದ್ದಾನೆ! ಬೇಗ ಬಾ, ಆ ಮೇಲೆ ನಿನ್ನನ್ನೂ ಹಿಡಿದುಕೊಂಡು ಬಿಟ್ಟಾನು! ಆದರೆ ಪುಟ್ಟ ಪರ್ಲನ್ನು ಹಿಡಿಯುವುದಕ್ಕೆ ಅವನಿಂದಾಗುವುದಿಲ್ಲ!'

ಹೀಗೆಂದು ಕೂಗುತ್ತಾ, ತನ್ನ ತಾಯನ್ನು ಎಳೆದುಕೊಂಡು ಚಿಕ್ಕ ಚಿಕ್ಕ ಗುಪ್ಪೆಗಳಂತಿದ್ದ ಆ ಸಮಾಧಿಗಳ ಮೇಲೆ ವಿಚಿತ್ರವಾಗಿ, ಕುಣಿ ಯುತ್ತಾ, ನೆಗೆಯುತ್ತಾ ಅಲ್ಲಿಂದ ಹೊರಟಳು. ಅವಳನ್ನು ನೋಡಿದರೆ ಈ ಲೋಕಕ್ಕೇ ಸೇರಿದವಳಲ್ಲವೆನ್ನುವಂತೆ ಕಾಣುತ್ತಿತ್ತು.

ಸ್ವಲ್ಪ ವೇಳೆಯಾದ ಮೇಲೆ ರೋಜರ್ ಚಿಲಿಂಗ್‌ವರ್ತ್ ಮತ್ತೆ ಮಾತಿಗಾರಂಭಿಸಿದ: 'ಅಲ್ಲಿ ಹೋಗುತ್ತಿರುವ ಆ ಹೆಂಗಸು, ಅವಳ ಅಪರಾಧ ಏನೇ ಇದ್ದರೂ, ತನ್ನ ಪಾಪವನ್ನು ಮುಚ್ಚಿಟ್ಟುಕೊಂಡು, ನೀವು

ಹೇಳುವಂತೆ ಸಂಕಟ ಪಡುತ್ತಿಲ್ಲ. ಆದರೂ ಆ ಕೆಂಪು ಅಕ್ಷರ ತನ್ನ ಎದೆಯ ಮೇಲಿರುವುದರಿಂದ ಅವಳ ಸಂಕಟವೇನು ಕಡಮೆಯೆನ್ನು ತ್ತೀರಾ ?'

'ನಾನೂ ಅದನ್ನು ಖಂಡಿತವಾಗಿ ನಂಬುತ್ತೇನೆ. ಆದರೂ ಅದಕ್ಕೆ ನಾನು ಉತ್ತರ ಹೇಳುವಂತಿಲ್ಲ. ಅವಳ ಮುಖದಲ್ಲಿ ತುಂಬಿದ್ದ ಯಾತನೆಯನ್ನು ನಾನು ನೋಡದಿದ್ದರೆ ಎಷ್ಟೋ ಚೆನ್ನಾಗಿತ್ತು. ಆದರೂ, ತನ್ನ ದುಃಖವನ್ನು ಒಳಗೇ ಹುದುಗಿಟ್ಟುಕೊಂಡು ಸಂಕಟ ಪಡುವುದಕ್ಕಿಂತ, ಅಭಾಗಿನಿಯಾದ ಈ ಹೆಸ್ಟರ್ ಪ್ರೈನ್‌ಳಂತೆ ತನ್ನ ದುಃಖವನ್ನೂ ಪ್ರದರ್ಶಿಸುವ ಅವಕಾಶವಿರುವುದು ಒಳ್ಳೆಯದೆನಿಸುತ್ತದೆ ನನಗೆ.'

ಮತ್ತೆ ಸ್ವಲ್ಪ ಕಾಲ ಇಬ್ಬರೂ ಮೌನವಾಗಿದ್ದರು. ವೈದ್ಯ ತಾನು ತಂದಿದ್ದ ಗಿಡಮೂಲಿಕೆಗಳನ್ನು ಪರೀಕ್ಷಿಸಿ ಜೋಡಿಸುತ್ತಾ, ಮತ್ತೆ ಮಾತಿಗೆ ತೊಡಗಿದ.

'ಈಗ ಸ್ವಲ್ಪ ಹೊತ್ತಿಗೆ ಮುಂಚೆ ನಿಮ್ಮ ಆರೋಗ್ಯ ಕುರಿತು ನನ್ನ ತೀರ್ಪೇನು ಎಂದು ಕೇಳಿದಿರಲ್ಲವೆ ?' ಎಂದ.

'ಹೌದು. ಅದನ್ನು ತಿಳಿದುಕೊಂಡರೆ ನನಗೆ ಬಹಳ ಸಮಾಧಾನ ವಾಗುತ್ತದೆ. ನಾನು ಸತ್ತರೂ ಚಿಂತೆಯಿಲ್ಲ. ದಯವಿಟ್ಟು ಏನಿದ್ದರೂ ಧೈರ್ಯವಾಗಿ ಹೇಳಿ' ಎಂದ ಪಾದ್ರಿ.

ಕೈಲಿದ್ದ ಆ ಗಿಡಮೂಲಿಕೆಗಳನ್ನು ನೋಡುತ್ತಿದ್ದಂತಿದ್ದರೂ, ಪಾದ್ರಿಯ ಮೇಲೆ ಒಂದು ಕಣ್ಣಿಟ್ಟು : 'ಮುಚ್ಚುಮರೆಯಿಲ್ಲದೆ ಹೇಳಬೇಕೆಂದರೆ ನಿಮ್ಮ ವ್ಯಾಧಿ ಬಹಳ ವಿಚಿತ್ರವಾದುದು. ನನ್ನ ಮಟ್ಟಿಗೆ ಈ ಚಿಹ್ನೆಗಳನ್ನೆಲ್ಲಾ ನೋಡಿದರೆ ಹಾಗೆಯೇ ಅನ್ನಿಸುತ್ತದೆ. ನೋಡಿ ಸ್ವಾಮಿ, ನಿಮ್ಮನ್ನು ಈಗ ಅನೇಕ ತಿಂಗಳಿಂದ ಪ್ರತಿದಿನವೂ ತಪ್ಪದೆ ನೋಡುತ್ತಾ ನಿಮ್ಮನ್ನೇ ಗಮನಿಸು ತ್ತಿರುವ ನನಗೇನೋ ತೀವ್ರ ವ್ಯಾಧಿಗ್ರಸ್ತರಾಗಿದ್ದೀರೆಂದೆನಿಸಿದರೂ, ಪಾಂಡಿತ್ಯವಿರುವ ಮತ್ತು ಜಾಗರೂಕನಾಗಿರುವ ವೈದ್ಯ ಅದನ್ನು ವಾಸಿ ಮಾಡಬಹುದೆಂದೆನಿಸುತ್ತದೆ. ಆದರೂ—ನನಗೆ ಏನು ಹೇಳಬೇಕೆಂದೇ ತೋಚುವುದಿಲ್ಲ. ಈ ವ್ಯಾಧಿ ನನಗೆ ಗೊತ್ತಿದ್ದೂ ಗೊತ್ತಿಲ್ಲದ ಹಾಗಾಗಿದೆ' ಎಂದ ವೈದ್ಯ.

'ಏನೋ ನೀವು ಬರಿ ಒಗಟುಗಳನ್ನೇ ನುಡಿಯುತ್ತಿದ್ದೀರಿ,' ವಿವರ್ಣನಾಗಿ ಕಿಟಕಿಯಿಂದ ಹೊರಗೆ ನೋಡುತ್ತಾ ಹೇಳಿದ ಡಿಮ್ಸ್‌ಡೇಲ್.

'ಇನ್ನೂ ಮುಚ್ಚುಮರೆಯಿಲ್ಲದೆ ಮಾತನಾಡಬೇಕೆಂದರೆ ಹೇಳು

ತ್ತೀನೆ ಕೇಳಿ. ಅದರಲ್ಲಿ ನನ್ನದೇನಾದರೂ ತಪ್ಪಿದ್ದಲ್ಲಿ ಕ್ಷಮಿಸುವಿರಂತೆ. ನಾನು ನಿಮ್ಮ ಸ್ನೇಹಿತನಷ್ಟೆ. ಜೊತೆಗೆ ದೇವರ ಇಚ್ಛೆಯಂತೆ, ನಿಮ್ಮ ಜೀವದ ಮತ್ತು ಆರೋಗ್ಯದ ಹೊಣೆಹೊತ್ತಿರುವ ನನ್ನೊಡನೆ, ನಿಮ್ಮ ವ್ಯಾಧಿಯ ವಿಚಾರವಾಗಿ ಯಾವುದನ್ನೂ ಮುಚ್ಚುಮರೆಯಿಲ್ಲದೆ ಹೇಳಿದ್ದೀರಾ?'

'ಚೆನ್ನಾಗಿ ಹೇಳಿದಿರಿ. ವೈದ್ಯನನ್ನು ಕರೆದು ವ್ಯಾಧಿಯನ್ನು ಮುಚ್ಚಿಟ್ಟುಕೊಳ್ಳುವುದಕ್ಕೆ ಇದೇನು ಮಕ್ಕಳಾಟವೆಂದುಕೊಂಡಿರಾ?'

ಈ ಮಾತನ್ನು ಕೇಳಿದ, ರೋಜರ್ ಚಿಲಿಂಗ್‌ವರ್ತ್, ಪಾದ್ರಿಯ ಮುಖವನ್ನೇ ತೀವ್ರವಾಗಿ ದಿಟ್ಟಿಸುತ್ತಾ: 'ನನಗೆ ಎಲ್ಲಾ ತಿಳಿದಿದೆಯೆಂದಲ್ಲವೇ ನೀವು ಹೇಳುವುದು? ಹಾಗೆಯೇ ಆಗಲಿ! ಬಾಹ್ಯವಾಗಿರುವ ಖಾಯಿಲೆಯನ್ನು ನೋಡಿದರೆ ತಿಳಿಯುವುದು ವಾಸಿ ಮಾಡಬೇಕಾದ ವ್ಯಾದಿಯ ಅರ್ಧ ಮಾತ್ರ. ನಾವು ದೇಹಕ್ಕೆ ಸಂಬಂಧಪಟ್ಟ ವ್ಯಾಧಿಯೆಂದು ತಿಳಿದಿರುವುದು, ಹಾಗಿಲ್ಲದೆ ಆತ್ಮಕ್ಕೆ ಸಂಬಂಧಪಟ್ಟದ್ದಾಗಿರಬಹುದಲ್ಲ! ನಾನಾಡುತ್ತಿರುವುದರಲ್ಲಿ ಏನಾದರೂ ತಪ್ಪಿದ್ದರೆ ದಯವಿಟ್ಟು ಕ್ಷಮಿಸಿ. ನಿಮ್ಮ ದೇಹ, ಆತ್ಮಗಳೆರಡೂ ಒಂದಾಗಿಬಿಟ್ಟಿವೆ, ಅದರ ಪರಿಣಾಮವೇ ಇದು.'

'ಹಾಗಿದ್ದ ಮೇಲೆ ನಾನು ಇನ್ನೇನೂ ಕೇಳಬೇಕಾದ ಅವಶ್ಯಕತೆಯಿಲ್ಲ. ನೀವು ಆತ್ಮಕ್ಕೆ ಔಷಧಿ ಕೊಡುವವರಲ್ಲವೆಂದು ತಿಳಿದಿದ್ದೇನೆ ನಾನು' ಎಂದು ಪಾದ್ರಿ ಸರ್ರನೆ ಕುರ್ಚಿಯಿಂದ ಎದ್ದ.

ಈ ಅಡಚಣೆಯನ್ನು ಗಮನಿಸದೆ, ತಾನೂ ಎದ್ದು ನಿಂತು, ಪಾದ್ರಿಯ ವಿವರ್ಣವಾದ ಮುಖವನ್ನೇ ದಿಟ್ಟಿಸುತ್ತಾ, ವೈದ್ಯ ಅದೇ ದನಿಯಲ್ಲೇ ಮಾತನ್ನು ಮುಂದುವರಿಸಿದ, — 'ಆದ್ದರಿಂದ ನಿಮ್ಮ ಆತ್ಮವೇ ವ್ಯಾಧಿಗ್ರಸ್ತವಾಗಿದೆಯೆಂದು ಹೇಳಬೇಕು. ಅದರ ಪರಿಣಾಮ ದೇಹದ ಮೇಲೆ ಉಂಟಾಗಿದೆ. ನಿಮ್ಮ ದೇಹದ ಖಾಯಿಲೆಯನ್ನು ವೈದ್ಯ ಗುಣಮಾಡಬೇಕಾದರೆ, ನಿಮ್ಮ ಆತ್ಮದಲ್ಲಿರುವ ವ್ಯಾಧಿಯನ್ನು ನೀವು ತೋರಿಸದಿದ್ದಲ್ಲಿ ಅದು ಹೇಗೆ ಸಾಧ್ಯ?'

'ಇಲ್ಲ!—ನಿಮಗಲ್ಲ!—ಈ ಪ್ರಪಂಚಕ್ಕೆ ಸೇರಿದ ವೈದ್ಯನಿಗಲ್ಲ! ಅದು ಆತ್ಮದ ವ್ಯಾಧಿಯೇ ಆಗಿದ್ದ ಪಕ್ಷದಲ್ಲಿ, ಆತ್ಮದ ವೈದ್ಯನಿಗೇ ಅದನ್ನು ತೋರಿಸುತ್ತೇನೆ! ಅವನ ಇಚ್ಛೆಯಿದ್ದಲ್ಲಿ ಗುಣ ಮಾಡಲಿ, ಇಲ್ಲದಿದ್ದರೆ ಕೊಂದು ಬಿಡಲಿ! ಆತನ ಬುದ್ಧಿಗೆ, ನ್ಯಾಯಕ್ಕೆ ತೋಚಿದಂತೆ ಮಾಡಲಿ! ಈ ವಿಚಾರದಲ್ಲಿ ಕೈಹಾಕುವುದಕ್ಕೆ ನೀವು ಯಾರು? ದುಃಖಿಗೂ ಅವನ

ದೇವರಿಗೂ ಮಧ್ಯೆ ನುಗ್ಗಲು ನಿಮಗೆಷ್ಟು ಧೈರ್ಯ?' ಎಂದು ಹೇಳುತ್ತಾ ಹೇಳುತ್ತಾ ಡಿಮ್ಸ್‌ಡೇಲನ ಕಣ್ಣುಗಳು ಪ್ರಕಾಶಮಾನವಾದವು. ಅದರಲ್ಲಿ ಒಂದು ವಿಧವಾದ ಭೀಕರತೆ ಇತ್ತು. ಸರ್‍ರನೆ ಕೋಣೆಯಿಂದ ಹೊರಕ್ಕೆ ಹೊರಟು ಹೋದ.

ಅವನು ಹೋದ ಕಡೆಯೇ ನೋಡುತ್ತಾ ನಸುನಕ್ಕು ತನ್ನಲ್ಲಿಯೇ ಹೇಳಿಕೊಂಡ ರೋಜರ್ ಚಿಲಿಂಗ್‌ವರ್ತ್,—'ಈ ಮಾತೆತ್ತಿದ್ದು ಒಳ್ಳೆಯದೇ ಆಯಿತು. ಆದರಿಂದ ನಷ್ಟವೇನೂ ಇಲ್ಲ, ಇನ್ನು ಸ್ವಲ್ಪ ಕಾಲದಲ್ಲಿಯೇ ನಾವಿಬ್ಬರೂ ಮತ್ತೆ ಗೆಳೆಯರಾಗಿಬಿಡುತ್ತೇವೆ. ತನ್ನ ಮೇಲೆಯೇ ಅವನಿಗೆ ಅರಿವಿಲ್ಲದಂತೆ ಅವನ ಮನಸ್ಸು ಹೇಗೆ ಕೆರಳಿ ಬಿಡುತ್ತದೆ! ಮಿಕ್ಕ ವಿಷಯಗಳಲ್ಲಿಯೂ ಅವನು ಹೀಗೆಯೇ ಇರಬೇಕು! ನಮ್ಮ ಪೂಜ್ಯನಾದ ಪಾದ್ರಿ, ಮನಸ್ಸು ಕೆರಳಿದ ವೇಳೆಯಲ್ಲಿ ಏನೋ ಕೆಟ್ಟ ಕೆಲಸ ಮಾಡಿದ್ದಾನೆ!'

ಅವರಿಬ್ಬರ ಸ್ನೇಹ ಮತ್ತೆ ಉಂಟಾಗಿ ಮೊದಲಿನ ರೂಪ ತಾಳುವುದು ಕಷ್ಟವೇನೂ ಆಗಲಿಲ್ಲ. ಒಂಟಿಯಾಗಿ ತನ್ನ ಕೋಣೆಯಲ್ಲಿ ಕೆಲವು ಗಂಟೆಗಳ ಕಾಲ ಕಳೆದ ಮೇಲೆ, ಪಾದ್ರಿಗೆ, ವೈದ್ಯ ಹೇಳಿದುದರಲ್ಲಿ ತನಗೆ ಕೋಪ ಬರುವಂತಹುದೇನೂ ಇರಲಿಲ್ಲ ಎನ್ನಿಸಿತು. ಅದೆಲ್ಲಾ ತನ್ನ ನರಗಳ ದೌರ್ಬಲ್ಯ ಎಂದುಕೊಂಡ. ವೈದ್ಯನನ್ನು ತಾನಾಗಿಯೇ ಕೇಳಿದ್ದ. ಆ ದಯಾಪರನಾದ ವೈದ್ಯ ಕರ್ತವ್ಯೋನ್ಮುಖನಾಗಿ ಹೇಳಿದ ಮಾತಿಗೆ ತನಗೆಷ್ಟು ಕೋಪ ಬಂದಿತ್ತು? ಅವನಿಗೇ ಆಶ್ಚರ್ಯವಾಯಿತು. ಈ ಎಲ್ಲ ಯೋಚನೆಗಳು ಬಂದ ತಕ್ಷಣ, ವಿಳಂಬ ಮಾಡದೆ, ವೈದ್ಯನ ಬಳಿಗೆ ಹೋಗಿ ಕ್ಷಮಾಪಣೆ ಕೇಳಿಕೊಂಡ. ತಾನು ಪುನಃ ಆರೋಗ್ಯ ಪಡೆಯಲಾಗದಿದ್ದರೂ, ಇನ್ನು ಸ್ವಲ್ಪ ಹೆಚ್ಚು ದಿನವಾದರೂ ತಾನು ಬದುಕಿರಬಹುದೆಂದೆನಿಸಿತು. ರೋಜರ್ ಚಿಲಿಂಗ್‌ವರ್ತ್ ತಕ್ಷಣ ಒಪ್ಪಿಕೊಂಡ. ತನ್ನ ಕೈಲಾದ ಮಟ್ಟಿಗೆ ಅವನ ಆರೋಗ್ಯವನ್ನು ಕಾಪಾಡಲು ಹೆಣಗಾಡತೊಡಗಿದ. ಪ್ರತಿಯೊಂದು ಬಾರಿ, ಅವನನ್ನು ಪರೀಕ್ಷಿಸಿ ಕೋಣೆಯಿಂದ ಹೊರಗೆ ಹೊರಡುವಾಗಲೂ ಅವನ ತುಟಿಯ ಮೇಲೆ ವಿಚಿತ್ರವಾದೊಂದು ನಗೆ ಮೂಡುತ್ತಿತ್ತು. ಈ ನಗೆ ಡಿಮ್ಸ್ ಡೇಲನ ಎದುರಿಗೆ ಪ್ರಕಟವಾಗದಿದ್ದರೂ, ಹೊಸಿಲು ದಾಟಿದ ತಕ್ಷಣ ಬಲವಾಗುತ್ತಿತ್ತು.

'ಬಹಳ ವಿಚಿತ್ರವಾದ ಖಾಯಿಲೆ. ಇದನ್ನಿನ್ನೂ ಒಳಹೊಕ್ಕು ನೋಡಬೇಕು. ದೇಹಕ್ಕೂ ಆತ್ಮಕ್ಕೂ ಇರುವ ಪರಸ್ಪರ ಅನುಕಂಪ ಬಹಳ ವಿಚಿತ್ರವಾಗಿದೆ! ಏನಾದರೂ ಆಗಲಿ ಈ ರಹಸ್ಯದ ತಳ ಮುಟ್ಟಲೇ

ಬೇಕು' ಎಂದುಕೊಂಡ ರೋಜರ್ ಚಿಲಿಂಗ್‌ವರ್ತ್.

ಹೀಗೆಯೇ ಕೆಲವು ದಿನ ಕಳೆಯಿತು. ಒಂದು ದಿನ ಮಧ್ಯಾಹ್ನ ರೆವರೆಂಡ್ ಡಿಮ್ಸ್‌ಡೇಲ್, ತನಗೆ ಅರಿವಿಲ್ಲದೆಯೇ, ಕುರ್ಚಿಯ ಮೇಲೆ ಕೂತ ಹಾಗೇ ಗಾಢವಾಗಿ ನಿದ್ರೆ ಮಾಡುತ್ತಿದ್ದ. ಮೇಜಿನ ಮೇಲೆ ತೆರೆದಿದ್ದ ದಪ್ಪವಾದೊಂದು ಪುಸ್ತಕವಿತ್ತು. ಅದು ಬೇಸರದಿಂದ ನಿದ್ರೆಯನ್ನುಂಟುಮಾಡುವ ಸಾಹಿತ್ಯದ ಜಾತಿಗೆ ಸೇರಿದ ಪುಸ್ತಕವಿರಬೇಕು. ಇಲ್ಲದಿದ್ದಲ್ಲಿ ಸ್ವಲ್ಪ ಶಬ್ದವಾದರೂ ಗಾಬರಿಯಿಂದ ಎಚ್ಚರಗೊಳ್ಳುತ್ತಿದ್ದ ಪಾದ್ರಿ, ಹಾಗೆ ಗಾಢವಾಗಿ ನಿದ್ರೆ ಮಾಡಲು ಸಾಧ್ಯವಿರಲಿಲ್ಲ. ಆ ಸಮಯದಲ್ಲಿ ರೋಜರ್ ಚಿಲಿಂಗ್‌ವರ್ತ್ ಕೋಣೆಯನ್ನೂ ಪ್ರವೇಶಿಸಿದ. ರೋಗಿಯ ಎದುರಿಗೆ ನಿಂತು ಅವನ ಎದೆಯನ್ನು ಮುಚ್ಚಿದ್ದ ಬಟ್ಟೆಯನ್ನು ಸರಿಸಿ, ತನ್ನ ಕಣ್ಣಿಗೆ ಇಂದಿನವರೆಗೂ ಕಾಣದಿದ್ದ ಅವನ ಎದೆಯನ್ನು ನೋಡಿದ.

ಡಿಮ್ಸ್‌ಡೇಲ್ ಬೆಚ್ಚಿಬಿದ್ದು, ಕೊಂಚ ಹೊರಳಾಡಿದ.

ಒಂದು ಕ್ಷಣ ನೋಡಿದ ಮೇಲೆ ವೈದ್ಯ ಅಲ್ಲಿಂದ ಹೊರಟುಹೋದ.

ವೈದ್ಯನ ಮುಖದಲ್ಲಿ ಸಂತೋಷ, ಭಯ, ಆಶ್ಚರ್ಯ ಎಲ್ಲ ಒಟ್ಟಿಗೇ ಕಾಣುತ್ತಿದ್ದವು. ಅವೆಲ್ಲಾ ಅವನ ಕುರೂಪವಾದ ಆಕಾರದಲ್ಲಷ್ಟೇ ಅಲ್ಲದೆ ಅವನ ಪ್ರತಿಯೊಂದು ನಡೆನುಡಿಯಲ್ಲೂ ಪ್ರಕಟವಾಗುತ್ತಿತ್ತು. ಅತಿ ಸಂತೋಷದಿಂದ ಕೈಯ್ಯನ್ನು ಮೇಲಕ್ಕೆ ಬೀಸಿ, ನೆಲದ ಮೇಲೆ ಕಾಲನ್ನು ಅಪ್ಪಳಿಸಿ ಕುಣಿಯುತ್ತಿದ್ದ! ಆಗ ಯಾರಾದರೂ ಅವನನ್ನು ನೋಡಿದ್ದರೆ, ಆತ್ಮವನ್ನು ಸ್ವರ್ಗಕ್ಕೆ ಹೋಗಲು ಬಿಡದೆ ತಾನೇ ಅದನ್ನು ಗೆದ್ದುಕೊಂಡ ಸೈತಾನನಿಗೂ, ಅವನಿಗೂ ಯಾವ ವ್ಯತ್ಯಾಸವೂ ಇಲ್ಲದಿರುವಂತೆ ಕಾಣುತ್ತಿತ್ತು.

ಆದರೆ ಸೈತಾನನ ಸಂತೋಷಕ್ಕೂ, ಈ ವೈದ್ಯನ ಉಲ್ಲಾಸಕ್ಕೂ ಏನು ವ್ಯತ್ಯಾಸವಿತ್ತೆಂಬುದೇ ಒಂದು ಆಶ್ಚರ್ಯಕರವಾದ ಸಂಗತಿ!

## ೧೧

ಈ ಘಟನೆಯ ನಂತರ ಪಾದ್ರಿ ಮತ್ತು ಅವನ ವೈದ್ಯನ ಸಂಬಂಧ ಬಾಹ್ಯವಾಗಿ ಮೊದಲಿನಂತೆ ಕಂಡರೂ ಆಂತರ್ಯದಲ್ಲಿ ಬೇರೆಯೇ ಒಂದು ರೂಪವನ್ನೇ ತಾಳಿತ್ತು. ರೋಜರ್ ಚಿಲಿಂಗ್‌ವರ್ತ್‌ನ ಮನಸ್ಸಿನಲ್ಲಿ ಒಂದು ದೃಢವಾದ ಮಾರ್ಗ ರೂಪಗೊಂಡಿತ್ತು. ಅದು ತಾನು ಇನ್ನು ಮುಂದೆ ನಡೆಯುವ ಮಾರ್ಗವಲ್ಲ. ನೋಡುವುದಕ್ಕೆ ಶಾಂತನಾಗಿ, ಮಂದ

ಸ್ಮಿತನಾಗಿ ಕಂಡರೂ, ಆತನ ದೃಷ್ಟಿ ಮುದುಕನಲ್ಲಡಗಿದ್ದ ದ್ವೇಷ ಇದುವರೆಗೂ ಕಾಣಿಸಿಕೊಳ್ಳದದ್ದರೂ, ಈಗ ಬಲಗೊಂಡಿದ್ದುದಲ್ಲದೆ, ಅವನು, ಇದುವರೆಗೂ ಯಾವ ಮನುಷ್ಯನೂ ತನ್ನ ಶತ್ರುವಿನ ಮೇಲೆ ತೀರಿಸಿಕೊಂಡಿರದಂಥ ಸೇಡನ್ನು ಹುಡುಕಲು ಮಾರ್ಗವಾಯಿತು.

ಪಾದ್ರಿ ನಾಚಿಕೆಯಿಂದ ಮನಬಿಚ್ಚದುದರಿಂದ ಅವನ ಬಲೆಯಿಂದ ನುಣುಚಿಕೊಂಡಿದ್ದ. ದೈವೇಚ್ಛೆಯಂತೆ ರೋಜರ್ ಚಿಲಿಂಗ್‌ವರ್ತ್‌ನಿಗೆ ತಿಳುವಳಿಕೆಯೂ ಉಂಟಾಗಿತ್ತು. ಅದು ಒಳ್ಳೆಯದೋ ಕೆಟ್ಟದ್ದೋ, ಅದು ಯೋಚಿಸುವ ವಿಷಯವಾಗಿರಲಿಲ್ಲ. ಅದರ ಸಹಾಯದಿಂದ, ಇನ್ನು ಮುಂದೆ ಅವರಿಬ್ಬರೂ ಒಟ್ಟು ಸೇರಿದಾಗಲೆಲ್ಲಾ, ರೋಜರ್ ಚಿಲಿಂಗ್‌ವರ್ತ್, ಡಿಮ್ಸ್‌ಡೇಲನ ಬಾಹ್ಯ ನಡವಳಿಕೆಯನ್ನೇ ಅಲ್ಲದೆ ಅವನ ಆತ್ಮದ ಪ್ರತಿಯೊಂದು ಚಲನವಲನವನ್ನು ಗಮನಿಸಿ ಅರ್ಥಮಾಡಿಕೊಳ್ಳತೊಡಗಿದ. ಆ ಬಡ ಪಾದ್ರಿಯ ಅಂತರಂಗದಲ್ಲಿ ಅವನು ಬರಿಯ ಪ್ರೇಕ್ಷಕನಾಗಿರದೆ, ಮುಖ್ಯ ಪಾತ್ರಧಾರಿಯಾದ. ತನಗೆ ಇಷ್ಟ ಬಂದಂತೆ ಅವನನ್ನು ನಡೆಸಿಕೊಳ್ಳಬಹುದಾಗಿತ್ತು. ಅವನಲ್ಲಡಗಿದ್ದ ನೋವನ್ನು ಮಿಡಿಸುವ ಶಕ್ತಿ ಅವನಿಗಿತ್ತು. ಡಿಮ್ಸ್‌ಡೇಲ್ ಸದಾ ಕಾಲವೂ ಹಿಂಸಾಯಂತ್ರದ ಮೇಲೆಯೇ ಮಲಗಿದ್ದ. ಆ ಯಂತ್ರವನ್ನು ತಿರುಗಿಸುವ ಕೀಲು ಯಾವುದೆಂದು ಗೊತ್ತಿದ್ದರೆ ಸಾಕು. ವೈದ್ಯನಿಗೆ ಅದು ಚೆನ್ನಾಗಿ ಗೊತ್ತಿತ್ತು. ಪಾದ್ರಿಯನ್ನೂ ಇದ್ದಕ್ಕಿದ್ದಂತೆ ಗಾಬರಿ ಪಡಿಸುವುದು ಹೇಗೆಂದೂ ಅವನಿಗೆ ತಿಳಿದಿತ್ತು. ಮಂತ್ರಗಾರನು ಮಾಯಾದಂಡವನ್ನು ಬೀಸಿದಂತೆ ಒಂದು ಭೂತ ಮೇಲೇಳುತ್ತದೆ-ಸಾವಿರ ಭೂತಗಳು—ಸಾವು, ಅಪಮಾನ—ಅನೇಕ ರೂಪಗಳನ್ನು ತಾಳಿ ಅವನ ಸುತ್ತಲೂ ಗುಂಪು ಕಟ್ಟಿ ಅವನ ಎದೆಯ ಕಡೆಗೇ ಬೆಟ್ಟು ಮಾಡಿ ತೋರಿಸುತ್ತವೆ !

ಪಾದ್ರಿಗೆ ತನ್ನ ಸುತ್ತಲೂ ಯಾವುದೋ ಕೆಟ್ಟ ವ್ಯಾಪ್ತಿ ಸುಳಿದಾಡುತ್ತಿದ್ದರೂ, ಇವೆಲ್ಲವೂ ಅವನಿಗೆ ಅರಿವಿಲ್ಲದಂತೆಯೇ ಸಾಗಿತ್ತು. ಅನುಮಾನದಿಂದ, ಗಾಬರಿಯಿಂದ—ಕೆಲವೊಮ್ಮೆ ಅತ್ಯಂತ ಭಯದಿಂದ, ದ್ವೇಷದ ಕಹಿ ನೋಟದಿಂದ—ತನ್ನೆದುರಿಗಿರುವ ಆ ವಿಕೃತರೂಪದ ವೈದ್ಯನನ್ನು ನೋಡುತ್ತಾನೆ ಡಿಮ್ಸ್‌ಡೇಲ್. ಅವನ ಹಾವಭಾವಗಳು ಅವನ ನಡೆ, ಅವನ ಹರಕಲು ಗಡ್ಡ, ಅವನು ಮಾಡುವ ಕೆಲಸಗಳು, ಕಡೆಗೆ ಅವನ ಬಟ್ಟೆಗಳು ಕೂಡ ಪಾದ್ರಿಯ ಕಣ್ಣಿಗೆ ಅಸಹನೀಯವಾಗಿತ್ತು. ಇದಕ್ಕೆ ಕಾರಣ ವೇನೋ ಡಿಮ್ಸ್‌ಡೇಲನಿಗೆ ಗೊತ್ತಾಗುತ್ತಿರಲಿಲ್ಲ. ರೋಜರ್ ಚಿಲಿಂಗ್

ವರ್ತನನ್ನು ಕುರಿತಾದ ಈ ದ್ವೇಷದಿಂದ ತಾನು ಕಲಿಯಬೇಕಾದ ಪಾಠವನ್ನು ಮರೆತು, ಅದನ್ನು ತನ್ನ ಮನಸ್ಸಿನಿಂದ ಕಿತ್ತೊಗೆಯಲು ಪ್ರಯತ್ನಿಸತೊಡಗಿದ. ಅದು ಸಾಧ್ಯವಾಗಲಿಲ್ಲ. ಆದರೂ ರೂಢಿಯಿಂದ ಮೊದಲಿನಂತೆಯೇ ಅವನೊಡನೆ ಸರಳವಾಗಿರುತ್ತಾನೆ. ಇದರಿಂದ ಅವನಿಗಿಂತ ಹೀನಸ್ಥಿತಿಯಲ್ಲಿದ್ದ ಅವನ ಶತ್ರುವಿಗೆ ಸೇಡನ್ನು ತೀರಿಸಿಕೊಳ್ಳುವ ವಿಧಾನವನ್ನು ಬಲಪಡಿಸಿಕೊಳ್ಳಲು ಅನೇಕ ಅವಕಾಶಗಳನ್ನು ಕಲ್ಪಿಸಿ ಕೊಟ್ಟಂತಾಯಿತು.

ದೇಹದ ಅನಾರೋಗ್ಯದಿಂದಲೂ, ತನ್ನ ಹೃದಯದಲ್ಲಡಗಿದ್ದ ಆತ್ಮದ ಕೊರತೆಯಿಂದಲೂ, ಇವೆಲ್ಲಕ್ಕಿಂತ ಹೆಚ್ಚಾಗಿ ತನ್ನ ಶತ್ರುವಿನ ಹಿಡಿತಕ್ಕೆ ಸಿಕ್ಕಿ ಹೋಗಿ ನರಳಾಡುತ್ತಿದ್ದರೂ, ತನ್ನ ಉತ್ತಮವಾದ ವೃತ್ತಿಯಲ್ಲಿ ರೆ॥ ಡಿವ್ಸ್‌ಡೇಲ್ ಬಹಳ ಒಳ್ಳೆಯ ಹೆಸರನ್ನು ಸಂಪಾದಿಸಿದ್ದ. ತನ್ನಲ್ಲಡಗಿದ್ದ ಅಳಲಿಂದಲೇ ಆ ಯಶಸ್ಸನ್ನು ಸಂಪಾದಿಸಿದ್ದ. ತಾನು ಪ್ರತಿದಿನವೂ ಅನುಭವಿಸುತ್ತಿದ್ದ ನೋವು ಅವನನ್ನು ನೈತಿಕವಾಗಿಯೂ ಭೌತಿಕವಾಗಿಯೂ ಚುರುಕಾಗಿಟ್ಟಿತ್ತು. ಅವನ ಖ್ಯಾತಿ ದಿನೇ ದಿನೇ ಹೆಚ್ಚುತ್ತಿದ್ದರೂ, ಅವನ ಜೊತೆಯವರಾದ ಮಿಕ್ಕ ಪಾದ್ರಿಗಳ ಖ್ಯಾತಿಯನ್ನು ಮೀರಿಸಿತ್ತು. ಡಿವ್ಸ್‌ಡೇಲನಿಗಾಗಿರುವ ವಯಸ್ಸಿಗಿಂತ ಹೆಚ್ಚು ವರ್ಷಗಳು ವೇದಾಧ್ಯಯನ ಮಾಡಿದ ಅನೇಕ ವಿದ್ವಾಂಸರಿದ್ದರು. ಧ್ಯಾನ ಅಧ್ಯಯನಗಳಲ್ಲಿ ಮುಳುಗಿ, ಈ ಮರ್ತ್ಯ ದೇಹವನ್ನು ಧರಿಸಿದ್ದರೂ, ಪುನೀತರಾದ ಪಾದ್ರಿಗಳು ಅನೇಕರಿದ್ದರು. ಆದರೆ ಅವರೆಲ್ಲರಲ್ಲೂ ಒಂದು ಮುಖ್ಯವಾದ ಕೊರತೆ ಇತ್ತು. ಅದು ಮಾತು–ಹೃದಯಂಗಮವಾದ ಮಾತು. ಈ ಪಾದ್ರಿಗಳು ದೈವಿಕವಾದ ಮತ್ತೆಲ್ಲ ವಿಷಯಗಳಲ್ಲಿಯೂ ಪ್ರವೀಣರಾಗಿದ್ದರೂ ಅವರಿಗೆ ಹೃದಯಂಗಮವಾಗಿ ಮಾತನಾಡುವ ಕಲೆ ಒಲಿದು ಬಂದಿರಲಿಲ್ಲ. ಸುಲಭವಾದ ಮಾತಿನಲ್ಲಿ, ರೂಢಿಯಲ್ಲಿರುವ ಪದಗಳಲ್ಲಿ ಅವರು ಸತ್ಯವನ್ನು ಬೋಧಿಸುವ ಸಾಹಸವಿರಲಿ, ಅದನ್ನು ಕನಸು ಕಾಣುವಂತೆಯೂ ಇರಲಿಲ್ಲ.

ಸ್ವಭಾವತಃ ಡಿವ್ಸ್‌ಡೇಲನೂ ಇದೇ ಜಾತಿಗೆ ಸೇರಿದ್ದರೆ ಅದರಲ್ಲೇನೂ ಅಚ್ಚರಿಯಿರಲಿಲ್ಲ. ಅಪರಾಧವೋ ಅಥವ ದುಃಖಕ್ಕೋ ಸಿಕ್ಕಿ ನರಳುವ ದೌರ್ಭಾಗ್ಯ ಅವನದಾಗಿರದಿದ್ದರೆ ಮಿಕ್ಕೆಲ್ಲರಂತೆ ಅವನೂ ಆ ಪವಿತ್ರ ಶಿಖರವನ್ನು ಹತ್ತಿಬಿಡುತ್ತಿದ್ದ. ದೇವತೆಗಳೂ ತಲೆದೂಗಿ ಪ್ರತ್ಯುತ್ತರ ಕೊಡಬೇಕು, ಹಾಗಿತ್ತು ಅವನ ದನಿ, ಅವನ ಮಾತು! ಆದರೆ ಆ ನೋವು ಅವನನ್ನು ಹುಲುಮನುಜರ ಮಟ್ಟಕ್ಕೆ ತುಳಿದಿಟ್ಟಿತ್ತು.

ಈ ಭಾರವನ್ನು ಹೊತ್ತು ಹೊತ್ತು, ಅವನಿಗೆ ಪಾಪಿಗಳನ್ನು ಕಂಡರೆ ಅತ್ಯಂತ ಸಹನೆಯಿತ್ತು; ಅನುಕಂಪವಿತ್ತು. ಇತರರ ದುಃಖವನ್ನು ಕಂಡು ಅವನ ಹೃದಯ ಅನುಕಂಪದಿಂದ ಮರುಗುತ್ತಿತ್ತು; ತಾನೂ ಅದರಲ್ಲಿ ಭಾಗಿಯಾಗುತ್ತಿತ್ತು. ಸಾವಿರಾರು ಹೃದಯಗಳ ಅಳಲು ಅವನ ಮನ ಮುಟ್ಟುವ ನಿರರ್ಗಳವಾದ ಮಾತಿನ ಝರಿಯಲ್ಲಿ ಹರಿದು ಬರುತ್ತಿತ್ತು. ಮನಮುಟ್ಟುವಂತಿದ್ದರೂ ಕೆಲವು ವೇಳೆ ಘೋರವಾಗಿರುತ್ತಿತ್ತು! ಯಾವುದೋ ಶಕ್ತಿ ತಮ್ಮ ಮನಕರಗಿಸುತ್ತಿರುವುದು ಆ ಜನರಿಗೆ ತಿಳಿಯು ತ್ತಿರಲಿಲ್ಲ. ಆ ಚಿಕ್ಕ ಪಾದ್ರಿಯಲ್ಲಿ ಯಾವುದೋ ಅವ್ಯಕ್ತವಾದ ಪವಿತ್ರ ಶಕ್ತಿ ಅಡಗಿದೆಯೆಂದು ಭಾವಿಸಿದ್ದರು. ದೇವರೇ ಅವನಲ್ಲಿ ಕುಳಿತು ನುಡಿಸುತ್ತಿರಬೇಕೆಂದೆನಿಸುತ್ತಿತ್ತು. ಆ ಜನರ ದೃಷ್ಟಿಯಲ್ಲಿ ಅವನು ಕಾಲೂರಿದ ನೆಲ ಕೂಡ ಪವಿತ್ರವಾಗಿತ್ತು. ಅವನ ಗುಂಪಿನ ವೃದ್ಧರೆಲ್ಲ, ಡಿಮ್ಸ್‌ಡೇಲನ ದೇಹ ದಿನೇ ದಿನೇ ಕೃಷವಾಗುತ್ತಿರುವುದನ್ನು ಕಂಡು, ತಾವೇ ವೃದ್ಧಾಪ್ಯದಿಂದ ಕೃಷವಾಗಿದ್ದರೂ ಸಹ, ಡಿಮ್ಸ್‌ಡೇಲ್ ತಮಗಿಂತ ಮೊದಲೇ ಸ್ವರ್ಗಸ್ತನಾಗುತ್ತಾನೆಂದು ಭಾವಿಸಿ, ತಾವು ಸತ್ತ ಮೇಲೆ, ಡಿಮ್ಸ್‌ಡೇಲನ ಬಳಿಯಲ್ಲೇ ತಮ್ಮನ್ನು ಹೂಳಬೇಕೆಂದು ತಮ್ಮ ತಮ್ಮ ಮಕ್ಕಳಿಗೆ ಆಜ್ಞೆಯಿತ್ತಿದ್ದರು. ಇದೆಲ್ಲ ನಡೆಯುತ್ತಿರುವಾಗ ಡಿಮ್ಸ್‌ಡೇಲ್ ತನ್ನ ಸಮಾಧಿಯ ವಿಚಾರವಾಗಿ ಯೋಚನೆ ಮಾಡುತ್ತಿದ್ದ. ಶಾಪಗ್ರಸ್ತ ನಾದ ತನ್ನಂಥವನನ್ನು ಹೂತರೆ ಅದರ ಮೇಲೆ ಹುಲ್ಲಾದರೂ ಬೆಳೆದೀತೆ ಎಂದು ತನ್ನಲ್ಲೇ ಅಂದುಕೊಳ್ಳುತ್ತಿದ್ದ!

ಜನರು ತೋರುತ್ತಿದ್ದ ಈ ಭಕ್ತಿ ವಿಶ್ವಾಸಗಳು ಅವನಿಗೆಷ್ಟು ನೋವನ್ನುಂಟುಮಾಡುತ್ತಿತ್ತೆಂದು ವರ್ಣಿಸಲೂ ಅಸಾಧ್ಯ! ಸತ್ಯವೊಂದನ್ನು ಬಿಟ್ಟರೆ ಮಿಕ್ಕೆಲ್ಲ (ದೈವಿಕವಲ್ಲದ) ವಸ್ತುಗಳೂ ಪೊಳ್ಳು-ನೆರಳಿನ ಸಮಾನ ಎಂದು ಅವನ ಭಾವನೆ. ಹಾಗಾದರೆ ತಾನಾರು ?-ವಸ್ತುವೆ? ಅಥವ ತಾನೊಂದು ಮಸುಕಾದ ನೆರಳೆ? ತಾನು ಎಂತಹವನೆಂದು ಎಲ್ಲರಿಗೂ ಕೇಳುವಂತೆ ಕಿರಿಚಿ ಹೇಳಲು ಅವನ ಮನಸ್ಸು ಹಾತೊರೆಯುತ್ತಿತ್ತು. 'ಪಾದ್ರಿಯ ಕರಿಯ ಉಡುಪನ್ನು ಧರಿಸಿ, ಈ ಪವಿತ್ರವಾದ ವೇದಿಕೆಯನ್ನು ಹತ್ತಿ ಮಹಾನುಹಿಮನಾದ ಆ ಸರ್ವಾಂತರ್ಯಾಮಿಯನ್ನು ತಮ್ಮೆಲ್ಲರ ಪರವಾಗಿ ಪ್ರಾರ್ಥಿಸುತ್ತಿರುತ್ತೇನೆ. ಮುಂದಿನ ಜನಾಂಗ ನಾನು ಬೆಳಗಿದ ಮಾರ್ಗವನ್ನು ಅನುಸರಿಸುತ್ತಾರೆಂದು ನೀವು ಭಾವಿಸಿದ್ದೀರಿ. ಆದರೆ ಇದೆಲ್ಲ ಸುಳ್ಳು. ನೀವು ಇಷ್ಟೊಂದು ಭಕ್ತಿ ವಿಶ್ವಾಸವಿಟ್ಟಿರುವ ನಾನೊಬ್ಬ

ಪಾಪಿ-ಕಲ್ಮಷ!' ಎಂದು ಕೂಗಿಬಿಡೋಣವೇ ಎನಿಸುತ್ತದೆ ಅವನಿಗೆ.

ಅನೇಕ ಬಾರಿ ಈ ಮಾತನ್ನು ಹೇಳದೆ ಇಳಿಯಲೇ ಕೂಡದೆಂದು ಮನಸ್ಸು ಮಾಡಿಕೊಂಡು ವೇದಿಕೆಯನ್ನು ಹತ್ತಿದ್ದ. ಎಷ್ಟೋ ಸಲ ಗಂಟಲು ಸರಿಮಾಡಿಕೊಂಡು ಇನ್ನೇನು ಮಾತನಾಡಿ ತನ್ನ ಗುಟ್ಟು ಬಯಲು ಮಾಡಿಕೊಳ್ಳುವುದೊಂದೇ ಬಾಕಿ. ಅನೇಕ ಬಾರಿ ಮಾತ ನಾಡಿಯೂ ಇದ್ದ! ಆದರೆ ಹೇಗೆ? ತಾನೊಬ್ಬ ಕ್ರಿಮಿಗಳಲ್ಲಿ ಕ್ರಿಮಿ, ಪಾಪಿ ಗಳಲ್ಲಿ ಮಹಾಪಾಪಿ. ತನ್ನ ಪಾಪಕ್ಕೆ ಎಣೆಯೇ ಇಲ್ಲ. ತನ್ನನ್ನು ನೋಡುತ್ತಿರುವವರ ಕಣ್ಣೆದುರಿಗೇ ದೇವರ ಕೋಪಕ್ಕೆ ತುತ್ತಾಗಿ ಅಲ್ಲೇ ಭಸ್ಮವಾಗದಿರುವುದು ಆಶ್ಚರ್ಯ! ಇನ್ನು ಇದಕ್ಕಿಂತ ಬಿಚ್ಚುನುಡಿ ಇದ್ದೀತೆ? ಇದನ್ನು ಕೇಳಿದವರು ಅವನನ್ನು ವೇದಿಕೆಯಿಂದ ತಳ್ಳಿ ಅವನನ್ನು ತುಂಡರಿಸಬೇಕು-ಹಾಗಿತ್ತು ಅವನ ಮಾತು. ಆದರೆ ಅದರ ಪರಿಣಾಮವೇ ಬೇರೆ ಆಯಿತು. ಇದನ್ನು ಕೇಳಿದ ಜನಕ್ಕೆ ಅವನಲ್ಲಿ ಮತ್ತಷ್ಟು ಭಕ್ತಿ ಹೆಚ್ಚಿತು. ಆ ಆತ್ಮನಿಂದನೆಯ ಹಿಂದೆ ಅಡಗಿದ್ದ ಗೂಢಾರ್ಥವನ್ನು ಅವರು ಗ್ರಹಿಸಲಾರದೆ ಹೋದರು.

'ಈತನೊಬ್ಬ ದೈವೀಕ ಪುರುಷ!' ಎಂದು ತಮ್ಮ ತಮಲ್ಲೇ ಅಂದು ಕೊಂಡರು. 'ಈ ಭೂಮಿಯ ಮೇಲೆ ಆತನೇ ಅತ್ಯಂತ ಪುಣ್ಯಪುರುಷ! ತನ್ನ ಆತ್ಮದಲ್ಲೇ ಆತ ಕಳಂಕ ಕಂಡುಕೊಂಡರೆ ಇನ್ನು ನಮ್ಮ—ನಿಮ್ಮ ಆತ್ಮಗಳಲ್ಲಿ ಎಂತಹ ಭೀಕರ ದೃಶ್ಯಗಳನ್ನು ಕಂಡಾನೊ!' ಎಂದುಕೊಳ್ಳು ತ್ತಾರೆ. ತನ್ನ ಮಸುಕಾದ ಈ ಆತ್ಮ ನಿವೇದನೆಯನ್ನು ಜನ ಈ ರೀತಿ ಅರ್ಥಮಾಡಿಕೊಳ್ಳುತ್ತಾರೆಂಬುದು ಆ ಪಾದ್ರಿಗೂ ತಿಳಿದಿತ್ತು. ತನ್ನ ಅಳುಕು ಮನಸ್ಸಿಗೆ ತಾನೇ ಇನ್ನಷ್ಟು ಮೋಸಮಾಡಿಕೊಂಡಿದ್ದ. ಇದರಿಂದ ಇನ್ನಷ್ಟು ಪಾಪ ಹತ್ತಿಕೊಂಡಿತೇ ವಿನಃ, ಈ ಆತ್ಮ ವಂಚನೆಯಿಂದ, ಒಂದು ಕ್ಷಣದ ಮಟ್ಟಿಗಾದರೂ ಶಾಂತಿ ದೊರೆಯಲಿಲ್ಲ. ಅವನು ಆಡಿದ್ದೆಲ್ಲ ಮಹತ್ತರ ಸತ್ಯವಾಗಿತ್ತು. ಆದರೆ ಅದು ಅತ್ಯಂತ ಪಾಪವಾಗಿ ಪರಿಣಮಿಸಿತ್ತು. ಆದರೂ ಅವನು ಸ್ವಭಾವತಃ ಸತ್ಯಸಂಧನಾಗಿದ್ದುದಲ್ಲದೆ ಸುಳ್ಳನ್ನು ಕಂಡರೆ ಹೇಸುತ್ತಿದ್ದ. ಆದರೆ ಇದೆಲ್ಲಕ್ಕಿಂತ ಮಿಗಿಲಾಗಿ ತನ್ನನ್ನು ಕಂಡು ತಾನೇ ಹೇಸುತ್ತಿದ್ದ.

ತಾನು ಹುಟ್ಟಿ ಬೆಳೆದು ಕಲಿತ ಈ ಹೊಸ ಚರ್ಚಿನ ಮತದ ಉಪದೇಶ ಗಳನ್ನು ಅನುಸರಿಸುವುದು ಬಿಟ್ಟು, ರೋಮಿನ ಕಂದಾಚಾರದ ಪದ್ಧತಿ ಯನ್ನೇ ಅನುಸರಿಸುವಂತೆ ಮಾಡುತ್ತಿತ್ತು ಅವನ ಆತ್ಮದ ಈ ಗೊಂದಲ.

ಡಿಮ್ಸ್‌ಡೇಲನ ಬೀಗಹಾಕಿಟ್ಟ ಪೆಟ್ಟಿಯಲ್ಲಿ ಒಂದು ಛಡಿಯಿತ್ತು. ಅನೇಕ ಬಾರಿ ಅದರಿಂದ ತನ್ನ ಬೆನ್ನ ಮೇಲೆ ಬಾಸುಂಡೆ ಬರುವಂತೆ ಬಾರಿಸಿಕೊಳ್ಳು ತ್ತಿದ್ದ. ತನ್ನ ಸ್ಥಿತಿಯನ್ನು ಕಂಡು ಗಹಿಗಹಿಸಿ ನಗುತ್ತಾನೆ. ನಕ್ಕಷ್ಟೂ ಏಟು ಬೀಳುತ್ತದೆ. ಏಟು ಬಿದ್ದಷ್ಟೂ ನಗುತ್ತಾನೆ. ಇತರ ಪ್ಯೂರಿ ಟನ್ನರಂತೆ ಉಪವಾಸ ಮಾಡುವುದರಿಂದ ದೇಹ ಪವಿತ್ರವಾಗುತ್ತದೆಂಬ ನಂಬಿಕೆ ಡಿಮ್ಸ್‌ಡೇಲನಿಗೂ ಇತ್ತು. ಆದರೆ ಡಿಮ್ಸ್‌ಡೇಲ್–ಪ್ರಾಯ ಶ್ಚಿತ್ತ ರೂಪವಾಗಿ, ದೇಹ ಸೊರಗಿ ಕಾಲು ಕುಸಿಯಬೇಕು ಅಲ್ಲಿಯವರೆಗೂ ಉಪವಾಸಮಾಡುತ್ತಾನೆ. ಅನೇಕ ರಾತ್ರಿಗಳು ಜಾಗರಣೆ ಮಾಡುತ್ತಾನೆ. ಮತ್ತೆ ಕೆಲವು ಸಲ ತುಂಬ ಬೆಳಕುಬರುವಂತೆ ದೀಪವಿಟ್ಟುಕೊಂಡು ತನ್ನ ಮುಖವನ್ನೇ ನೋಡಿಕೊಳ್ಳುತ್ತಾ ಕುಳಿತುಬಿಡುತ್ತಾನೆ. ಹೀಗೆ ದೇಹ ದಂಡನೆ ಮಾಡಿಕೊಳ್ಳುತ್ತಿದ್ದರೂ, ಆತ್ಮಶುದ್ಧಿ ಮಾಡಿಕೊಳ್ಳಲಾರದೆಹೋದ. ಹೀಗೆ ಜಾಗರಣೆಮಾಡುತ್ತಿರುವಾಗ ಅವನ ಮನಸ್ಸು ಸುಳಿಯಲ್ಲಿ ಸಿಕ್ಕಿ ತಿರುಗಲಾರಂಭಿಸುತ್ತದೆ. ಮಂಕಾದ ಆ ಕೋಣೆಯಲ್ಲಿ ತನ್ನ ಸುತ್ತಮುತ್ತ ಆ ಕನ್ನಡಿಯಲ್ಲಿ ಎಲ್ಲಾ ಕಡೆಗಳಲ್ಲೂ ಏನೇನೋ ಆಕಾರಗಳು ಕಾಣಿಸುತ್ತವೆ. ಒಮ್ಮೆ ಗುಂಪು ಗುಂಪಾಗಿ ಪೈಶಾಚಿಕ ರೂಪಗಳು ನುಗ್ಗಿ ಹಲ್ಲುಗಿಂಜುತ್ತಾ ಆವನನ್ನು ಅಣಕಿಸುತ್ತಾ, ತಮ್ಮ ಬಳಿಗೆ ಕರೆಯುತ್ತಾ ಹೊರಟು ಹೋಗು ತ್ತವೆ. ಮತ್ತೊಮ್ಮೆ ದುಃಖದಿಂದ ತಮ್ಮ ರೆಕ್ಕೆಗಳು ಭಾರವಾಗಿರುವಂತೆ ಜಾಜ್ವಲ್ಯಮಾನವಾದ ದೇವತೆಗಳ ಗುಂಪು ನಿಧಾನವಾಗಿ ಹಾರಿಹೋಗು ತ್ತದೆ. ಕಾಲವಾದ ಅವನ ಬಾಲ್ಯಸ್ನೇಹಿತರು, ಮುದಿ ತಂದೆ, ಇವನನ್ನು ನೋಡಿ ಮೋರೆ ತಿರುಗಿಸಿಕೊಂಡು ಹೋಗುವ ತಾಯಿ ಎಲ್ಲರೂ ಬಂದು ಹೋಗುತ್ತಾರೆ. ಇವೆಲ್ಲದರ ಮಧ್ಯೆ, ಹೆಸ್ಟರ್ ಪ್ರೈನ್, ಕೆಂಪು ಬಟ್ಟೆಧರಿಸಿದ ತನ್ನ ಪುಟ್ಟ ಮಗುವನ್ನು ನಡೆಸಿಕೊಂಡು, ತನ್ನೆದೆಯ ಮೇಲಿರುವ ಕೆಂಪು ಅಕ್ಷರದ ಕಡೆಗೂ,ಪಾದ್ರಿಯ ಎದೆಯ ಕಡೆಗೂ ಬೆಟ್ಟು ಮಾಡಿ ತೋರಿಸ ತೊಡಗುತ್ತಾಳೆ.

ಇದರಲ್ಲಿ ಯಾವುದೂ ಅವನನ್ನು ಪೀಡಿಸುತ್ತಿರಲಿಲ್ಲ. ಎಷ್ಟೋ ಬಾರಿ ಮನಸ್ಸು ಗಟ್ಟಿಮಾಡಿ ಅವೆಲ್ಲಾ ಮಿಥ್ಯವೆಂದು ಸ್ಪಷ್ಟಮಾಡಿಕೊಳ್ಳು ತ್ತಿದ್ದ. ಅಲ್ಲಿದ್ದ ಮೇಜು, ಚರ್ಮದ ಹೊದಿಕೆಯುಳ್ಳ ಆ ಬೈಬಲ್ ಪುಸ್ತಕ ಇವೆಲ್ಲ ದಿಟ; ತಾನು ಕಂಡ ಭಯಂಕರ ನೋಟಗಳೆಲ್ಲ ಸುಳ್ಳು ಎಂದು ಧೈರ್ಯ ಮಾಡಿಕೊಳ್ಳುತ್ತಾನೆ. ಮಿಥ್ಯವಾದ ಬಾಳನ್ನು ಸಂಕಟದಿಂದ ಸಾಗಿಸುತ್ತಿರುವ ಜೀವಕ್ಕೆ ಸಂತೋಷ ಪಡಲೆಂದು ದೇವರು ಕರುಣಿಸಿರುವ

ವಸ್ತುಗಳೆಲ್ಲ ಸಾರ ಕಳೆದುಕೊಂಡು ಸತ್ವಹೀನವಾಗಿಬಿಡುತ್ತವೆ. ಸತ್ಯದಿಂದ ದೂರವಾದವನಿಗೆ ಈ ಜಗತ್ತೇ ಶೂನ್ಯ-ಅದು ಅವನ ಹಿಡಿಯಲ್ಲೇ ಕರಗಿಹೋಗುತ್ತದೆ. ಕಡೆ ಕಡೆಗೆ ಅವನೇ ಶೂನ್ಯನಾಗುತ್ತಾನೆ. ತಾನು ಈ ಭೂಮಿಯ ಮೇಲೆ ಬದುಕಿದ್ದೇನೆಂದು ಡಿಮ್ಸ್‌ಡೇಲನಿಗೆ ಖಚಿತವಾಗಿ ತೋರಿಸಿಕೊಡುತ್ತಿದ್ದುದು ಅವನ ಆತ್ಮ ಪಡುತ್ತಿದ್ದ ಸಂಕಟ. ಅವನು ಒಂದು ಬಾರಿ, ಒಂದೇ ಒಂದು ಬಾರಿ ಹಸನ್ಮುಖನಾಗಿ, ನಗುವ ಶಕ್ತಿಯಿದ್ದ ಪಕ್ಷದಲ್ಲಿ, ಇನ್ನು ಅಂತಹ ಮನುಷ್ಯನೇ ಇರುತ್ತಿರಲಿಲ್ಲ.

ಹೀಗೆಯೇ ನಿದ್ರೆಯಿಲ್ಲದೆ ಒಂದಾನೊಂದು ಕೆಟ್ಟ ರಾತ್ರಿ ಕುರ್ಚಿಯ ಮೇಲೆ ಕುಳಿತಿದ್ದ ಪಾದ್ರಿಗೆ ಒಂದು ಯೋಚನೆ ಹೊಳೆಯಿತು. ಅದರಲ್ಲಾದರೂ ಮನಸ್ಸಿಗೆ ಕ್ಷಣಕಾಲ ಶಾಂತಿ ದೊರೆತೀತು. ತಾನು ಪ್ರಾರ್ಥನಾ ಕಾಲದಲ್ಲಿ ಧರಿಸುವ ಬಟ್ಟೆಗಳನ್ನು ಧರಿಸಿ, ಸದ್ದಿಲ್ಲದೆ ಮಾಳಿಗೆಯ ಮೆಟ್ಟಲಿಳಿದು ಮೆಲ್ಲನೆ ಬಾಗಿಲು ತೆರೆದು, ಮನೆಯಿಂದ ಹೊರಗೆ ಹೊರಟ.

೧೨

ನಿದ್ರೆಯಲ್ಲಿದ್ದು ಓಡಾಡುವವನಂತೆ ಡಿಮ್ಸ್‌ಡೇಲ್, ಒಂದಾನೊಂದು ಕಾಲದಲ್ಲಿ ಹೆಸ್ಟರ್ ಪ್ರೈನ್ ಅಷ್ಟೊಂದು ಜನರ ಮಧ್ಯ ಅಪಮಾನ ಅನುಭವಿಸಿದ್ದ ಸ್ಥಳಕ್ಕೆ ಬಂದ. ಅದೇ ವಧ್ಯವೇದಿಕೆ. ಮಳೆಗಾಳಿಗಳ ಹೊಡೆತಕ್ಕೆ ಸಿಕ್ಕಿ ಕಪ್ಪಗಾಗಿದ್ದುದಲ್ಲದೆ, ಈ ಏಳುವರ್ಷಗಳಲ್ಲಿ ಅನೇಕ ಅಪರಾಧಿಗಳ ಕಾಲ ತುಳಿತದಿಂದ ಕೊಂಚ ಸವೆದಿತ್ತು. ಪಾದ್ರಿ ಮೆಟ್ಟಲನ್ನು ಹತ್ತಿ ಮೇಲೆ ಹೋದ.

ಆಗ ಮೇ ತಿಂಗಳು. ಕತ್ತಲು ಬಹಳವಾಗಿತ್ತು. ತಲೆಯ ಮೇಲಿಂದ ದಿಗಂತದವರೆಗೂ ಒಂದು ದೊಡ್ಡ ಮೋಡ ಕವಿದಿತ್ತು. ಹೆಸ್ಟರ್ ಪ್ರೈನ್‌ಳನ್ನು ನೋಡಲು ಬಂದಿದ್ದ ಅದೇ ಜನದ ಗುಂಪು ಈಗ ಬಂದಿದ್ದರೆ, ವೇದಿಕೆಯ ಮೇಲೆ ನಿಂತಿರುವ ವ್ಯಕ್ತಿ ಯಾರೆಂದು ಅವರಿಗೆ ಗುರುತಿಸಲು ಸಾಧ್ಯವಿರಲಿಲ್ಲ. ಒಬ್ಬ ಮನುಷ್ಯನ ಮಸುಕು ಮಸುಕಾದ ಆಕೃತಿ ಮಾತ್ರ ಕಾಣುತ್ತಿತ್ತು ಅಷ್ಟೆ. ಆದರೆ ಊರಿಗೆ ಊರೆ ನಿದ್ರೆಮಾಡಿತ್ತು. ಯಾರಾದರೂ ನೋಡಿಯಾರೆಂಬ ಭಯವೂ ಇರಲಿಲ್ಲ. ತನಗೆ ಇಷ್ಟ ಬಂದಷ್ಟು ಹೊತ್ತು, ಬೇಕಾದರೆ ಬೆಳಕಾಗುವವರೆಗೂ ಯಾರ ಭಯವೂ ಇಲ್ಲದೆ ಪಾದ್ರಿ ಅಲ್ಲಿ ನಿಂತಿರಬಹುದಾಗಿತ್ತು. ಅದರಿಂದಾಗುತ್ತಿದ್ದ ಒಂದೇ ಒಂದು ಅಪಾಯವೆಂದರೆ, ಬೀಸುತ್ತಿದ್ದ ಶೀತ ಗಾಳಿಯಿಂದ ಮೈ ಕೈ

ನೋವು ಉಂಟಾಗಿ, ಕೆಮ್ಮಲು ಶುರುವಾಗಬಹುದಾಗಿತ್ತು ಅಷ್ಟೆ. ತನ್ನ ಕೊಠಡಿಯಲ್ಲಿ ತಾನು ಛಡಿ ಶಿಕ್ಷೆ ವಿಧಿಸಿಕೊಳ್ಳುತ್ತಿರುವಾಗ ನೋಡುತ್ತಿದ್ದ ಭಗವಂತನೊಬ್ಬನನ್ನು ಬಿಟ್ಟರೆ ಇನ್ನು ಯಾರ ದೃಷ್ಟಿಗೂ ಬೀಳುವಂತಿರಲಿಲ್ಲ. ಹಾಗಾದರೆ ತಾನು ಇಲ್ಲಿಗೇಕೆ ಬಂದಿದ್ದ? ಪ್ರಾಯಶ್ಚಿತ್ತದ ಆಟ ಹೂಡುತ್ತಿದ್ದನೆ? ಹೌದು ಅದೇನೋ ಆಟವೆ; ಆದರೆ ಅವನ ಆತ್ಮ ಅದರೊಡನೆ ಹೆಣಗಾಡುತ್ತಿತ್ತು. ಆ ಆಟವನ್ನು ಕಂಡು ದೇವತೆಗಳು ದುಃಖದಿಂದ ಕಣ್ಣೀರಿಡುತ್ತಿದ್ದರು, ಪಿಶಾಚಿಗಳು ಅಟ್ಟಹಾಸದಿಂದ ನಗುತ್ತಿದ್ದವು! ಅವನನ್ನು ಎಡಬಿಡದೆ ಕಾಡುತ್ತಿದ್ದ ಪಶ್ಚಾತ್ತಾಪ ಇಲ್ಲಿಗೆ ಎಳೆದುಕೊಂಡು ಬಂದಿತ್ತು. ಪಶ್ಚಾತ್ತಾಪಕ್ಕೂ ಹೇಡಿತನಕ್ಕೂ ನಿಕಟ ಸಂಬಂಧವಿದೆ–ಅಕ್ಕ ತಂಗಿಯರಿದ್ದ ಹಾಗೆ–ಆ ಹೇಡಿತನದ ರಹಸ್ಯ ಬಯಲಾಗದಂತೆ ಅವನನ್ನು ತಡೆಯುತ್ತಿತ್ತು. ಅವನ ದೌರ್ಭಾಗ್ಯಕ್ಕೆ ಎಣೆಯೇ ಇರಲಿಲ್ಲ! ಅವನು ಈ ಅಪರಾಧದ ಭಾರದ ನೋವನ್ನು ಅನುಭವಿಸುವುದಕ್ಕೆ ಏನು ಪಾಪ ಮಾಡಿದ್ದನೊ. ಕಠಿಣ ಹೃದಯವುಳ್ಳವರು ಮಾತ್ರ ಅಪರಾಧ ಮಾಡಲು ಸಾಧ್ಯ. ಕೈಲಾದ ಮಟ್ಟಿಗೂ ಆ ನೋವನ್ನು ಸಹಿಸಿಕೊಳ್ಳಲು ಪ್ರಯತ್ನಿಸುತ್ತಾರೆ, ಇಲ್ಲದಿದ್ದಲ್ಲಿ ಒಮ್ಮನಸ್ಸಿನಿಂದ ಅದನ್ನು ತಮ್ಮ ಹೃದಯದಿಂದಲೇ ಕಿತ್ತೊಗೆದು ಬಿಡುತ್ತಾರೆ! ಈ ಮೃದು ಹೃದಯಗಳಲ್ಲಿ ಯಾವುದೂ ಸಾಧ್ಯವಿಲ್ಲ. ಗಳಿಗೆಗೊಂದು ಯೋಚನೆಯನ್ನು ಕಾರ್ಯಗತ ಮಾಡಲು ಯತ್ನಿಸಿ, ಯಾವುದಕ್ಕೂ ನಿಲುಕದೆ, ಅವುಗಳೆಲ್ಲ ಸೇರಿ ಹೆಣೆದುಕೊಂಡ ಗಂಟಿನ ನಡುವೆ ಸಿಕ್ಕಿ ನರಳಾಡುತ್ತಾರೆ.

ಡಿಮ್ಸ್‌ಡೇಲ್ ತನ್ನ ಪಶ್ಚಾತ್ತಾಪವನ್ನು ಸೂಚಿಸಲು ಪ್ರಯತ್ನಪಡುತ್ತಾ ವೇದಿಕೆಯ ಮೇಲೆ ನಿಂತಿದ್ದ. ಜಗತ್ತೇ ತನ್ನ ಎದೆಯ ಮೇಲಿರುವ ಕೆಂಪು ಅಕ್ಷರವನ್ನೇ ದಿಟ್ಟಿಸಿ ನೋಡುತ್ತಿರುವಂತೆ ಭಾಸವಾಗಿ ಅವನಿಗೆ ತುಂಬ ಗಾಬರಿಯಾಯಿತು. ತನಗೆ ಅರಿವಿಲ್ಲದಂತೆಯೇ, ಸ್ವಲ್ಪವೂ ಪ್ರಯಾಸವಿಲ್ಲದೆ ಗಟ್ಟಿಯಾಗಿ ಕಿರಿಚಿಕೊಂಡ. ಆ ನಿಶ್ಶಬ್ದವಾದ ರಾತ್ರಿಯಲ್ಲಿ ಅವನ ಧ್ವನಿ ಮನೆಯಿಂದ ಮನೆಗೆ ಹಾರಿ ದೂರದಲ್ಲಿರುವ ಬೆಟ್ಟಗಳಿಗೆ ಮುಟ್ಟಿ ಪ್ರತಿಧ್ವನಿಸಿತು. ಅದು ದೆವ್ವಗಳ ದೊಡ್ಡ ಸಮೂಹವೊಂದು, ಆ ಧ್ವನಿಯಲ್ಲಡಗಿದ್ದ ನೋವನ್ನೂ, ಗಾಬರಿಯನ್ನೂ ಕಂಡು ಸಂತೋಷದಿಂದ ವಿನೋದಕ್ಕಾಗಿ ಆ ಧ್ವನಿಯನ್ನು ಇತ್ತಿಂದತ್ತ ಅತ್ತಿಂದಿತ್ತ ಹೊಡೆದು ಪ್ರತಿಧ್ವನಿಸುವಂತೆ ಭಾಸವಾಗುತ್ತಿತ್ತು.

‘ಇನ್ನು ಮುಗಿದು ಹೋಯಿತು! ಊರಿಗೇ ಊರೇ ಎದ್ದು ಇಲ್ಲಿಗೆ

ಬಂದು ನನ್ನನ್ನು ನೋಡಿಬಿಡುತ್ತದೆ!' ಎಂದು ಪಾದ್ರಿ ಕೈಗಳಿಂದ ತನ್ನ ಮುಖವನ್ನು ಮುಚ್ಚಿಕೊಂಡ.

ಆದರೆ ಅದು ಹಾಗಾಗಲಿಲ್ಲ. ತಾನು ಯೋಚಿಸಿದಷ್ಟು ಜೋರಾಗಿ ಅವನು ಕಿರಿಚಿರಲಿಕ್ಕಿಲ್ಲ. ಯಾರಿಗೂ ಎಚ್ಚರಿಕೆಯಾಗಲಿಲ್ಲ. ಒಂದು ವೇಳೆ ಎಚ್ಚರಿಕೆಯಾದರೂ, ಯಾರೋ ಮಾಂತ್ರಿಕರು ಕೂಗಿಕೊಳ್ಳುತ್ತಿದ್ದಾರೆಂದು ಭಾವಿಸಿಬಿಟ್ಟಿರಬೇಕು. ಏಕೆಂದರೆ ಆಗಿನ ಕಾಲದಲ್ಲಿ ಮಾಟಗಾರ್ತಿಯರು ಸೈತಾನನ ಸಂಗಡ ಹಾರಿಹೋಗುತ್ತಿರುವಾಗ ಈ ರೀತಿಯ ಶಬ್ದಗಳು ಕೇಳಿಸುತ್ತಿದ್ದುದೂ ಉಂಟಂತೆ. ಪಾದ್ರಿ, ಯಾರೂ ಎಚ್ಚರಗೊಂಡು ಬರದಿದ್ದುದನ್ನೂ ನೋಡಿ ಮುಖವನ್ನು ಮುಚ್ಚಿದ್ದ ಕೈತೆಗೆದು ಸುತ್ತಲೂ ನೋಡಿದ. ಗವರ್ನರ್ ಬೆಲಿಂಗ್‌ಹ್ಯಾಮ್‌ರವರ ಮಹಲಿನ ಒಂದು ಕಿಟಕಿಯಲ್ಲಿ ಮಾತ್ರ ದೀಪದ ಬೆಳಕಿತ್ತು. ಬಿಳಿಯ ಅಂಗಿಯನ್ನೂ ಟೋಪಿಯನ್ನೂ ಧರಿಸಿ ವೃದ್ಧ ನ್ಯಾಯಾಧಿಪತಿ ಕೈಯಲ್ಲಿ ದೀಪ ಹಿಡಿದು ನಿಂತಿರುವುದು ಕಾಣಿಸುತ್ತಿತ್ತು. ಆತನು ಸಮಾಧಿಯಿಂದ ಆ ಕಾಲದಲ್ಲಿ ಎದ್ದು ಬಂದ ಭೂತದಂತೆ ಕಾಣುತ್ತಿದ್ದ. ಈ ಕೂಗು ನಿಜವಾಗಿಯೂ ಆತನನ್ನು ಗಾಬರಿಪಡಿಸಿತ್ತು. ಮಹಲಿನ ಇನ್ನೊಂದು ಕಿಟಕಿಯಲ್ಲಿ ದೀಪ ಹಿಡಿದು ಗವರ್ನರ ಸೋದರಿ ಮಿಸ್ಟ್ರೆಸ್ ಹಿಬ್ಬಿನ್ಸ್ ನೋಡುತ್ತಿರುವುದು ಕಾಣಿಸಿತು. ಅವಳ ಮುಖದಲ್ಲಿದ್ದ ಕ್ರೌರ್ಯ ಮತ್ತು ಅಸಹನೆ ಇಷ್ಟು ದೂರಕ್ಕೂ ಕಾಣುತ್ತಿತ್ತು. ಕಿಟಕಿಯಿಂದ ತಲೆಯನ್ನು ಹೊರಕ್ಕೆ ಚಾಚಿ ಮೇಲೆ ನೋಡಿದಳು. ಡಿಮ್ಸ್‌ಡೇಲನ ಕೂಗು ಆಕೆಗೂ ಕೇಳಿಸಿರಬೇಕು. ಆದರೆ ಆಕೆ ಅದನ್ನು ಬೇರೆಯೇ ರೀತಿಯಲ್ಲಿ ಅರ್ಥಮಾಡಿಕೊಂಡಳು. ಆ ದನಿ-ಮರುದನಿಗಳನ್ನು ಕೇಳಿ ಅದು ಪಿಶಾಚಿಗಳ ಗುಂಪಿಂದ ಹೊರಟ ಸದ್ದಿರಬೇಕೆಂದು ಭಾವಿಸಿದಳು. ಆಕೆ ಅನೇಕ ಬಾರಿ ಪಿಶಾಚಿಗಳೊಂದಿಗೆ ಕಾಡಿನಲ್ಲಿ ವಿಹಾರಕ್ಕೆಂದು ಹೋಗುತ್ತಿದ್ದಳಂತೆ.

ಗವರ್ನರರ ಕೈಯಲ್ಲಿದ್ದ ದೀಪದ ಬೆಳಕನ್ನು ಕಂಡು ತನ್ನ ದೀಪವನ್ನು ತಕ್ಷಣ ಆರಿಸಿ, ಬೇಗನೆ ಅಲ್ಲಿಂದ ಮರೆಯಾದಳು. ಪಾದ್ರಿಗೆ ಅವಳು ಪುನಃ ಕಾಣಲಿಲ್ಲ. ಬಹುಶಃ ಮೋಡಗಳ ಮೇಲೆ ಆಕೆಯೂ ತೇಲಿಕೊಂಡು ಹೋಗಿರಬೇಕು. ಸ್ವಲ್ಪ ಹೊತ್ತು ಕತ್ತಲಲ್ಲೇ ಹುಡುಕಾಡಿ ಏನೂ ಕಾಣದೆ ಗವರ್ನರರೂ ಒಳಕ್ಕೆ ಹೊರಟುಹೋದರು.

ಪಾದ್ರಿಯ ಮನಸ್ಸು ಕೊಂಚ ಸ್ಥಿಮಿತವಾಯಿತು. ಬಹಳ ದೂರದಲ್ಲಿ ದೀಪವೊಂದು ಮಿಣಮಿಣನೆ ಉರಿಯುತ್ತಿರುವುದು ಕಾಣಿಸಿತು. ಬರಬರುತ್ತಾ

ಆ ದೀಪ ಅವನ ಕಡೆಗೇ ಬರುತ್ತಿತ್ತು. ಅಕ್ಕಪಕ್ಕದಲ್ಲಿದ್ದ ವಸ್ತುಗಳೆಲ್ಲ ಅದರ ಬೆಳಕಿನಲ್ಲಿ ಮಸುಕು ಮಸಕಾಗಿ ಕಾಣಿಸುತ್ತಿದ್ದವು. ಅಲ್ಲೊಂದು ಕಂಬ, ಇಲ್ಲೊಂದು ಕಿಟಕಿ, ಬೇಲಿ, ದೊಡ್ಡ ಬಾಗಿಲು, ಮೆಟ್ಟಿಲಾಗಿ ಉಪಯೋಗಿಸುತ್ತಿರುವ ಮರದ ತುಂಡು–ಹೀಗೆ ಒಂದೊಂದಾಗಿ ಕಾಣಿಸಿಕೊಂಡು ಮಾಯವಾಗುತ್ತಿದ್ದವು. ಡಿಮ್ಸ್‌ಡೇಲ್ ತನ್ನ ಕಾಲ ಮುಗಿಯುತ್ತ ಬಂತೆಂದು ಭಾವಿಸಿದ. ಇನ್ನು ಕೆಲವು ಕ್ಷಣಗಳಲ್ಲಿಯೇ ಆ ದೀಪ ಇಲ್ಲಿಗೂ ಬರುತ್ತದೆ, ಅದರ ಬೆಳಕು ತನ್ನ ಮೇಲೂ ಬಿದ್ದು ತಾನು ಬಹಳ ದಿನದಿಂದ ಹುದುಗಿಟ್ಟ ರಹಸ್ಯವೆಲ್ಲ ಬಯಲಾಗುತ್ತದೆ ಎಂದು ಭಾವಿಸಿದ. ದೀಪ ಹತ್ತಿರ ಬಂದಂತೆ, ಅದರ ಬೆಳಕಿನ ವೃತ್ತದಲ್ಲಿ ರೆವರೆಂಡ್ ವಿಲ್ಸನ್‌ರವರು ಬರುತ್ತಿರುವುದು ಕಾಣಿಸಿತು. ಯಾರೋ ಇಹಲೋಕವನ್ನು ತ್ಯಜಿಸುತ್ತಿರುವವರ ಬಳಿಯಲ್ಲಿ ಆತ ಪ್ರಾರ್ಥಿಸುತ್ತ ಕುಳಿತಿದ್ದಿರಬೇಕೆಂದು ಡಿಮ್ಸ್‌ಡೇಲ್ ಭಾವಿಸಿದ. ಅದು ನಿಜವೇ ಆಗಿತ್ತು. ಆಗ ತಾನೇ ಇಹಲೋಕಯಾತ್ರೆ ಮುಗಿಸಿದ್ದ ಗವರ್ನರ್ ವಿನ್‌ತ್ರಾಪ್‌ರ ಮನೆಯಿಂದ ಆ ವೃದ್ಧ ಪಾದ್ರಿ ಬರುತ್ತಿದ್ದರು. ಕೈಲಿ ಹಿಡಿದಿದ್ದ ದೀಪದಿಂದ ಮೂಡಿದ್ದ ಬೆಳಕು ಸುತ್ತಲೂ ಪ್ರಭಾವಳಿಯಂತೆ ಹರಡಿಕೊಂಡು ಆತ ತೇಜಃಪುಂಜನಾಗಿ ಕಾಣುವಂತೆ ಮಾಡಿತ್ತು. ಆ ಬೆಳಕನ್ನು ನೋಡಿ ಡಿಮ್ಸ್‌ಡೇಲನಿಗೇಕೋ ತುಂಬ ನಗು ಬಂತು—ತನಗೇನು ಹುಚ್ಚು ಹಿಡಿಯುತ್ತಿದೆಯೆ ಎಂದುಕೊಂಡ.

ಒಂದು ಕೈಯಲ್ಲಿ ಮೈಯ್ಯೆಲ್ಲಾ ಮುಚ್ಚುವಂತೆ ಹೊದ್ದಿದ್ದ ವಸ್ತ್ರವನ್ನು ಭದ್ರವಾಗಿ ಹಿಡಿದು, ಮತ್ತೊಂದು ಕೈಯ್ಯಲ್ಲಿ ದೀಪವನ್ನು ಹಿಡಿದು ವೇದಿಕೆಯ ಬಳಿಯಲ್ಲೇ ಆತ ನಡೆದು ಹೋಗುತ್ತಿರುವಾಗಲಂತೂ ಡಿಮ್ಸ್‌ಡೇಲನಿಗೆ ಮಾತನ್ನು ತಡೆಯುವುದಕ್ಕೇ ಆಗಲಿಲ್ಲ.

‘ ನಮಸ್ಕಾರ ಸ್ವಾಮಿ! ಮೇಲಕ್ಕೆ ಬನ್ನಿ, ಇಬ್ಬರೂ ಸ್ವಲ್ಪ ತಮಾಷೆಯಾಗಿ ಕಾಲ ಕಳೆಯೋಣವಂತೆ ! ’

ಡಿಮ್ಸ್‌ಡೇಲ್ ನಿಜವಾಗಿಯೂ ಮಾತನಾಡಿದನೆ? ಒಂದು ಕ್ಷಣ ತಾನು ಗಟ್ಟಿಯಾಗಿ ಹಾಗೆ ಮಾತನಾಡಿದೆನೆಂದೇ ಭಾವಿಸಿದ. ಆದರೆ ಹಾಗೆಂದು ತನ್ನ ಮನಸ್ಸಿನಲ್ಲೇ ಹೇಳಿಕೊಂಡಿದ್ದ. ರೆ|| ವಿಲ್ಸನ್‌ರವರು, ದೀಪದ ಬೆಳಕಿನಲ್ಲಿ ಹುಷಾರಾಗಿ ನೆಲವನ್ನೇ ನೋಡುತ್ತಾ, ಅತ್ತಿತ್ತ ತಿರುಗದೆ, ವಧ್ಯ ವೇದಿಕೆಯ ಕಡೆಗೆ ಕಣ್ಣೂ ಹಾಯಿಸದೆ ನಿಧಾನವಾಗಿ ನಡೆದು ಹೋಗುತ್ತಿದ್ದರು. ಆ ದೀಪ ಮರೆಯಾದ ಕೂಡಲೇ ಪಾದ್ರಿಗೆ ಏನೋ ಮಂಕು ಹಿಡಿದಂತಾಯಿತು. ಕಳೆದ ಕೆಲವು ಕ್ಷಣಗಳ ಆತಂಕ ಅಷ್ಟು

ತೀವ್ರವಾಗಿತ್ತು.

ಸ್ವಲ್ಪ ಸಮಯವಾದ ಕೂಡಲೇ ಅವನಿಗೆ ಮತ್ತೆ ಮತ್ತೆ ಅದೇ ಭಾವನೆಗಳು ಬರತೊಡಗಿದವು. ಚಳಿಯಿಂದ ಅವನ ಕೈಕಾಲುಗಳು ಸೆಟೆದು ಕೊಂಡಂತೆ ತೋರುತ್ತಿತ್ತು. ವೇದಿಕೆಯ ಮೆಟ್ಟಲನ್ನು ಇಳಿಯುವುದಕ್ಕೆ ಸಹ ಆಗುತ್ತದೆಯೋ ಇಲ್ಲವೋ ಎಂದು ಅನುಮಾನವಾಯಿತು. ಬೆಳಕಾದ ತಕ್ಷಣ ತಾನು ಅಲ್ಲಿರುವುದು ತಿಳಿದುಹೋಗುತ್ತದೆ. ಆ ಕೇರಿಯ ಜನ ಏಳಲು ತೊಡಗುತ್ತಾರೆ. ಅವರೆಲ್ಲರಿಗಿಂತ ಮೊದಲು ಎದ್ದವನು ಆ ಮಸು ಕಾದ ಬೈಗಿನಲ್ಲಿ ವೇದಿಕೆಯ ಮೇಲೆ ಅಸ್ಪಷ್ಟವಾಗಿ ಕಾಣುತ್ತಿರುವ ಆಕೃತಿ ಯನ್ನು ಕಂಡು, ಕಾಲವಾದ ಅಪರಾಧಿಯೊಬ್ಬನ ಭೂತ ಅಲ್ಲಿ ನಿಂತಿರುವು ದೆಂದು ಭಾವಿಸಿ ಮನೆಮನೆಗೂ ಹೋಗಿ ಬಾಗಿಲು ತಟ್ಟಿ ಗಾಬರಿಯಿಂದಲೂ ಕುತೂಹದಿಂದಲೂ ಕೂಗಿ ಅವರಿಗೂ ತೋರಿಸುತ್ತಾನೆ. ಆ ನಸುಗತ್ತಲಲ್ಲೇ ಮನೆಯಿಂದ ಮನೆಗೆ ಗಲಾಟೆ ಹಬ್ಬುತ್ತದೆ. ಬೆಳಕು ಹೆಚ್ಚಾದಂತೆಲ್ಲಾ ಊರಿನ ಹಿರಿಯರು ಆತುರ ಆತುರವಾಗಿ ಉಣ್ಣೆಯ ಮೇಲಂಗಿಯನ್ನು ತೊಟ್ಟು ಓಡಿ ಬರುತ್ತಾರೆ. ಹಿರಿಯ ಮಹಿಳೆಯರು ತಮ್ಮ ರಾತ್ರಿಯ ಉಡುಪನ್ನು ಕೂಡ ಬದಲಾಯಿಸದೆ ಧಾವಿಸಿ ಬರುತ್ತಾರೆ. ತಮ್ಮ ತಲೆಯಲ್ಲಿ ಒಂದು ಕೂದಲು ಕೂಡ ಹೆಚ್ಚು ಕಡಮೆಯಿರದಷ್ಟು ಮಟ್ಟಿಗೆ ಅಂದವಾಗಿ ಅಲಂಕಾರ ಮಾಡಿಕೊಂಡಿರುತ್ತಿದ್ದವರೆಲ್ಲಾ, ತಲೆ ಕೆದರಿಕೊಂಡು ಹಾಸಿಗೆಯ ಮೇಲೆ ಮಲಗಿದ್ದ ರೀತಿಯಲ್ಲೇ ಹೊರಕ್ಕೆ ಬಂದು ಬಿಡುತ್ತಾರೆ. ಗವರ್ನರ್ ಬೆಲಿಂಗ್‌ಹ್ಯಾಮ್ ಗಂಭೀರವಾಗಿ ಬರುತ್ತಾರೆ; ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಮತ್ತಷ್ಟು ಸಪ್ಪೆ ಮೋರೆ ಹಾಕಿಕೊಂಡು, ಬಟ್ಟೆಗಳಿಗೆಲ್ಲಾ ತಗುಲಿಕೊಂಡಿರುವ ಮುಳ್ಳುಕಡ್ಡಿಗಳ ಸಹಿತ ಮಿಸ್ಟ್ರೆಸ್ ಹಿಬ್ಬಿನ್ಸ್ ಬರುತ್ತಾಳೆ. ಅರ್ಧರಾತ್ರಿಯ ವರೆಗೂ ಮೃತ್ಯುಶಯ್ಯೆಯ ಬಳಿ ಕುಳಿತಿದ್ದು, ನಿದ್ರಾಭಂಗ ಮಾಡಿಕೊಳ್ಳಲು ಇಷ್ಟವಿಲ್ಲದೆ ಮಹಾತ್ಮರುಗಳ ಕನಸು ಕಾಣುತ್ತಿರುವ ರೆ|| ವಿಲ್ಸನ್ನರವರೂ ಆ ವೇಳೆಗೇ ಎದ್ದು ಬರುತ್ತಾರೆ. ಡಿಮ್ಸ್‌ಡೇಲನ ಚರ್ಚಿಗೆ ಸೇರಿದ ಮಿಕ್ಕ ಪಾದ್ರಿಗಳೂ, ಅಧಿಕಾರ ವರ್ಗದವರೂ, ಡಿಮ್ಸ್‌ಡೇಲನನ್ನು ದೇವರೆಂದು ಭಾವಿಸಿ ತಮ್ಮ ಶ್ವೇತವರ್ಣದ ಎದೆಗಳಲ್ಲಿ ಗುಡಿಕಟ್ಟಿ ಪೂಜೆ ಮಾಡುತ್ತಿದ್ದ ಹೆಣ್ಣುಮಕ್ಕಳು, ಈ ಗಾಬರಿಯಲ್ಲಿ ವಸ್ತ್ರಗಳಿಂದ ತಮ್ಮ ಎದೆಯನ್ನು ಮುಚ್ಚಿಕೊಳ್ಳುವುದನ್ನೂ ಮರೆತು ಬಂದು ಬಿಡುತ್ತಾರೆ. ಒಂದು ಮಾತಿನಲ್ಲಿ ಹೇಳುವುದಾದರೆ ಊರಿನ ಪ್ರತಿಯೊಬ್ಬರೂ ಮುಗ್ಗುರಿಸುವುದನ್ನೂ ಗಮನಿ ಸದೆ, ವಧ್ಯವೇದಿಕೆಯ ಸುತ್ತ ಸೇರಿರುವ ಗಾಬರಿಗೊಂಡ ಜನಸಮೂಹದ

ಬಳಿಗೆ ಓಡುತ್ತಾರೆ. ಪೂರ್ವದ ಕೆಂಬೆಳಕು ವೇದಿಕೆಯ ಮೇಲೆ ಬಿದ್ದಾಗ ಅವರಿಗೆಲ್ಲ ಕಾಣುವುದೇನು? ಚಳಿಯಿಂದ ಸೆಟೆದುಹೋಗಿ, ಅಪಮಾನದಿಂದ ಕುಗ್ಗಿಹೋಗಿರುವ ರೆವರೆಂಡ್ ಆರ್ಥರ್ ಡಿಮ್ಸ್‌ಡೇಲನು ಹೆಸ್ಟರ್ ಪ್ರೈನ್ ಒಮ್ಮೆ ನಿಂತಿದ್ದ ಸ್ಥಳದಲ್ಲಿ ನಿಂತಿರುವುದು!

ಈ ಭಯಂಕರ ದೃಶ್ಯಗಳ ಕಲ್ಪನೆಯಲ್ಲಿ ಅವನು ಮುಳುಗಿಹೋದ. ತನಗರಿವಿಲ್ಲದೆಯೇ ಜೋರಾಗಿ ಗಹಗಹಿಸಿ ನಕ್ಕುಬಿಟ್ಟ. ಅದನ್ನು ಕೇಳಿ ಅವನಿಗೇ ಗಾಬರಿಯಾಯಿತು. ತಕ್ಷಣ ಅದಕ್ಕೆ ಮಾರುತ್ತರ ಕೊಡುವಂತೆ ಪುಟ್ಟ ಮಗುವೊಂದರ ನಗುವಿನ ಸದ್ದು ಕೇಳಿಸಿತು. ಆ ನಗು ನೋವಿನಿಂದ ತುಂಬಿತ್ತೋ, ಆನಂದದಿಂದ ತುಂಬಿತ್ತೋ ಅವನಿಗೆ ತಿಳಿಯಲಿಲ್ಲ. ಅದು ಪರ್ಲ್‌ಳ ದನಿಯೆನ್ನುವುದು ಮಾತ್ರ ಅವನಿಗೆ ತಿಳಿಯಿತು.

'ಪರ್ಲ್! ಪುಟ್ಟ ಪರ್ಲ್!' ಎಂದು ಕೂಗಿಕೊಂಡ. ಅನಂತರ ಧ್ವನಿಯನ್ನು ಇಳಿಸಿ 'ಹೆಸ್ಟರ್! ಹೆಸ್ಟರ್ ಪ್ರೈನ್! ಅದು ನೀನೆ ಏನು?' ಎಂದು ಕೂಗಿದ.

'ಹೌದು ನಾನೆ! ನಾನು ಮತ್ತು ನಮ್ಮ ಪರ್ಲ್' ಎಂದಳು ಹೆಸ್ಟರ್ ಆಶ್ಚರ್ಯದಿಂದ. ಕಾಲುದಾರಿಯಿಂದ ಹತ್ತಿರ ಹತ್ತಿರ ಬಂದಳು.

'ಎಲ್ಲಿಂದ ಬರುತ್ತಿದ್ದೀಯೆ ಹೆಸ್ಟರ್? ಯಾರು ನಿನ್ನನ್ನು ಇಲ್ಲಿಗೆ ಕಳುಹಿಸಿದವರು?' ಎಂದ ಪಾದ್ರಿ.

'ಇಷ್ಟು ಹೊತ್ತೂ ಗವರ್ನರ್ ವಿನ್‌ತ್ರಾಪ್‌ರವರ ಮೃತ್ಯುಶಯ್ಯೆಯ ಬಳಿ ಇದ್ದೆ. ಶವವಸ್ತ್ರವನ್ನು ಹೊಲಿಯಲು ಅಳತೆ ತೆಗೆದುಕೊಂಡು ಮನೆಯ ಕಡೆ ಹೋಗುತ್ತಿದ್ದೇನೆ' ಎಂದಳು.

'ಹೆಸ್ಟರ್, ನೀನೂ ಮತ್ತು ಪರ್ಲ್ ಇಬ್ಬರೂ ಮೇಲಕ್ಕೆ ಬನ್ನಿ. ಹಿಂದೊಮ್ಮೆ ನೀವಿಬ್ಬರೇ ಇಲ್ಲಿ ನಿಂತಿದ್ದಿರಿ. ಆಗ ನಾನು ನಿಮ್ಮಿಬ್ಬರ ಸಂಗಡವಿರಲಿಲ್ಲ. ಮೇಲೆ ಬನ್ನಿ, ನಾವು ಮೂವರೂ ಒಟ್ಟಿಗೆ ನಿಂತು ಕೊಳ್ಳುವ!' ಎಂದ.

ಮೌನವಾಗಿ ಅವಳು ಮೆಟ್ಟಲನ್ನು ಹತ್ತಿ, ಮಗುವಿನ ಕೈ ಹಿಡಿದು ವೇದಿಕೆಯ ಮೇಲೆ ನಿಂತಳು. ಪಾದ್ರಿಯೂ ಮಗುವಿನ ಮತ್ತೊಂದು ಕೈಗಾಗಿ ತಡಕಾಡಿ ಅದನ್ನು ಹಿಡಿದುಕೊಂಡ. ಮಗುವಿನ ಕೈಹಿಡಿದ ತಕ್ಷಣ ಅವನಲ್ಲಿ ಹೊಸ ಜೀವನದ ಹೊಳೆ ನುಗ್ಗಿ ಬಂದಂತಾಯಿತು—ಅವನ ಎದೆ ಯಲ್ಲಿ ಝರಿಯಂತೆ ಹರಿಯತೊಡಗಿತು. ಆ ತಾಯಿ ಮಕ್ಕಳಿಬ್ಬರ ಶಾಖ ಅರ್ಧ ತಣ್ಣಗಾಗಿದ್ದ ಅವನ ನಾಳ ನಾಳಗಳಲ್ಲಿಯೂ ಹರಿದಂತೆ ಭಾಸವಾ

ಯಿತು. ಆ ಮೂವರಲ್ಲಿಯೂ ವಿದ್ಯುತ್ಸಂಚಾರವಾಗುತ್ತಿತ್ತು.

'ಪಾದ್ರಿ!' ಪರ್ಲ್ ಮೆಲ್ಲನೆ ಪಿಸುಗುಟ್ಟಿದಳು.

'ಏನು ಮಗು?' ಎಂದ ಡಿಮ್ಸ್‌ಡೇಲ್.

'ನಾಳೆ ಮಧ್ಯಾಹ್ನ ನಮ್ಮಿಬ್ಬರ ಜೊತೆಯಲ್ಲಿ ಹೀಗೆಯೇ ನಿಂತುಕೊಳ್ಳುತ್ತೀಯಾ?'

ಇಷ್ಟುದಿನ ಅವನನ್ನು ಕಾಡುತ್ತಿದ್ದ, ತನ್ನ ಗುಟ್ಟು ಬಯಲಾಗುವುದೆಂಬ ಭಯ ಮತ್ತೆ ಹಿಂದಿರುಗಿ ಅವನ ಹೃದಯ ನಡುಗಿತು. ಆದರೂ ಅವನಲ್ಲಿ ವಿಚಿತ್ರವಾದೊಂದು ಆನಂದ ಮೂಡಿಬಂದಿತ್ತು. 'ಇಲ್ಲ ಪರ್ಲ್. ನಾಳೆ ಬೇಡ ಮಗು. ಇನ್ನೊಂದುದಿನ ನಿಮ್ಮಿಬ್ಬರ ಜೊತೆಯಲ್ಲಿ ಖಂಡಿತವಾಗಿಯೂ ನಿಂತುಕೊಳ್ಳುತ್ತೇನೆ' ಎಂದ.

ಪರ್ಲ್ ನಗತೊಡಗಿದಳು. ಅವನು ಹಿಡಿದಿದ್ದ ಕೈಯನ್ನು ಸೆಳೆದುಕೊಳ್ಳಲು ಪ್ರಯತ್ನಿಸಿದಳು. ಆದರೆ ಪಾದ್ರಿ ಅದನ್ನು ಭದ್ರವಾಗಿ ಹಿಡಿದಿದ್ದ.

'ಇನ್ನೊಂದು ಕ್ಷಣ ಮಗು' ಎಂದ.

'ಹಾಗಾದರೆ ನಾಳೆ ಮಧ್ಯಾಹ್ನ ನಮ್ಮಿಬ್ಬರ ಕೈಹಿಡಿದುಕೊಂಡು ನಿಲ್ಲುತ್ತೇನೆಂದು ಭಾಷೆ ಕೊಡುತ್ತೀಯ?' ಎಂದಳು ಪರ್ಲ್.

'ನಾಳೆಬೇಡ ಪರ್ಲ್ ಇನ್ನೊಂದುದಿನ.'

'ಹಾಗಾದರೆ ಯಾವತ್ತು?'

'ದೇವರು ತೀರ್ಪುಕೊಡುವ ದಿನ. ನಾನೂ, ನೀನು ಮತ್ತು ನಿಮ್ಮ ಅಮ್ಮ ಮೂವರೂ ಕೈಹಿಡಿದು ಭಗವಂತನ ನ್ಯಾಯಾಲಯದಲ್ಲಿ ನಿಲ್ಲುವ. ಆದರೆ ಈ ಪ್ರಪಂಚದ ಬೆಳಕಿನಲ್ಲಿ ನಾವು ಮೂವರೂ ಒಟ್ಟಿಗಿರಕೂಡದು.' ಸತ್ಯವನ್ನು ಬೋಧಿಸುತ್ತಿರುವ ಅಭ್ಯಾಸ ಬಲ ಅವನ ಬಾಯಲ್ಲಿ ಹೀಗೆ ನುಡಿಸಿತು.

ಪರ್ಲ್ ಮತ್ತೆ ನಗತೊಡಗಿದಳು.

ಡಿಮ್ಸ್‌ಡೇಲ್ ಮತ್ತೆ ಮಾತನಾಡುವಷ್ಟರಲ್ಲಿಯೇ ಆಕಾಶದಾದ್ಯಂತವೂ ಬೆಳಕು ಮೂಡಿತು. ನಕ್ಷತ್ರವೊಂದು ಬಿದ್ದು ಗಾಳಿಯೊಳಗೆ ಸುಟ್ಟು ಕರಗಿ ಹೋಗುತ್ತಿದ್ದುದರ ಬೆಳಕು ಅದು. ಭೂಮಿಗೂ ಮೋಡಕ್ಕೂ ಮಧ್ಯೆ ಇದ್ದ ಜಾಗವನ್ನೆಲ್ಲ ಬೆಳಗುವಷ್ಟು ಪ್ರಕಾಶಮಾನವಾಗಿತ್ತು ಅದರ ಬೆಳಕು. ಮಧ್ಯಾಹ್ನದ ಬೆಳಕಿನಲ್ಲಿ ಕಾಣುವಷ್ಟು ಸ್ಪಷ್ಟವಾಗಿ ಆ ಬೀದಿಯೆಲ್ಲ ಕಾಣಿಸಿತು. ಆದರೆ ರೂಢಿಯಿಲ್ಲದ ಬೆಳಕಿನಲ್ಲಿ ಎಲ್ಲ ಭಯಂಕರವಾಗಿ ಕಂಡಿತು. ಅಲ್ಲಿದ್ದ ಪರಿಚಿತ ವಸ್ತುಗಳಿಗೆಲ್ಲ ಬೇರೆಯ ಅರ್ಥವನ್ನು ಕಲ್ಪಿಸಿದಂತೆ ಕಾಣು

ತ್ತಿತ್ತು. ಪಾದ್ರಿ ತನ್ನ ಎದೆಯ ಮೇಲೆ ಕೈಯಿಟ್ಟು ನಿಂತಿದ್ದ. ಹೆಸ್ಟರ್ ಪ್ರೈನ್‌ಳ ಎದೆಯಮೇಲಿದ್ದ ಕಸೂತಿಮಾಡಿದ ಅಕ್ಷರ ಮಿರ ಮಿರನೆ ಹೊಳೆಯುತ್ತಿತ್ತು. ಅವರಿಬ್ಬರ ಸಂಬಂಧವನ್ನು ಕಲ್ಪಿಸುವ ಸರಪಳಿಯ ಕೊಂಡಿಯಂತೆ, ತಾನೇ ಕಳಂಕದ ಚಿಹ್ನೆಯಾದ ಪುಟ್ಟಪರ್ಲ್ ನಿಂತಿದ್ದಳು. ತಮ್ಮೆಲ್ಲರ ರಹಸ್ಯನ್ನು ಬಯಲು ಮಾಡುತಿದ್ದ ಆ ವಿಚಿತ್ರವಾದ ಬೆಳಕಿನ ಮಧ್ಯಾಹ್ನದಲ್ಲಿ ಅವರು ಮೂವರೂ ನಿಂತಿದ್ದರು.

ಪುಟ್ಟ ಮಗು ಪರ್ಲ್‌ಳ ಕಣ್ಣಿನಲ್ಲಿ ಯಾವುದೋ ಮಂತ್ರಶಕ್ತಿ ಅಡಗಿತ್ತು. ಪಾದ್ರಿಯ ಕಡೆ ತಲೆಯೆತ್ತಿ ನೋಡಿದಾಗಲೆಲ್ಲ ತುಂಟ ನಗು ಬೀರುತ್ತಿರುತ್ತದೆ ಅದು. ಡಿಮ್ಸ್‌ಡೇಲನ ಹಿಡಿತದಿಂದ ಕೈಬಿಡಿಸಿಕೊಂಡು ರಸ್ತೆಯತ್ತ ಬೆಟ್ಟುಮಾಡಿ ತೋರಿಸಿದಳು. ಅವನು ಮಾತ್ರ ತನ್ನೆರಡು ಕೈಗಳಿಂದಲೂ ಎದೆಯನ್ನು ಅದುಮಿಟ್ಟುಕೊಂಡು ಶೂನ್ಯದತ್ತ ದಿಟ್ಟಿಸುತ್ತ ನಿಂತಿದ್ದ.

ಆಗಿನ ಕಾಲದಲ್ಲಿ, ನಕ್ಷತ್ರ ಬಿದ್ದರೆ ಅದು ಮುಂದಾಗುವುದನ್ನು ಸೂಚಿಸುತ್ತದೆ ಎಂದು ಜನ ಭಾವಿಸಿದ್ದರು. ಭರ್ಜಿಯಂತೆಯೋ, ಧಗಧಗಿಸುತ್ತಿರುವ ಕತ್ತಿಯಂತೆಯೋ, ಬಿಲ್ಲಿನಂತೆಯೋ ಅಥವಾ ಬಾಣಗಳಂತೆಯೋ ಕಂಡರೆ ಅದು ಇಂಡಿಯನ್ನರೊಡನೆ ಯುದ್ಧವನ್ನು ಸೂಚಿಸುತ್ತಿತ್ತು. ಕೆಂಪು ಕೆಂಡಗಳಂತೆ ಸುರಿದಲ್ಲಿ ಅದು ಸಾಂಕ್ರಾಮಿಕ ರೋಗಗಳನ್ನು ಸೂಚಿಸುತ್ತಿತ್ತು. ಈ ರೀತಿಯಾಗಿ ಮುನ್ನೆಚ್ಚರಿಕೆ ಕೊಡುವಿಕೆ ನ್ಯೂ ಇಂಗ್ಲೆಂಡಿನಲ್ಲಿ ಮೊದಲು ಜನ ನೆಲಸಿದಂದಿನಿಂದ, ಕ್ರಾಂತಿ ನಡೆಯುವವರೆಗೂ ನಡೆದುಬಂದಿತ್ತೆಂದು ನಾವು ನಂಬಬೇಕಾಗಿದೆ. ತುಂಬ ಜನ ಒಟ್ಟಿಗೆ ಅದನ್ನು ನೋಡುತ್ತಿದುದೇ ಅಪರೂಪ. ಯಾವನೋ ಒಬ್ಬ ನೋಡಿದನೆಂದು ಅದಕ್ಕೆ ಬಣ್ಣ ಕಟ್ಟಿ ಹೇಳಿದರೆ ಎಲ್ಲರೂ ನಂಬುತ್ತಿದ್ದರು. ನಾನಾ ದೇಶಗಳ ಅದೃಷ್ಟಗಳನ್ನು ಆಕಾಶದಲ್ಲಿ ಕಾಣಿಸಿಕೊಳ್ಳುತ್ತಿದ್ದ ವಿಚಿತ್ರವಾದ ಅರ್ಥವಿಲ್ಲದ ಆಕೃತಿಗಳು ಸೂಚಿಸುತ್ತಿದ್ದುವೆನ್ನುವುದು ಮಹತ್ತರವಾದ ಭಾವನೆಯೇ ಸರಿ. ಒಂದು ಜನಾಂಗದ ಅದೃಷ್ಟವನ್ನು ಆಕಾಶವನ್ನೆಲ್ಲಾ ತುಂಬುವ ಒಂದು ಗೀಚಿನಲ್ಲಿ ತೋರಿಸುವುದು ಅಷ್ಟೇನೂ ವಿಶೇಷವಾಗಿರಲಿಲ್ಲ. ಬಾಲ್ಯಾವಸ್ಥೆಯಲ್ಲಿದ್ದ ತಮ್ಮ ರಾಷ್ಟ್ರವನ್ನು ಬಹಳ ಜಾಗರೂಕತೆಯಿಂದಲೂ ವಿಶ್ವಾಸದಿಂದಲೂ ಕಾಯುತ್ತಿರುವ ದೇವತೆಗಳು ಈ ರೀತಿಯ ಮುನ್ನೆಚ್ಚರಿಕೆಗಳನ್ನು ಕೊಡುತ್ತಿರುವರೆಂದು ನಮ್ಮ ಪೂರ್ವಜರು ಭಾವಿಸಿದ್ದರೂ ತನಗೆ ಮಾತ್ರ ಸಂಬಂಧಿಸಿದಂತೆ ಕಂಡು ಬಂದ ಮುನ್ಸೂಚನೆಯನ್ನು ಒಬ್ಬ ವ್ಯಕ್ತಿ ಕಂಡರೆ ಅದಕ್ಕೇನೆಂದು ಹೇಳೋಣ ! ಹಾಗೇನಾದರೂ ಒಬ್ಬ ವ್ಯಕ್ತಿ ಅದನ್ನು ಕಂಡಿದ್ದರೆ

ಅವನಿಗೆ ಬುದ್ಧಿ ಸ್ಥಿಮಿತವಾಗಿರಲಿಕ್ಕಿಲ್ಲ. ಸದಾ ಕಾಲವೂ ಕೊರಗುತ್ತಾ ತೀವ್ರವಾದ ಯಾತನೆಗೆ ಸಿಕ್ಕಿ ನರಳುತ್ತಿರುವವನಿಗೆ ಈ ವಿಶಾಲವಾದ ಪ್ರಕೃತಿಯಲ್ಲಿರುವ ಪ್ರತಿಯೊಂದೂ ತನಗೆ ಸಂಬಂಧಪಟ್ಟದ್ದೇ ಎನಿಸುತ್ತದೆ. ಬರಬರುತ್ತಾ ಈ ಜಗತ್ತೇ ತನ್ನ ಆತ್ಮ ಚರಿತ್ರೆಯ ಒಂದು ಪುಟವಾಗಿ ಪರಿಣಮಿಸುತ್ತದೆ.

ಡಿಮ್ಸ್‌ಡೇಲನ ಮನೋರೋಗದ ಪರಿಣಾಮವಾಗಿಯೋ ಏನೋ, ಅವನು ಶೂನ್ಯದತ್ತ ನೋಡುತ್ತಿದ್ದಾಗ, ಅಲ್ಲಿ ದೊಡ್ಡದೊಂದು ಅಕ್ಷರ A—(ಎ)—ಕೆಂಪು ಬಣ್ಣದಿಂದ ಕೂಡಿ ಕಾಣಿಸಿಕೊಂಡಿತು. ಆ ತಾರೆ ಬೀಳುತ್ತಾ ಮೋಡದ ಮರೆಯಲ್ಲಿ ಮುಸುಕಾಗಿ ಉರಿದಿರಬಹುದಾದರೂ ಅವನ ಹುಳಿ ಮನಸ್ಸಿನ ಕಲ್ಪನೆಯ ಸ್ಪಷ್ಟ ಆಕಾರ ಅದಕ್ಕಿರಲಿಲ್ಲ. ಅಷ್ಟೇ ಅಲ್ಲ, ಇನ್ನಾವನಾದರೂ ಅದನ್ನು ನೋಡಿದ್ದರೆ ಅವನಿಗೇ ಚಿಹ್ನೆ ಕಾಣಿಸಬಹುದಾಗಿತ್ತು.

ಆ ಕ್ಷಣದಲ್ಲಿ ಡಿಮ್ಸ್‌ಡೇಲನ ಮನಸ್ಥಿತಿಯ ವೈಶಿಷ್ಟ್ಯವೇ ವಿಚಿತ್ರವಾಗಿತ್ತು. ಅವನು ಶೂನ್ಯದತ್ತ ದಿಟ್ಟಿಸುತ್ತ ನಿಂತಿದ್ದಷ್ಟು ಕಾಲವೂ, ವಧ್ಯವೇದಿಕೆಗೆ ಹತ್ತಿರದಲ್ಲೇ ನಿಂತಿದ್ದ ರೋಜರ್ ಚಿಲಿಂಗ್‌ವರ್ತ್‌ನ ಕಡೆಗೆ ಪರ್ಲ್ ಬೆಟ್ಟು ಮಾಡಿ ತೋರಿಸುತ್ತಿರುವುದರ ಅರಿವೂ ಸ್ಪಷ್ಟವಾಗಿತ್ತು. ಆ ಅದ್ಭುತವಾದ ಅಕ್ಷರವನ್ನು ನೋಡಿದ್ದ ದೃಷ್ಟಿಯಲ್ಲೇ ಅವನನ್ನೂ ಪಾದ್ರಿ ನೋಡುತ್ತಿರುವಂತೆ ಕಾಣುತ್ತಿತ್ತು. ಆ ತಾರೆಯ ಬೆಳಕು ಅವನ ಮೇಲೂ ಬಿದ್ದು ಅವನ ಮುಖದ ಚರ್ಯೆಯೇ ಬೇರೆ ವಿಧವಾಗಿ ಕಾಣುವಂತೆ ಮಾಡಿತ್ತು ಅಥವಾ ಪಾದ್ರಿಯ ಸ್ಥಿತಿಯನ್ನು ಕಂಡು ತನಗಾದ ಹಿಗ್ಗನ್ನು ತೋರ್ಪಡಿಸದೆ ಮುಚ್ಚಿಟ್ಟುಕೊಳ್ಳುವಷ್ಟು ಅವನು ಜಾಗರೂಕನಾಗಿರಲಿಲ್ಲ. ಅಷ್ಟು ಸ್ಪಷ್ಟವಾಗಿತ್ತು ಅವನ ಮುಖ ಚರ್ಯೆ; ಅಥವಾ ಪಾದ್ರಿಯ ಚಿತ್ತ ಫಲಕದ ಮೇಲೆ ಆ ನೋಟ ಮುದ್ರೆಯೊತ್ತಿದಂತೆ ನಿಂತಿತು. ಏಕೆಂದರೆ ತಾರೆಯ ಬೆಳಕು ಮಾಯವಾದ ಮೇಲೆ ಆ ಗಾಢವಾದ ಕತ್ತಲಲ್ಲೂ ಅವನಿಗೆ ಅದೇ ನೋಟ ಕಾಣುತ್ತಿತ್ತು.

ಡಿಮ್ಸ್‌ಡೇಲ್ ಗಾಬರಿಗೊಂಡು ಒಮ್ಮೆಗೇ 'ಆ ಮನುಷ್ಯ ಯಾರು ಹೆಸ್ಟರ್. ನನಗೆ ನಡುಕವುಂಟಾಗುತ್ತಿದೆ! ಅವನು ನಿನಗೆ ಗೊತ್ತೆ? ಅವನನ್ನು ನಾನು ದ್ವೇಷಿಸುತ್ತೇನೆ!' ಎಂದ.

ಹೆಸ್ಟರ್ ಪ್ರೈನ್ ತಾನು ಪ್ರಮಾಣ ಮಾಡಿದ್ದುದನ್ನು ನೆನಪಿಗೆ ತಂದುಕೊಂಡು, ಮೌನವಾಗಿದ್ದಳು.

ಪಾದ್ರಿ ಮತ್ತೆ ಹೇಳತೊಡಗಿದ. 'ನಾನು ಹೇಳುವುದನ್ನು ಕೇಳು. ಅವನನ್ನು ಕಂಡರೆ ನನ್ನ ಗುಂಡಿಗೆ ನಡುಗುತ್ತದೆ. ಅವನು ಯಾರು ? ಯಾರವನು ? ನೀನು ಹೇಳಲಾರೆಯ ? ಅವನನ್ನು ನೋಡಿದರೆ ನನಗೆ ಹೇಳಲಾರದಂಥ ಭಯವಾಗುತ್ತದೆ !'

'ಅವನು ಯಾರೆಂದು ನಾನು ಹೇಳಬಲ್ಲೆ. ಪಾದ್ರಿ' ಎಂದಳು ಪುಟ್ಟ ಪರ್ಲ್.

'ಬೇಗ ಹೇಳು ಮಗು. ಬೇಗ !—ಆದರೆ ಮೆಲ್ಲನೆ ಪಿಸುಮಾತಿನಲ್ಲಿ ಹೇಳು' ಎಂದು ಬಗ್ಗಿ ಅವಳ ತುಟಿಯ ಬಳಿ ಕಿವಿಯೊಡ್ಡಿ ನಿಂತ.

ಪರ್ಲ್ ಅವನ ಕಿವಿಯಲ್ಲೇನೋ ಗೊಣಗುಟ್ಟಿದಳು. ಅದು ಮಾನವ ಭಾಷೆಯಂತೆ ಕಂಡರೂ, ಮಕ್ಕಳು ಆಟಕ್ಕಾಗಿ ಗುಜು ಗುಜು ಶಬ್ದ ಮಾಡು ವಂತಿತ್ತು. ರೋಜರ್ ಚಿಲಿಂಗ್‌ವರ್ತ್‌ನ ವಿಷಯವಾಗಿ ಪರ್ಲ್ ಏನೇ ಪಿಸುಗುಟ್ಟಿದರೂ, ಆ ಭಾಷೆ ವಿದ್ವಾಂಸನಾದ ಡಿಮ್ಸ್‌ಡೇಲನನಿಗೂ ಅರ್ಥ ವಾಗದೆ, ಅವನ ಗಾಬರಿ ಮತ್ತಷ್ಟು ಹೆಚ್ಚಿತು. ಅನಂತರ ಆ ತುಂಟ ಮಗು ಜೋರಾಗಿ ನಗತೊಡಗಿದಳು.

'ನನನ್ನು ಅಣಕಿಸುತ್ತಿದ್ದೀಯೇನು ?' ಪಾದ್ರಿ ಕೇಳಿದ.

'ನಿನಗೆ ಧೈರ್ಯವಿಲ್ಲ ! ನೀನು ಸತ್ಯವಂತನಲ್ಲ ! ನಾಳೆ ಮಧ್ಯಾಹ್ನ ನನ್ನ ಮತ್ತು ನಮ್ಮ ಅಮ್ಮನ ಕೈ ಹಿಡಿದುಕೊಳ್ಳುತ್ತೇನೆಂದು ನೀನು ಮಾತು ಕೊಡಲಿಲ್ಲ !' ಎಂದು ಉತ್ತರ ಕೊಟ್ಟಿತು ಆ ಮಗು.

ವೈದ್ಯ ಈ ವೇಳೆಗೆ ವೇದಿಕೆಯ ಕೆಳ ಮೆಟ್ಟಿಲ ಬಳಿಗೆ ಬಂದಿದ್ದ. 'ಸ್ವಾಮಿ, ಪವಿತ್ರರಾದ ಮಾಸ್ಟರ್ ಡಿಮ್ಸ್‌ಡೇಲರೇ, ನೀವೇ ಏನು ? ಓಹೋ ಹೌದಲ್ಲ ! ನೋಡಿ, ಸದಾ ಪುಸ್ತಕಗಳಲ್ಲಿಯೇ ಮುಳುಗಿ ಹೋಗಿ ರುವ ನಮ್ಮಂತಹ ವಿದ್ವಾಂಸರನ್ನು ಯಾರಾದರೂ ಜಾಗರೂಕರಾಗಿ ನೋಡಿ ಕೊಳ್ಳಬೇಕು! ಎಚ್ಚರವಾದಾಗ ಕನಸು ಕಾಣುತ್ತಿರುತ್ತೇವೆ, ನಿದ್ದೆಯಲ್ಲಿ ಎದ್ದು ಓಡಾಡುತ್ತೇವೆ! ಬನ್ನಿ ಸ್ವಾಮಿ. ಮನೆಗೆ ಕರೆದುಕೊಂಡುಹೋಗು ತ್ತೇನೆ ಬನ್ನಿ !' ಎಂದ.

'ನಾನು ಇಲ್ಲಿದ್ದೇನೆಂದು ನಿಮಗೆ ಹೇಗೆ ತಿಳಿಯಿತು ?' ಹೆದರುತ್ತಾ ಕೇಳಿದ ಪಾದ್ರಿ.

'ದಿಟವಾಗಿಯೂ ನನಗೆ ಈ ವಿಷಯ ತಿಳಿದಿರಲಿಲ್ಲ. ಅರ್ಧರಾತ್ರಿಯ ವರೆಗೂ ಗವರ್ನರ್ ವಿನ್‌ತ್ರಾಪ್‌ರಿಗೆ ನನ್ನ ಕೈಲಾದ ಚಿಕಿತ್ಸೆಯನ್ನೆಲ್ಲಾ ಮಾಡುತ್ತಾ ಕುಳಿತಿದ್ದೆ. ಅವರು ಬೇರೆಯ ಉತ್ತಮವಾದ ಪ್ರಪಂಚದಲ್ಲಿ

ರುವ ಮನೆಗೆ ಹೊರಟು ಹೋದರು. ನಾನು ನಮ್ಮ ಮನೆಯ ಕಡೆ ಹೊರಟಿದ್ದೆ. ಆ ವಿಚಿತ್ರವಾದ ಬೆಳಕಿನಲ್ಲಿ ನೀವು ಕಾಣಿಸಿದಿರಿ. ದಯವಿಟ್ಟು ನನ್ನ ಜೊತೆಯಲ್ಲಿ ಬನ್ನಿ ಸ್ವಾಮಿ. ಇಲ್ಲದಿದ್ದರೆ ನಾಳೆ ನೀವು ಸಬ್ಬತ್ ಕೆಲಸಗಳನ್ನು ಮಾಡುವುದಕ್ಕೆ ಕೈಲಾಗುವುದಿಲ್ಲ. ಆಹ! ಈ ಹಾಳು ಪುಸ್ತಕಗಳು ಹೇಗೆ ತಲೆ ಕೆಡಿಸುತ್ತವೆಯೆನ್ನುವುದನ್ನು ನೋಡಿದಿರೋ! ನೀವು ಓದುವುದನ್ನು ಇನ್ನು ಮೇಲೆ ಕಡಮೆ ಮಾಡಬೇಕು ಸ್ವಾಮಿ. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳದಿದ್ದರೆ ನಿಮ್ಮ ತಿರುಗಾಟಗಳು ಹೆಚ್ಚಿಹೋಗಿಬಿಡುತ್ತವೆ' ಎಂದು ಜವಾಬು ಕೊಟ್ಟ ರೋಜರ್ ಚಿಲಿಂಗ್‌ವರ್ತ್.

'ಸರಿ, ನಿಮ್ಮ ಸಂಗಡ ಮನೆಗೆ ಬರುತ್ತೇನೆ' ಎಂದ ಡಿಮ್ಸ್‌ಡೇಲ್. ಯಾವುದೋ ದುಃಸ್ವಪ್ನದಿಂದ ಎಚ್ಚೆತ್ತವನಂತೆ ನಿತ್ರಾಣನಾಗಿ, ವೈದ್ಯನ ಮಾತಿಗೆ ಒಡಂಬಟ್ಟು ಅವನ ಹಿಂದೆ ಹೊರಟುಹೋದ.

ಮಾರನೆಯ ಬೆಳಿಗ್ಗೆ ಸಬ್ಬತ್ ದಿನಾಚರಣೆ. ಆ ದಿನ ಅವನು ಉಪದೇಶ ಮಾಡುತ್ತಾ ಮಾಡಿದ ಭಾಷಣ, ಅವನ ಇದುವರೆಗಿನ ಎಲ್ಲ ಭಾಷಣಗಳಿಗಿಂತ ಅತ್ಯಂತ ಅಮೋಘವಾಗಿ, ಭಕ್ತಿಪೂರ್ವಕವಾಗಿ, ಅಪೂರ್ವವಾಗಿತ್ತಂತೆ. ಆ ಭಾಷಣವನ್ನು ಕೇಳಿದ ಅನೇಕ ಆತ್ಮಗಳು ಸತ್ಯವನ್ನು ಕಂಡು, ತಾವು ಬದುಕಿರುವವರೆಗೂ ರೆವರೆಂಡ್ ಡಿಮ್ಸ್‌ಡೇಲರಿಗೆ ತಮ್ಮ ಭಕ್ತಿಪೂರ್ವಕವಾದ ಕೃತಜ್ಞತೆಯನ್ನು ಸೂಚಿಸಲು ಪ್ರತಿಜ್ಞೆ ಮಾಡಿದುವಂತೆ. ಆದರೆ ಪಾದ್ರಿ ಪವಿತ್ರವಾದ ಆ ವೇದಿಕೆಯ ಮೆಟ್ಟಲಿಳಿದು ಬರುತ್ತಿರುವಾಗ ಚರ್ಚಿನ ಮುದಿಸೇವಕನೊಬ್ಬ ಕರಿಯ ಕೈಚೀಲವೊಂದನ್ನು ಅವನ ಮುಂದೆ ಹಿಡಿದ. ಪಾದ್ರಿ ಅದು ತನ್ನದೇ ಎಂದು ಗುರುತುಹಿಡಿದ.

'ವಧ್ಯವೇದಿಕೆಯ ಮೇಲೆ ಕೈಚೀಲ ಬಿದ್ದಿತ್ತು. ಈ ಬೆಳಗ್ಗೆ ಸಿಕ್ಕಿತು. ಮಹಾನುಭಾವರಾದ ತಮ್ಮನ್ನು ಅಪಹಾಸ್ಯ ಮಾಡಲು ಸೈತಾನ ಅದನ್ನು ಅಲ್ಲಿ ಹಾಕಿರಬೇಕು. ಅವನು ಯಾವಾಗಿನಂತೆಯೇ ಮೂರ್ಖನೇ ಸರಿ. ಪವಿತ್ರವಾದ ಕೈಗೆ ಕೈಚೀಲದ ಅಗತ್ಯವೇ ಇಲ್ಲ' ಎಂದ ಸೇವಕ.

ಪಾದ್ರಿಗೆ ಸ್ವಲ್ಪ ಗಾಬರಿಯಾಯಿತು. ಹಿಂದಿನ ರಾತ್ರಿಯ ಘಟನೆಗಳೆಲ್ಲ ಅವನ ಸ್ಮೃತಿಪಟಲದ ಮೇಲೆ ಹಾದು ಹೋಯಿತು. ಅವನ ಜ್ಞಾಪಕ ಶಕ್ತಿಯೂ ಕೊಂಚ ಹೆಚ್ಚು ಕಡಮೆಯಾಗಿತ್ತು. 'ನಿನ್ನಿಂದ ಬಹಳ ಉಪಕಾರವಾಯಿತಯ್ಯ. ಕೈ ಚೀಲ ನನ್ನದೆಂದೇ ಕಾಣುತ್ತದೆ' ಎಂದ.

'ಸೈತಾನನು ಈ ಕೈಚೀಲವನ್ನು ಕದ್ದುದರಿಂದ, ಸ್ವಾಮಿಯವರು ಇನ್ನು ಮೇಲೆ ಕೈಚೀಲವಿಲ್ಲದೆಯೇ ಅವನನ್ನು ತರಾಟೆಗೆ ತೆಗೆದುಕೊಳ್ಳ

ಬೇಕು. ನೆನ್ನೆ ರಾತ್ರಿ ಬಿದ್ದ ನಕ್ಷತ್ರದ ವಿಚಾರ ಸ್ವಾಮಿಯವರಿಗೆ ತಿಳಿಯಿತೇನು? ಒಂದು ಭಾರಿ ಕೆಂಪು ಅಕ್ಷರ ಆಕಾಶದಲ್ಲಿ ಕಾಣಿಸಿಕೊಂಡಿತಂತೆ. ಅದರ ಆಕಾರ 'A' ಎಂಬಂತಿತ್ತಂತೆ. ಅದಕ್ಕೆ ನಾವೆಲ್ಲ ಏಂಜೆಲ್ (ದೇವತೆ) ಎಂದು ವ್ಯಾಖ್ಯಾನ ಮಾಡಿದ್ದೇವೆ. ಏಕೆಂದರೆ ನಿನ್ನೆ ರಾತ್ರಿ ನಮ್ಮ ಗವರ್ನರ್ ವಿನ್‌ತ್ರಾಪ್‌ರವರು ಒಬ್ಬ ದೇವತೆಯಾದರೂ ಸೋಡಿ. ಅವರ ಸಂದೇಶವೇ ಇದೆನ್ನುವುದರಲ್ಲಿ ಅನುಮಾನವೇ ಇಲ್ಲ' ಎಂದ ಸೇವಕ.

'ಇಲ್ಲ. ಆ ವಿಚಾರ ನನಗೆ ತಿಳಿಯದು' ಎಂದು ಉತ್ತರ ಕೊಟ್ಟ ಡಿಮ್ಸ್‌ಡೇಲ್.

೧೩

ಹೆಸ್ಟರ್ ಪ್ರೈನ್‌ಳಿಗೆ ಅಂದು ರಾತ್ರಿ ಪಾದ್ರಿಯ ಸ್ಥಿತಿಯನ್ನು ಕಂಡು ಬಹಳ ಘಾಬರಿಯಾಯಿತು. ಅವನ ಮನಸ್ಸು ತುಂಬ ಹದಗೆಟ್ಟಿತ್ತು. ಅವನ ಬುದ್ಧಿ ಶಕ್ತಿಯೇ ಕಂದಿಹೋಗಿತ್ತು. ಎಲ್ಲರಿಂದಲೂ ರಹಸ್ಯವಾಗಿದ್ದ ಇದುವರೆಗಿನ ಸಂಗತಿಗಳು ಅವಳಿಗೆ ತಿಳಿದಿದ್ದುದರಿಂದ, ಸಹಜವಾಗಿ ಅವನ ಎದೆಯಲ್ಲಿ ಕೊರೆಯುತ್ತಿರುವ ಯಾತನೆಯ ಜೊತೆಗೆ, ಬೇರೆ ಯಾವುದೋ ಒಂದು ದುಷ್ಟ ಶಕ್ತಿಯ ಕೈವಾಡ ಡಿಮ್ಸ್‌ಡೇಲನ ಆರೋಗ್ಯವನ್ನೂ ಮತ್ತು ಮನಶ್ಶಾಂತಿಯನ್ನೂ ಹಾಳು ಮಾಡುತ್ತಿರುವುದೆಂದು ಹೆಸ್ಟರ್ ತಕ್ಷಣ ಅರಿತು ಕೊಂಡಳು ಕೆಳಗೆ ಬಿದ್ದಿರುವ ಈ ಮನುಷ್ಯ ಮೊದಲು ಯಾವ ರೀತಿಯಿದ್ದನೆಂಬುದು ನೆನಪಿಗೆ ಬಂದು ಅವಳ ಎದೆ ನಡುಗಿತು. ತನ್ನ ಶತ್ರುವನ್ನು ಕಂಡುಕೊಂಡ ಕೂಡಲೇ, ಲೋಕವೇ ದೂರವಿಟ್ಟಿದ್ದ ಅವಳನ್ನು ತನ್ನ ಸಹಾಯಕ್ಕಾಗಿ ಬೇಡಿದ್ದ. ಅವಳ ಸಹಾಯವನ್ನು ಬಯಸುವ ಹಕ್ಕೂ ಅವನಿಗಿರುವುದೆಂದು ನಿರ್ಧರಿಸಿದಳು. ಸಮಾಜದಿಂದಲೇ ಒಂಟಿಯಾಗಿ ದೂರವಿದ್ದುದರಿಂದ ನ್ಯಾಯಾನ್ಯಾಯಗಳ ತಿಳುವಳಿಕೆ ಅವಳಿಗೆ ಅಷ್ಟಿಲ್ಲದಿದ್ದರೂ, ಪಾದ್ರಿಯ ಯೋಗಕ್ಷೇಮ ತನ್ನ ಹೆಗಲ ಮೇಲೆ ಬಿದ್ದಿದೆಯೇ ಹೊರತು ಅದು ಪ್ರಪಂಚದಲ್ಲಿ ಇನ್ನಾರಿಗೂ ಸೇರಿದ್ದಲ್ಲ ಎಂಬುದನ್ನು ಹೆಸ್ಟರ್ ಮನಗಂಡಳು. ಅವಳಿಗೂ ಮಾನವ ವರ್ಗಕ್ಕೂ ಇದ್ದ ಸಂಬಂಧ ಪೂರ್ಣವಾಗಿ ಕಡಿದುಹೋಗಿತ್ತು. ಅಪರಾಧದ ಕಬ್ಬಿಣದ ಸಂಕೋಲೆ ಮುರಿಯಲಾಗದಂತೆ ಅವರಿಬ್ಬರನ್ನೂ ಬಂಧಿಸಿತ್ತು. ಎಲ್ಲ ಸಂಬಂಧಗಳಂತೆಯೇ ತನ್ನ ಕರ್ತವ್ಯಗಳನ್ನೂ ತಂದೊಡ್ಡಿತ್ತು.

ಕಳಂಕ ಹೊತ್ತ ಮೊದಲ ದಿನಗಳಲ್ಲಿದ್ದ ಸ್ಥಿತಿಯಲ್ಲಿಯೇ ಈಗಲೂ

ಇರಲಿಲ್ಲ ಹೆಸ್ಟರ್ ಪ್ರೈನ್. ವರ್ಷಗಳು ಉರುಳಿ ಹೋಗಿದ್ದವು. ಪರ್ಲ್‌ಗೆ ಈಗ ಏಳು ವರ್ಷ. ಮಿರುಗುವ ಕಸೂತಿ ಕೆಲಸ ಮಾಡಿದ ಕಂಪು ಅಕ್ಷರ ಹೊತ್ತ ಹೆಸ್ಟರ್ ಪ್ರೈನ್ ಈಗ ಊರಿನ ಜನಕ್ಕೆ ಚಿರಪರಿಚಿತ ವಸ್ತುವಾಗಿದ್ದಳು. ಎಲ್ಲರಲ್ಲೂ ಅವಳಲ್ಲಿ ಒಂದು ವಿಧವಾದ ಮರ್ಯಾದೆ ಬೆಳೆದು ಬಂದಿತ್ತು. ಮಾನವ ಸ್ವಭಾವವೇ ಹಾಗೆ-ಸ್ವಾರ್ಥ ಒಂದನ್ನು ಬಿಟ್ಟರೆ ದ್ವೇಷಿಸುವುದಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತದೆ. ಮತ್ತೆ ಹಳೆಯ ಕತೆಯನ್ನು ಕಲಕಿ ಕೆಣಕದಿದ್ದಲ್ಲಿ ದ್ವೇಷವೂ ನಿಧಾನವಾಗಿ ಪ್ರೀತಿಗೆ ತಿರುಗುತ್ತದೆ. ಹೆಸ್ಟರ್ ಪ್ರೈನ್ ಯಾರೊಡನೆಯೂ ಜಗಳವಾಡುತ್ತಿರಲಿಲ್ಲ. ಅವರು ಕೊಟ್ಟ ಕಷ್ಟವನ್ನೆಲ್ಲಾ ತುಟಿಪಿಟಕ್ಕೆನ್ನದೆ ಮೂಕಳಾಗಿ ಅನುಭವಿಸುತ್ತಾಳೆ. ಇದರ ಜೊತೆಗೆ ಅವಳನ್ನು ದೂರವಿಟ್ಟ ಮೇಲೂ, ಅವಳು ಪವಿತ್ರವಾದ ಜೀವನ ನಡೆಸಿಕೊಂಡು ಹೋಗುತ್ತಿರುವುದು ಎಲ್ಲರಿಗೂ ಅವಳಲ್ಲಿ ಗೌರವವನ್ನುಂಟು ಮಾಡಿತ್ತು.

ಹೆಸ್ಟರ್ ಬಡಿಯ ಗಾಳಿಯ ಸೇವನೆ ಮತ್ತು ಪರ್ಲಳಿಗಾಗಿ ನ್ಯಾಯ ಮಾರ್ಗದಲ್ಲಿ ಸಂಪಾದಿಸಬೇಕಾದ ರೊಟ್ಟಿ—ಈ ಎರಡು ವಿಷಯಗಳ ವಿನಃ ಪ್ರಪಂಚದ ಇನ್ನಾವ ಹಕ್ಕು ಬಾಧ್ಯತೆಗಳನ್ನೂ ಗಣನೆಗೆ ತಂದುಕೊಳ್ಳದಿದ್ದರೂ ಸಮಯ ಬಿದ್ದಾಗ ತನಗೆ ಸಹಾಯ ಮಾಡಿದ ಮನುಷ್ಯರಿಗೆ ತಂಗಿಯಂತೆ ಕೃತಜ್ಞತೆಯನ್ನು ಸೂಚಿಸಲು ತಡಮಾಡುತ್ತಿರಲಿಲ್ಲ. ಬಡತನದ ಆಗತ್ಯಗಳಿಗೆ ತನ್ನ ಕೈಲಾದಷ್ಟು ನೆರವು ನೀಡಲು ಮೊದಲು ಮುಂದೆ ಬರುತ್ತಿದ್ದಳು. ತನ್ನ ಸಮಾಜಕ್ಕೇ ಆಗಲಿ, ಇಲ್ಲವೇ ಯಾವೊಬ್ಬವ್ಯಕ್ತಿಗೇ ಆಗಲಿ ಏನು ಕಷ್ಟ ಬಂದರೂ ಈ ಸಮಾಜ ಬಾಹಿರಳು ಸಹಾಯಕ್ಕೆಂದು ಮುಂದೆ ಬರುತ್ತಿದ್ದಳು. ಈ ಸಮಯದಲ್ಲಿ ಕೇವಲ ಅವರ ಅತಿಥಿಯಂತಿರದೆ, ಕಷ್ಟಕಾರ್ಪಣ್ಯ ಜೀವಿಗಳ ಮನೆಯವಳಂತೆಯೇ ವರ್ತಿಸುತ್ತಿದ್ದಳು. ಈ ಅಂಧಕಾರದಲ್ಲೇ ತನ್ನ ಮತ್ತು ಸಮಾಜದ ಸಂಬಂಧವನ್ನು ಕಂಡುಕೊಳ್ಳುತ್ತಿದ್ದಳು. ಈ ಕತ್ತಲ ಮಧ್ಯೆ ತನ್ನ ಎದೆಯ ಮೇಲಿನ ಕಸೂತಿ ಮಾಡಿದ ಅಕ್ಷರ ಹೊಳೆಯುತ್ತಿದ್ದು ಅವಳ ಮನಸ್ಸಿಗೆ ಶಾಂತಿ ಬೀರುವುದಾಗಿತ್ತು. ಆದರೆ ಅಲ್ಲಿಂದ ಹೊರಗೆ ಈ ಅಕ್ಷರ ಸಾಯುವವರ ಮುಂದೆ ತೂಗಾಡುತ್ತಿರುವ ದೀಪದಂತಿತ್ತು. ಕಾಲನ ಕರೆ ಬಂದಾಗ ಈ ಅಕ್ಷರ ತನ್ನ ಪ್ರತಿಭೆಯಿಂದ ಆ ವ್ಯಕ್ತಿಗೆ ತನ್ನ ನಿಜಸ್ಥಿತಿಯ ಅರಿವನ್ನುಂಟುಮಾಡಿಸುತ್ತಿತ್ತು. ಈ ಸಂದರ್ಭಗಳಲ್ಲಿ ಹೆಸ್ಟರಳ ವ್ಯಕ್ತಿತ್ವ ಮೃದುವಾಗಿ ಮೃತ್ಯುಶಯ್ಯೆಯಲ್ಲಿರುವವರ ಸೇವೆಯನ್ನು ಬೇಸರವಿಲ್ಲದೆ ಮಾಡುತ್ತಿದ್ದಳು. ಆ

ಕಳಂಕಪೂರಿತ ಕೆಂಪು ಅಕ್ಷರವನ್ನು ಹೊತ್ತಿರುವ ಅವಳ ಹೃದಯ, ಅಭ್ಯರ್ಥಿಗಳಿಗೆ ಸುಪ್ಪತ್ತಿಗೆಯ ದಿಂಬಿನಂತಿತ್ತು. ಅನೇಕರು–ಈ ವಿಶಾಲ ಹೃದಯದ ನೆರವು ಪಡೆದ ಅನೇಕರು–ಆ ಕೆಂಪು ಅಕ್ಷರ ಅವಳ ಎದೆಯು ಮೇಲೆ ಬಂದ ಕಾರಣವನ್ನೇ ಮರೆತಿದ್ದರು. ಅಂತವರು ಆ 'A' ಅಕ್ಷರಕ್ಕೆ **Able** (ಸಾಮರ್ಥ್ಯ ವುಳ್ಳವಳು) ಎಂದರ್ಥ ಮಾಡುವಷ್ಟರ ಮಟ್ಟಿಗೆ ಹೆಸ್ಟರಳ ಗೌರವ ಏರಿತ್ತು.

ಎಲ್ಲಿ ಕಷ್ಟದ ಕರಾಳತೆ ಇರುತ್ತಿತ್ತೋ ಅಲ್ಲಿ ಹೆಸ್ಟರಳ ಇರುವು ಕಾಣುತ್ತಿತ್ತು. ಈ ಕತ್ತಲೆ ಕಳೆದು ಬೆಳಕು ಮೂಡುತ್ತಿದಂತೆ ಅವಳ ಇರುವು ಕಾಣುತ್ತಿರಲಿಲ್ಲ. ಅವಳ ನೆರಳೂ ಆ ಹೊಸ್ತಿಲಾಚೆ ತೇಲಿ ಹೋಗುತ್ತಿತ್ತು

ಹೆಸ್ಟರಳ ಒಳ್ಳೆಯ ಗುಣಗಳನ್ನು, ಆ ಪ್ರದೇಶದ ನಾಯಕರು, ಬುದ್ಧಿವಂತರು ಮತ್ತು ವಿದ್ಯಾವಂತರುಗಳು ಸಾಮಾನ್ಯ ಜನರಷ್ಟು ಬೇಗ ಒಪ್ಪಿಕೊಳ್ಳಲಿಲ್ಲ. ಅದಕ್ಕೆ ಕಾರಣ, ಜನ ಸಾಮಾನ್ಯಕ್ಕೂ ತಮಗೂ ಇದ್ದ ಅಂತರ ಮತ್ತು ಬೇಧ ಭಾವನೆಗಳೇ ಆಗಿದ್ದವು. ಆದರೆ ದಿನಕ್ರಮೇಣ ಈ ಜನಗಳ ಗಂಟಿಕ್ಕಿದ ಹುಬ್ಬುಗಳೂ ಸಡಿಲವಾಗುತ್ತಾ ಬಂದಿತ್ತು. ಇದರಿಂದಾಗಿ ಈ ಕೆಂಪು ಅಕ್ಷರವನ್ನು ಅವಳ ಪಾಪದ ಪರಿಣಾಮವೆಂದೆಣಿಸದೆ ಅವಳ ಸೇವೆ ಮತ್ತು ತಪಸ್ಸುಗಳ ಸಂಕೇತವೆಂದೆನ್ನುಕೊಳ್ಳುವಂತಾಯಿತು. ಆ ಊರಿನವರೆಲ್ಲಾ–'ಅಲ್ಲಿರುವ ಕೆಂಪು ಅಕ್ಷರ ಹೊಲೆದಿರುವ ಹೆಂಗಸನ್ನು ನೋಡಿದಿರಾ? ಆಕೆ ಈ ಪಟ್ಟಣದ ಹೆಸ್ಟರ್. ನಮ್ಮ ಸ್ವಂತ ಹೆಸ್ಟರ್, ಬಡಬಗ್ಗರಿಗೆ ಒಳ್ಳೆಯವಳಾಗಿ, ರೋಗಿಗಳಿಗೆ ಸಹಾಯಕಳಾದ ಹೆಸ್ಟರ್' ಎಂದು ಹೊಸಬರಿಗೆ ತೋರಿ ಹೇಳುತ್ತಿದ್ದಳು. ಇಷ್ಟಿದ್ದರೂ ಆ ಅಕ್ಷರ ಅವಳ ಕಳಂಕವನ್ನು ಮುಸುಕು ಮುಸುಕಾಗಿ ತೋರುತ್ತಿತ್ತು. ಜನ ಪಿಸುಮಾತಿನಲ್ಲಿ ಈ ಕಳಂಕದ ವಿಷಯವನ್ನು ಆಗಾಗ್ಗೆ ಹೇಳುತ್ತಿದ್ದರು.

ಮತ್ತೆ ಇದೇ ಜನಕ್ಕೆ ಆ ಕೆಂಪು ಅಕ್ಷರ ಚರ್ಚಿನ ಪಾದ್ರಿಯ ಎದೆಯ ಮೇಲೆ ಕಂಡು ಬರುತ್ತಿದ್ದ ಶಿಲುಬೆಯ ಗುರುತಿನಷ್ಟೇ ಗೌರವವನ್ನು ಹುಟ್ಟಿಸುತ್ತಿತ್ತು. ಈಚೀಚೆಗೆ ಅದು ಅವಳಿಗೆ ಒಂದು ರೀತಿಯ ದೈವಿಕ ಭಾವವನ್ನು ಕೊಟ್ಟಿದ್ದು ಅವಳು ಎಂತಹ ದುರಂತಗಳ ಮಧ್ಯೆಯೂ ಧೈರ್ಯವಾಗಿ ಓಡಾಡಲು ಎಡೆಮಾಡಿಕೊಟ್ಟಿತ್ತು. ಆಕೆ ಕಳ್ಳರ ಮಧ್ಯೆ ಸಿಕ್ಕಿಬಿದ್ದರೂ ಕೆಡಕಾಗುತ್ತಿರಲಿಲ್ಲ. ಒಬ್ಬ ರೆಡ್ ಇಂಡಿಯನ್ನನು ಆ ಅಕ್ಷರಕ್ಕೆ ಹೊಡೆಯಲು ಬಿಟ್ಟ ಬಾಣವೊಂದು ತನ್ನ ಗುರಿಯನ್ನು ಮುಟ್ಟಿ, ಹೆಸ್ಟರಳಿಗೆ

ಏನೊಂದೂ ತೊಂದರೆಯನ್ನುಂಟುಮಾಡದೆ ನೆಲಕ್ಕೆ ಬಿತ್ತೆಂಬ ವದಂತಿ ಅವರಲೆಲ್ಲಾ ಹರಡಿತ್ತು.

ಈ ಅಕ್ಷರ ಹೆಸ್ಟರಳ ಮನಸ್ಸಿನ ಮೇಲೆ ಉಂಟುಮಾಡಿದ್ದ ಪ್ರಭಾವ ಘನತರವಾಗಿಯೂ ಮತ್ತೆ ವಿಚಿತ್ರವಾಗಿಯೂ ಇತ್ತು. ಹೆಸ್ಟರಳ ನಡ ವಳಿಕೆಯ ಡಂಭಾಚಾರ ಮತ್ತು ಬೆಡಗು ಒಣಗಿದ ಹಸುರೆಲೆಯಂತೆ ಬತ್ತಿ ಅದರ ಹೊರ ಮೈ ಮಾತ್ರ ಕಾಣುತ್ತಿತ್ತು. ಆ ಹೆಣ್ಣಿನ ಆಕೃತಿಯೂ ಇದೇ ರೀತಿಯ ಬದಲಾವಣೆಯನ್ನು ಹೊಂದಿತ್ತು. ಹೆಸ್ಟರಳ ಉದ್ದನೆಯ ಮತ್ತು ಹೊಳಪು ಕೂದಲಿನ ಗುಂಗುರು ಕತ್ತರಿಸಲ್ಪಟ್ಟಿದ್ದರಿಂದಲೋ ಇಲ್ಲವೆ ಟೋಪಿಯಿಂದ ಮುಚ್ಚಲ್ಪಟ್ಟಿರುವುದರಿಂದಲೋ ಎದ್ದು ಕಾಣದೆ ಇದ್ದುದರಿಂದಲೂ ಮತ್ತು ಅವಳ ಮೃದು ನಡವಳಿಕೆಯಿಂದಲೂ ಅವಳ ವಿಷಯದಲ್ಲಿ ಗೌರವ ಉತ್ಪನ್ನವಾಗುವಂತೆ ಇತ್ತು. ಈ ಎಲ್ಲ ಸೌಮ್ಯ ನಡವಳಿಕೆಗಳಿಂದ ಜನರಿಗೆ ಆಕೆಯಲ್ಲಿ ಉದ್ಭವಿಸಬಹುದಾದ ಕಾಮ–ಕ್ರೋಧಗಳಿಗೆ ಎಡೆಯೇ ಸಿಗುತ್ತಿರಲಿಲ್ಲ. ಹೆಣ್ಣು ತಾನು ಅನುಭವಿಸಿದ ಕಷ್ಟ–ಕಾರ್ಪಣ್ಯಗಳಿಂದ ಕಲಿತ ಆಚಾರ ಮತ್ತು ನಡವಳಿಕೆ ಈ ತೆರನಾದ ಸ್ವಭಾವವನ್ನು ತಂದಿತ್ತು.

ಹೆಸ್ಟರಳ ಈ ಶಿಲಾಶೀತಲತೆ ಅವಳ ಸುತ್ತಲಿನ ವಾತಾವರಣದಿಂದ ಉತ್ಪನ್ನವಾದದ್ದೆಂದು ಹೇಳಬಹುದು. ಪ್ರಪಂಚದಲ್ಲಿ ಏಕಾಂಗಿಯಾಗಿ ನಿಂತಿದ್ದ ಹೆಸ್ಟರ್ ತನಗೂ ಈ ಪ್ರಪಂಚಕ್ಕೂ ಇದ್ದ ಬಾಂಧವ್ಯದ ಸರಪಳಿಯನ್ನು ಚೂರು ಚೂರು ಮಾಡಿ ಎಸೆದಿದ್ದಳು. ಅವಳ ಏಕೈಕ ಆಕರ್ಷಣೆ–ತನ್ನ ಪರ್ಲ್, ಅವಳ ಭವಿಷ್ಯಕ್ಕೆ ಸರಿಯಾದ ಮಾರ್ಗ ಕಲ್ಪಿಸುವುದು. ಇಷ್ಟಲ್ಲದೆ ಜಗತ್ತಿನ ನ್ಯಾಯ ನಿಬಂಧನೆಗಳು ಅವಳ ಮನಸ್ಸಿನ ಮೇಲೆ ಏನೊಂದೂ ಪರಿಣಾಮವನ್ನುಂಟುಮಾಡಿರಲಿಲ್ಲ. ಅವಳ ಕಾಲದಲ್ಲಿ, ಕತ್ತಿಯ ಯುಗ ಮಾಯವಾಗುತ್ತಿದ್ದು ಬುದ್ಧಿವಂತಿಕೆಯ ಯುಗದ ಆರಂಭವಾಗಿತ್ತು. ಹಾಗೂ ನೋಡುವುದಾದರೆ ಕತ್ತಿಯ ಯುಗದಲ್ಲಿ ನಡೆದ ಅನೇಕ ಕಳಂಕಗಳು ಹೆಸ್ಟರಳ ಮೈಮೇಲಿದ್ದ ಈ ಕೆಂಪು ಅಕ್ಷರಕ್ಕೆ ಕಾರಣವಾದ ದುರಂತಕ್ಕಿಂತ ಘೋರವಾಗಿತ್ತು. ಸಮುದ್ರದಪಕ್ಕದಲ್ಲಿದ್ದ ಹೆಸ್ಟರಳ ಗುಡಿಸಲಿನಲ್ಲಿ ಒಬ್ಬಳೇ ಇದ್ದಾಗ ಅವಳ ಮನಸ್ಸಿನಲ್ಲಿ ಇಂತಹ ಅನೇಕ ಯೋಚನೆಗಳು ಬಂದು ಕಾಡುತ್ತಿದ್ದುವು. ಈ ರಕ್ತ ಮಾಂಸರಹಿತ ಬರಿಯ ಯೋಚನೆಗಳೇ ಆಕೆಗೆ ಅನೇಕ ವೇಳೆ ಆಧಾರವಾಗುತ್ತಿತ್ತು. ಈ ಯೋಚನಾ ಜಗತ್ತಿನಿಂದ ಇಳಿದು ಬಂದು ತನ್ನ ಸುತ್ತಲಿನ ವಾತಾ

ವರಣದ ಅರಿವುಂಟಾಗುತ್ತಿದ್ದುದು ಪರ್ಲ್‌ಳಿಂದ. ಪರ್ಲಳಿಲ್ಲದಿದ್ದರೆ ಇವಳೂ ಒಬ್ಬ ಆನಿ ಹರ್ಚಿಸನ್ನಳಾಗುತ್ತಿದ್ದಳೇನೋ? ದೈವ, ಪರ್ಲಳ ರೂಪದಲ್ಲಿ ಮುಂದಿನ ಹೆಣ್ಣು ಜನಾಂಗದ ಬೀಜಾವಾಪನೆ ಮಾಡಿತ್ತು. ಪರ್ಲಳ ಸ್ವಭಾವವೂ ಅಷ್ಟೇ ವಿಚಿತ್ರವಾಗಿತ್ತು. ಹೆಸ್ಟರಳಿಗೆ ತನ್ನ ಪಾಪದ ಫಲವಾದ ಪರ್ಲಳ ಸ್ವಭಾವ ತಪ್ಪೆಂದೇ ತೋರಿತು. ಹೆಸ್ಟರ್ ಎಷ್ಟೋ ಸಲ ಈ ತನ್ನ ಪುಟ್ಟ ಪರ್ಲಳು ಹುಟ್ಟಿದ್ದು ಒಳ್ಳೆಯದಕ್ಕೋ ಇಲ್ಲ ಕೆಟ್ಟದಕ್ಕೋ ಎಂಬ ಯೋಚನೆ ಮಾಡುತ್ತಿತ್ತು.

ಇದೇ ಯೋಚನೆ ಸಕಲ ಸ್ತ್ರೀ ಜನಾಂಗಕ್ಕೂ ಅನ್ವಯಿಸುವಂತಿತ್ತು, ಹೆಸ್ಟರಳ ಮನಸ್ಸಿನಲ್ಲಿ. ಸುಖದಲ್ಲಿ ಓಲಾಡುತ್ತಿದ್ದ ಸ್ತ್ರೀಯರಿಗೂ ಈ ಜಗತ್ತಿನಲ್ಲಿರುವಿಕೆ ಒಪ್ಪಿಗೆಯಾಗಿತ್ತೆ? ಎಂಬ ಪ್ರಶ್ನೆ ಅವಳನ್ನು ಅನೇಕ ಸಲ ಕಾಡಿತ್ತು. ಈ ಪ್ರಶ್ನೆಗೆ ತನ್ನ ಬಾಳಿನಲ್ಲಿ 'ಇಲ್ಲ'ವೆಂಬ ಉತ್ತರ ಕೊಡುವ ಅನುಭವ ಬಂದಿತ್ತು. ಮಧುರ ಮಿಡಿತಗಳನ್ನು ಕಳೆದುಕೊಂಡಿದ್ದ ಹೆಸ್ಟರಳ ಹೃದಯ ಅವಳ ಕತ್ತಲ ಮನೋರಾಜ್ಯದಲ್ಲಿ ಓಡಾಡುತ್ತಿತ್ತು. ಅವಳ ಸುತ್ತಲೂ ಕರಾಳ ಪ್ರಕೃತಿಗಳ ನರ್ತನ ಕಾಣುತ್ತಿತ್ತೇ ವಿನಹ ಸೌಮ್ಯಪ್ರಕೃತಿ ಕಂಡುಬರುತ್ತಿರಲಿಲ್ಲ. ಎಷ್ಟೋ ಸಲ ಈ ಪರ್ಲಳನ್ನು ಸ್ವರ್ಗದತ್ತ ಸಾಗಿಸಿ ತಾನೂ ಅನಂತದತ್ತ ಹೊರಡಬಾರದೇಕೆಂಬ ಘೋರ ಯೋಚನೆಗಳು ಅವಳ ಮನಸ್ಸನ್ನು ಆವರಿಸುತ್ತಿತ್ತು.

ಎಷ್ಟೇ ಆಗಲಿ ಕೆಂಪು ಅಕ್ಷರ ತನ್ನ ಕೆಲಸವನ್ನು ಸಮಂಜಸವಾಗಿ ಮಾಡಿರಲಿಲ್ಲ.

ಆದರೆ ಆ ರಾತ್ರಿ ಡಿಮ್ಸ್‌ಡೇಲ್‌ರವರೊಡನಿನ ಭೇಟಿಯಿಂದ ಅವಳ ಮನಸ್ಸಿನಲ್ಲಿ ಹೊಸ ಯೋಚನೆಯೊಂದು ಹುಟ್ಟಿತು. ಅಂದು ಈ ಪಾದ್ರಿಯ ಹೃದಯವೇತನೆಯ ಅನುಭವದ ಅರಿವಾಯಿತು. ಈ ಪಾದ್ರಿಗೆ ಇಷ್ಟರಲ್ಲಾಗಲೇ ಹುಚ್ಚು ಹಿಡಿಸದಿದ್ದಲ್ಲಿ ಹುಚ್ಚು ಹಿಡಿಸುವುದು ಅಷ್ಟೇನು ದೂರದಲಿಲ್ಲವೆಂಬುದರ ಅರಿವಾಯಿತು. ಅವನಿಗೆ ಅರಿವಿಲ್ಲದಂತೆಯೇ ಅವನ ಶತ್ರು ಅವನ ಜೊತೆಯಲ್ಲೇ ಸ್ನೇಹಿತನಂತೆ ಓಡಾಡುತ್ತಿದ್ದು ಆತನ ದುರ್ಬಲ ನರಗಳ ಮೇಲೆ ವೀಣೆ ಬಾರಿಸುತ್ತಿದ್ದುದರ ಅರಿವಾಯಿತು ಪರ್ಲಳಿಗೆ. ಪಾದ್ರಿಯ ಈ ಸ್ಥಿತಿಗೆ ತನ್ನ ಅಳುಕೇ ಕಾರಣವೇನೋ ಎಂದೆನಿಸಿತ್ತು. ಹೆಸ್ಟರ್ ತನ್ನಿಂದಾದ ತಪ್ಪನ್ನು ಸರಿಪಡಿಸಲು ನಿರ್ಧರಿಸಿದಳು. ತನಗಾಗುತ್ತಿದ್ದ ಅವಮಾನಗಳ ಮಧ್ಯೆ, ಜೈಲಿನಲ್ಲಿ ತನಗೂ ರೋಜರ್ ಚಿಲಿಂಗ್‌ವರ್ತನಿಗೂ ಆದ ಸಂಭಾಷಣೆಯ ಕಟುತ್ವವನ್ನು ಇಂದು ಧೈರ್ಯವಾಗಿ ಎದುರಿಸಲು

ಶಕ್ತಿ ಸಂಪಾದಿಸದ್ದ ಹೆಸ್ಟರ್, ಉನ್ನತ ಸ್ಥಾನದಲ್ಲಿದ್ದ ಈ ಪಾದ್ರಿ ತನ್ನ ಮಟ್ಟಕ್ಕೆ—ಅಲ್ಲ, ತನಗಿಂತ ಕೆಳಮಟ್ಟಕ್ಕೆ—ಇಳಿದು ಬರುತ್ತಿದ್ದುದನ್ನು ಗಮನಿಸಿದಳು.

ಕೊನೆಗೆ ಈತನ ಅಧೋಗತಿಗೆ ಕಾರಣನಾದ ತನ್ನ ಗಂಡನನ್ನು ಸಂಧಿಸಿ ಇವನನ್ನು ಉಳಿಸಲು ತನ್ನಿಂದ ಸಾಧ್ಯವಾದುದನ್ನೆಲ್ಲಾ ಮಾಡಲು ಹೆಸ್ಟರ್ ನಿರ್ಧರಿಸಿದಳು. ಅದಕ್ಕೆ ಸಮಯವೂ ಅತಿ ದೂರದಲ್ಲಿರಲಿಲ್ಲ. ಒಂದು ಮಧ್ಯಾಹ್ನ ಹೆಸ್ಟರಳೊಡನೆ ಆ ಪರ್ಯಾಯ ದ್ವೀಪದ ಏಕಾಂತ ಸ್ಥಳದಲ್ಲಿ ಓಡಾಡುತ್ತಿದ್ದಾಗ, ಮುದಿ ಡಾಕ್ಟರನು ಒಂದು ಕೈಯಲ್ಲಿ ಬುಟ್ಟಿ, ಇನ್ನೊಂದು ಕೈಯಲ್ಲಿ ಬೆತ್ತವನ್ನು ಹಿಡಿದುಕೊಂಡು ಗಿಡಮೂಲಿಕೆಗಳನ್ನು ಹುಡುಕುತ್ತಾ ನಡೆದು ಬರುತ್ತಿದ್ದುದನ್ನು ನೋಡಿದಳು.

## ೧೪

ಅಲ್ಲಿ ಗಿಡಮೂಲಿಕೆಗಳನ್ನು ಅರಸುತ್ತಿರುವ ವೈದ್ಯನೊಡನೆ ತಾನು ಮಾತನಾಡುತ್ತಿರುವವರೆಗೂ ಸಮುದ್ರದ ದಡದಲ್ಲಿ ಕಪ್ಪೆಚಿಪ್ಪುಗಳೊಂದಿಗೆ ಆಟವಾಡುತ್ತಿರೆಂದು ಹೆಸ್ಟರ್‌ಪ್ರೈನ್ ತನ್ನ ಮಗುವಿಗೆ ಹೇಳಿಕಳುಹಿಸಿದಳು. ಮಗು ಹಕ್ಕಿಯಂತೆ ಹಾರಿಹೋದಳು. ಬರಿಯ ಕಾಲಿನಲ್ಲಿ ಕುಣಿಯುತ್ತಾ ಒದ್ದೆಯ ದಡದ ಮೇಲೆ ಓಡತೊಡಗಿದಳು. ಅಲ್ಲಲ್ಲೇ ನಿಂತು ನೀರು ನಿಂತಿರುವ ಕಡೆಗಳಲ್ಲೆಲ್ಲಾ ತನ್ನ ಮುಖವನ್ನು ನೋಡಿಕೊಳ್ಳುತ್ತಾಳೆ. ಹೊಳೆಯುತ್ತಿರುವ ಗುಂಗುರು ಕೂದಲು, ತುಂಟ ನಗೆಯಿಂದ ಕೂಡಿದ ಕಣ್ಣುಗಳುಳ್ಳ ಮಗುವಿನ ಬಿಂಬವನ್ನು ಕಂಡು, ಬೇರೆ ಯಾರೂ ಸಂಗಾತಿಯರಿಲ್ಲದ ಪರ್ಲ್, ಕೈ ಹಿಡಿದುಕೊಂಡು ಓಟ ಹೂಡೋಣ ಬಾ ಎಂದು ಅದನ್ನು ಸ್ವಾಗತಿಸಿದಳು. 'ಇದೇ ಉತ್ತಮವಾದ ಸ್ಥಳ! ನೀನೇ ನೀರಿನೊಳಕ್ಕೆ ಬಂದುಬಿಡು' ಎಂದು ಆ ಪ್ರತಿಬಿಂಬದಲ್ಲಿರುವ ಮಗು ಹೇಳಿದಂತಾಯಿತು. ಪರ್ಲ್ ಆ ನೀರಿನಲ್ಲಿಳಿದಳು. ನೀರು ಮೊಳಕಾಲುದ್ದದವರೆಗೂ ಇತ್ತು. ತಳದಲ್ಲಿ ತನ್ನ ಬಿಳಿಯ ಪಾದಗಳು ಕಾಣಿಸುತ್ತಿತ್ತು. ಅದಕ್ಕಿಂತ ಕೆಳಗಡೆ ಕಲಕಿದ ನೀರಿನಲ್ಲಿ ನಗುತ್ತಾ ಓಲಾಡುತ್ತಿರುವ ಮುಖವೊಂದು ಕಾಣಿಸುತ್ತಿತ್ತು.

ಇತ್ತ ಅವಳ ತಾಯಿ ವೈದ್ಯನ ಬಳಿಗೆ ಹೋಗಿ ಮಾತನಾಡತೊಡಗಿದಳು.

' ನಿಮ್ಮ ಬಳಿ ಸ್ವಲ್ಪ ಮಾತನಾಡುವುದಿದೆ. ನಮಗೆಲ್ಲಾ ಸಂಬಂಧಿ

ಸಿದ್ದು' ಎಂದಳು.

'ಅಹ ! ಹೆಸ್ಟರ್‌ಪ್ರೈನ್, ಮುದಿ ರೋಜರ್ ಚಿಲಿಂಗ್‌ವರ್ತನ ಬಳಿ ಮಾತನಾಡುವುದಿದೆಯೇನು ?' ಎನ್ನುತ್ತಾ ಬಗ್ಗಿದವನು ನಿಧಾನವಾಗಿ ನೆಟ್ಟಗೆ ನಿಂತುಕೊಂಡು 'ತುಂಬ ಸಂತೋಷ ! ಏಕೆ ಎಲ್ಲರ ಬಾಯಲ್ಲೂ ನಿನ್ನ ವಿಷಯವಾಗಿ ಒಳ್ಳೆಯದನ್ನೇ ಕೇಳುತ್ತಿದ್ದೇನೆ. ನಿನ್ನೆ ಸಂಜೆ ತಾನೆ ಒಬ್ಬರು ನ್ಯಾಯಾಧಿಪತಿಗಳು—ತುಂಬ ಬುದ್ಧಿವಂತರು, ದೈವಭಕ್ತರು—ನಿನ್ನ ವಿಚಾರವನ್ನು ಚರ್ಚಿಸುತ್ತಾ ನನ್ನೊಡನೆ ಪಿಸುಮಾತಿನಲ್ಲಿ ಹೇಳಿದರು. ನಿನ್ನ ವಿಷಯವಾಗಿ ಸಭೆಯಲ್ಲಿ ಮಾತುಕತೆಯಾಯಿತಂತೆ. ಏಿಕ್ಕವರ ಕ್ಷೇಮವನ್ನು ಮನಸ್ಸಿನಲ್ಲಿಟ್ಟುಕೊಂಡು, ನಿನ್ನ ಎದೆಯ ಮೇಲಿರುವ ಕೆಂಪು ಅಕ್ಷರವನ್ನು ತೆಗೆದುಹಾಕುವುದೊ ಬೇಡವೋ ಎಂದು ಚರ್ಚಿಸುತ್ತಿದ್ದರಂತೆ. ನಿಜವಾಗಿಯೂ ಹೆಸ್ಟರ್, ನಾನೇನೋ ಅದನ್ನು ಅಗತ್ಯವಾಗಿ ಬೇಗನೆ ಮಾಡುವಂತೆ ನ್ಯಾಯಾಧಿಪತಿಗಳನ್ನು ಬೇಡಿಕೊಂಡೆ !' ಎಂದ.

'ಈ ಚಿಹ್ನೆಯನ್ನು ಕಿತ್ತುಹಾಕುವುದು ನ್ಯಾಯಾಧಿಪತಿಗಳ ಕೈಯ್ಯಲಿಲ್ಲ. ಅದನ್ನು ತೆಗೆದುಹಾಕುವ ಯೋಗ್ಯತೆ ನನಗೆ ಬಂದ ಕಾಲಕ್ಕೆ ಅದು ತಾನಾಗಿಯೇ ಬಿದ್ದುಹೋಗುತ್ತದೆ ಅಥವ ತನ್ನ ಅರ್ಥವೇ ಬೇರೆಯಾಗುವಂತೆ ಬದಲಾಯಿಸುತ್ತದೆ' ಎಂದು ಶಾಂತಳಾಗಿ ಉತ್ತರ ಕೊಟ್ಟಳು ಹೆಸ್ಟರ್.

'ಬೇಡ. ನಿನಗೆ ಇಷ್ಟವಿದ್ದರೆ ಅದನ್ನು ಧರಿಸಿರು. ಆಭರಣಗಳ ವಿಷಯದಲ್ಲಿ ಹೆಂಗಸು ತನ್ನ ದಾರಿಯನ್ನೇ ಅನುಸರಿಸಬೇಕು. ಅಕ್ಷರ ಚೆನ್ನಾಗಿ ಕಸೂತಿ ಕೆಲಸ ಮಾಡಿದೆ. ಅದು ನಿನ್ನ ಎದೆಯ ಮೇಲೆ ಚೆನ್ನಾಗಿ ಶೋಭಿಸುತ್ತದೆ' ಎಂದ.

ಇಷ್ಟು ಹೊತ್ತು ಹೆಸ್ಟರ್ ಎವೆಯಿಕ್ಕದೆ ಆ ಮುದುಕನನ್ನೇ ನೋಡುತ್ತಿದ್ದಳು. ಈ ಏಳು ವರ್ಷಗಳಲ್ಲಿ ಅವನಲ್ಲಾಗಿದ್ದ ಬದಲಾವಣೆಯನ್ನು ಕಂಡು ಅವಳಿಗೆ ಒಮ್ಮೆಗೇ ಗಾಬರಿಯೂ ಆಶ್ಚರ್ಯವೂ ಆಯಿತು. ಅವನು ಅಷ್ಟೇನೂ ಮುದುಕನಾಗಿದ್ದನೆಂದಲ್ಲ; ವಯಸ್ಸಾಗಿರುವುದು ಕಾಣುತ್ತಿದ್ದರೂ ತಕ್ಕಮಟ್ಟಿಗೆ ಗಟ್ಟಿಮುಟ್ಟಾಗಿಯೇ ಇದ್ದ. ಅವಳಿಗೆ ನೆನಪಿದ್ದಂತೆ, ಮೊದಲಿಗೆ ಅವನ ಮುಖದಲ್ಲಿದ್ದ ಶಾಂತತೆ ಮಾಯವಾಗಿತ್ತು. ಅದರ ಬದಲು ಯಾವುದೋ ಅನ್ವೇಷಣೆಯ ಭಯಂಕರತೆ ಅಲ್ಲಿ ಕಾಣುತ್ತಿತ್ತು. ಅದನ್ನು ನಗೆಯಿಂದ ಮುಚ್ಚಿಕೊಳ್ಳಲು ಪ್ರಯತ್ನಿಸುತ್ತಿದ್ದ. ಆದರೆ ಅದು ಸಾರ್ಥಕವಾಗದೆ ಅದರ ಹಿಂದೆ ಅಡಗಿದ್ದ ಕರಾಳ ಸ್ವಭಾವ ಮತ್ತಷ್ಟು ಎದ್ದು ಕಾಣು

ತ್ತಿತ್ತು. ಆಗಾಗ್ಗೆ ಅವನ ಕಣ್ಣಲ್ಲಿ ಕೆಂಪು ಜ್ವಾಲೆ ಕಾಣಿಸಿಕೊಳ್ಳುತ್ತಿತ್ತು. ಅವನ ಆತ್ಮಕ್ಕೆ ಬೆಂಕಿ ಬಿದ್ದು ಹೃದಯದಲ್ಲೇ ಹೊಗೆಯಾಡುತ್ತಿದ್ದು ಮನಸ್ಸು ಕೆರಳಿದಾಗಲೆಲ್ಲ ಅದರ ಜ್ವಾಲೆ ಒಂದು ಕ್ಷಣ ಕಣ್ಣಲ್ಲಿ ಕಾಣಿಸು ವಂತಿತ್ತು. ಇದನ್ನು ಆದಷ್ಟು ಮಟ್ಟಿಗೂ ತುಳಿದಿಟ್ಟು, ಆ ರೀತಿ ಏನು ಆಗಲಿಲ್ಲವೆನ್ನುವಂತೆ ನಟಿಸಲು ಪ್ರಯತ್ನಿಸುತ್ತಿದ್ದ.

ಒಂದು ಮಾತಿನಲ್ಲಿ ಹೇಳುವುದಾದರೆ, ಮನುಷ್ಯನೂ ಪಿಶಾಚಿಯಾಗಿ ಮಾರ್ಪಡಬಲ್ಲನೆಂದು ತೋರಿಸಲು ರೋಜರ್ ಚಿಲಿಂಗ್‌ವರ್ತ್ ಒಂದು ರುಜುವಾತಾಗಿದ್ದ. ಯಾತನೆಯಿಂದ ನರಳುತ್ತಿರುವ ಹೃದಯವನ್ನು ಕೆದಕಿ ಕೆದಕಿ ತಾನು ಆನಂದಪಡುವುದಲ್ಲದೆ, ಕೆದಕಿದಂತೆಲ್ಲಾ ಆ ನೋವಿನ ಜ್ವಾಲೆಗೆ ಮತ್ತಷ್ಟು ತುಪ್ಪ ಸುರಿದು ಸಂತೋಷಪಡುತ್ತಿರುವುದರ ಫಲವಾಗಿ ಅವನಲ್ಲಿ ಈ ಮಾರ್ಪಾಟಾಗಿತ್ತು.

ಹೆಸ್ಟರ್‌ಪ್ರೈನ್‌ಳ ಎದೆಯ ಮೇಲೆ ಕೆಂಪು ಅಕ್ಷರ ಧಗಧಗಿಸುತ್ತಿತ್ತು.

'ಅದೇಕೆ ನನ್ನ ಮುಖವನ್ನು ಹಾಗೆ ನೋಡುತ್ತಿದ್ದೀಯೆ? ಅಲ್ಲೇನು ಕಾಣುತ್ತದೆ ನಿನಗೆ ?' ಎಂದ ವೈದ್ಯ.

'ನನಗೆ ಕಣ್ಣೀರು ಬರುವಂಥಾದ್ದೇನೋ ಅಲ್ಲಿದೆ; ನನ್ನಲ್ಲಿ ಅದಕ್ಕೆ ಸಮನಾದ ಕಹಿಯ ಕಣ್ಣೀರು ಇದ್ದಿದ್ದರೆ. ಹೋಗಲಿ ಬಿಡಿ. ಆ ಅಭಾಗ್ಯ ಮನುಷ್ಯನ ವಿಷಯ ಮಾತನಾಡೋಣವೆಂದು ಬಂದೆ' ಎಂದಳು.

'ಏನು ಅವನ ವಿಷಯ ? ನಿಜ ಹೇಳಬೇಕಾದರೆ ನಾನೂ ಆತನ ವಿಷಯವನ್ನೇ ಯೋಚಿಸುತ್ತಿದ್ದೆ. ಆದ್ದರಿಂದ ಮುಚ್ಚು ಮರೆಯಿಲ್ಲದೆ ಮಾತನಾಡು. ನಾನೂ ಜಬಾಬು ಕೊಡುತ್ತೇನೆ' ತಾನು ಯಾರೊಂದಿಗೆ ಈ ವಿಷಯ ಮಾತನಾಡಬೇಕೆಂದು ಹೊಂಚು ಹಾಕುತ್ತಿದ್ದಾನೋ ಅವಳೇ ಈ ವಿಷಯ ಪ್ರಸ್ತಾಪ ಮಾಡಿದುದರಿಂದ, ಸಂತೋಷಗೊಂಡು ಆತುರವಾಗಿ ಕೇಳಿದ.

'ಈಗ ಏಳು ವರ್ಷಗಳ ಹಿಂದೆ, ನಮ್ಮಿಬ್ಬರ ಮೊದಲಿನ ಸಂಬಂಧ ವನ್ನು ರಹಸ್ಯವಾಗಿಟ್ಟಿರಬೇಕೆಂದು ನೀವು ನನ್ನಿಂದ ಪ್ರಮಾಣ ಮಾಡಿಸಿ ಕೊಂಡಿದ್ದಿರಿ. ಆತನ ಪ್ರಾಣ, ಮಾನಗಳು ನಿಮ್ಮ ಕೈಲಿದ್ದುದರಿಂದ ನಾನೂ ಆ ಮಾತಿಗೆ ಕಟ್ಟುಬಿದ್ದು ಮೌನವಾಗಿರದೆ ಬೇರೆ ಗತ್ಯಂತರವಿರ ಲಿಲ್ಲ. ಅದಕ್ಕೆ ಒಪ್ಪಿಕೊಂಡಾಗ ನನಗೆ ಸಂದೇಹವಿದ್ದೇ ಇತ್ತು. ಮಾನವ ವರ್ಗದೊಡನೆಯೇ ಸಂಬಂಧ ತೊಡೆದು ಹೋಗಿದ್ದ ಆತನೊಬ್ಬನಿಗೆ ಮಾತ್ರ ನನ್ನ ಕರ್ತವ್ಯದ ಋಣ ಉಳಿದಿತ್ತು. ಆದರೆ ನಿಮ್ಮ ಮಾತಿಗೆ ಕಟ್ಟುಬಿದ್ದು

ದರಿಂದ ಅದನ್ನು ವಂಚಿಸುತ್ತಿದ್ದೇನೆಂದು ನನ್ನ ಮನಸ್ಸು ಮಾತ್ರ ಪಿಸುಗುಡ ತೊಡಗಿತು. ಅಂದಿನಿಂದ ಆತನಿಗೆ ನಿಮ್ಮಷ್ಟು ಸಮೀಪದವರು ಬೇರೆ ಯಾರೂ ಇಲ್ಲ. ಸದಾ ಆತನ ಬೆನ್ನ ಹಿಂದೆಯೇ ಇರುತ್ತೀರಿ. ಆತನ ಮನವನ್ನು ಕೆದಕಿ ನೋಡುತ್ತೀರಿ. ಯಾವಾಗಲೂ ಆತನ ಹೃದಯವನ್ನು ಕೊರೆಯುತ್ತಾ ಅಲ್ಲಿ ಉರಿಯೆಬ್ಬಿಸುತ್ತಿರುತ್ತೀರಿ! ಆತನ ಜೀವ ನಿಮ್ಮ ಮುಷ್ಟಿಯಲ್ಲಿ ಸಿಕ್ಕಿಹೋಗಿ ಆತ ಜೀವಚ್ಛವವಾಗಿದ್ದು ಆದರೂ ನೀವು ಯಾರೆಂಬುದು ಆತನಿಗೆ ತಿಳಿಯದು. ಇದು ಹೀಗಾಗಲು ಬಿಟ್ಟಿದ್ದರಿಂದ ನಾನು ಯಾರಲ್ಲಿ ನ್ಯಾಯವಾಗಿ ನಡೆದುಕೊಳ್ಳಬೇಕೆಂದಿದ್ದೇನೋ ಆ ಒಬ್ಬನೇ ಒಬ್ಬ ಮನುಷ್ಯನಿಗೆ ನಾನು ಖಂಡಿತವಾಗಿ ಅನ್ಯಾಯ ಮಾಡಿದ್ದೇನೆ' ಎಂದಳು.

'ನಿನಗೆ ಬೇರೆ ಮಾರ್ಗವೇನಿತ್ತು ? ನಾನು ಸುಮ್ಮನೆ ಅವನ ಕಡೆ ಕೈ ತೋರಿಸಿದ್ದರೆ ಸಾಕು. ಪವಿತ್ರವಾದ ಅಧಿಕಾರ ವೇದಿಕೆಯಿಂದ ಅವನನ್ನು ಕೆಳಕ್ಕೆಳೆದು ಸೆರೆಮನೆಯೊಳಕ್ಕೆ ತಳ್ಳಿಬಿಡುತ್ತಿದ್ದರು. ಅಷ್ಟೇ ಅಲ್ಲ; ಅವನನ್ನು ಗಲ್ಲಿಗೇರಿಸಿಬಿಡುತ್ತಿದ್ದರೋ ಏನೋ !'

'ಅದು ಹಾಗಾಗಿದ್ದಿದ್ದರೆ ಎಷ್ಟೋ ಚೆನ್ನಾಗಿತ್ತು' ಎಂದಳು ಹೆಸ್ಟರ್ ಪ್ರೈನ್.

'ಅವನಿಗೆ ನಾನೇನು ಕೆಡಕು ಮಾಡಿದ್ದೇನೆ ? ರಾಜಾಧಿ ರಾಜರುಗಳು ಕೊಡುವ ಹಣಕ್ಕಿಂತ ಹೆಚ್ಚಾಗಿ ಕೊಟ್ಟಿದ್ದರೂ ಯಾರೂ ನನ್ನಷ್ಟು ಹುಷಾರಾಗಿ ಅವನನ್ನು ನೋಡಿಕೊಳ್ಳುತ್ತಿರಲಿಲ್ಲ. ನನ್ನ ಚಿಕಿತ್ಸೆಯಿಲ್ಲದಿದ್ದಲ್ಲಿ ನಿಮ್ಮಿಬ್ಬರ ದೇಹಗಳು ಅಪರಾಧ ಮಾಡಿದ ಎರಡು ವರ್ಷಗಳಲ್ಲೇ ಅವನ ಜೀವ ಕೊರಗಿಸುವ ಜ್ವಾಲೆಯಲ್ಲಿ ಸಿಕ್ಕಿ ಭಸ್ಮವಾಗಿಬಿಡುತ್ತಿತ್ತು. ಈ ಕೆಂಪು ಅಕ್ಷರದ ಭಾರವನ್ನು ಹೊತ್ತುಕೊಳ್ಳಲು ನಿನ್ನಂತೆ ಅವನಿಗೆ ಮನೋಧಾರ್ಢ್ಯವಿರಲಿಲ್ಲ. ಓಹ್, ನಾನು ಇನ್ನೂ ರಹಸ್ಯಗಳನ್ನು ಹೇಳಬಲ್ಲೆ ! ಆದರೆ ಇಷ್ಟು ಸಾಕು ! ನನಗೆ ತಿಳಿದಿರುವ ಚಿಕಿತ್ಸೆಯನ್ನೆಲ್ಲಾ ನಾನು ಪೂರ್ಣವಾಗಿ ಮಾಡಿದ್ದೇನೆ. ಈವತ್ತು ಅವನು ಉಸಿರಾಡುತ್ತಾ ಭೂಮಿಯ ಮೇಲೆ ಓಡಾಡುತ್ತಿರಬೇಕಾದರೆ....ಅದು ನನ್ನಿಂದ !' ಎಂದ ರೋಜರ್ ಚಿಲಿಂಗ್‌ವರ್ತ್.

'ಅಯ್ಯೋ, ಆತ ತಕ್ಷಣ ಸತ್ತುಹೋಗಿದ್ದರೆ ಎಷ್ಟು ಚೆನ್ನಾಗಿತ್ತು!' ಹೆಸ್ಟರ್ ನುಡಿದಳು.

ರೋಜರ್ ಚಿಲಿಂಗ್‌ವರ್ತ್‌ನ ಹೃದಯದಲ್ಲಿದ್ದ ಬೆಂಕಿ ಜ್ವಾಲೆಯಾಗಿ

ಅವನ ಕಣ್ಣಲ್ಲಿ ಮೂಡಿತು. ಕೋಪದಿಂದ ಜೋರಾಗಿ ಹೇಳಿದ 'ಹೌದು ಹೌದು; ನೀನು ಹೇಳುವುದು ನಿಜ ! ಅವನು ತಕ್ಷಣ ಸತ್ತುಹೋಗಿದ್ದರೆ ಚೆನ್ನಾಗಿತ್ತು. ಇವನು ಪಟ್ಟಷ್ಟು ಸಂಕಟ ಇನ್ಯಾವ ಮರ್ತ್ಯನೂ ಪಟ್ಟಿರಲಾರ. ಅದನ್ನೂ ತನ್ನ ಶತ್ರುವಿನ ಕಣ್ಣೆದುರಿಗೇ ಅನುಭವಿಸುತ್ತಿದ್ದ ! ನಾನಿರುವುದು ಅವನ ಹೃದಯಕ್ಕೆ ಅರಿವಾಗಿತ್ತು. ಯಾವುದೋ ಶಾಪದ ರೂಪ ಅವನ ಸುತ್ತಲೂ ಯಾವಾಗಲೂ ಸುಳಿದಾಡುತ್ತಿರುವುದರ ಅರಿವು ಅವನಿಗಾಗಿತ್ತು. ಅವನ ಆತ್ಮದ ಗ್ರಹಣಶಕ್ತಿ ತುಂಬ ಸೂಕ್ಷ್ಮವಾದದ್ದು. ತನ್ನ ಹೃದಯದ ತಂತಿಗಳನ್ನು ಮಿಡಿಯುತ್ತಿರುವುದು ಸ್ನೇಹದ ಕೈಯ್ಯಲ್ಲ; ಕೆಡಕನ್ನುಂಟುಮಾಡಲು ಅಲ್ಲಿಯೇ ಕಣ್ಣಿಟ್ಟು ನೋಡುತ್ತಿರುವುದು ಯಾವುದೋ ದುಷ್ಟಶಕ್ತಿ ಎನ್ನುವುದು ಅವನಿಗೂ ತಿಳಿದಿತ್ತು. ಅವನ ವೃತ್ತಿಯಲ್ಲಿರುವ ಇತರ ಸೋದರರಂತೆಯೇ ಅವನಿಗೂ ಮೂಢನಂಬಿಕೆ. ತನ್ನನ್ನು ಯಾವುದೋ ಭೂತ ಹಿಡಿದಿರಬೇಕೆಂದು ಭಾವಿಸಿದ. ಸಾಯುವ ಮೊದಲೇ ಅವನಿಗೆ ನರಕದ ಅನುಭವವಾಗುತ್ತಿತ್ತು. ಆದರೆ ಇದಕ್ಕೆಲ್ಲಾ ಕಾರಣ ಎಡಬಿಡದೆ ಅವನ ಜೊತೆಯಲ್ಲಿಯೇ ಇರುತ್ತಿದ್ದ ನನ್ನ ನೆರಳು ! ಅವನು ಯಾರಿಗೆ ಎಣೆಯಿಲ್ಲದ ಅನ್ಯಾಯ ಮಾಡಿದ್ದನೋ ಅವನ ಸಾಮೀಪ್ಯ !—ಅವನ ಹೃದಯದಲ್ಲಿ ತುಂಬಿದ್ದ ಸೇಡಿದ ವಿಷ ! ಹೌದು, ಅವನ ಭಾವನೆಯೇನೂ ತಪ್ಪಲ್ಲ ! ಪಿಶಾಚಿ ಅವನ ಬೆನ್ನು ಬಿದ್ದಿತ್ತು ! ಒಮ್ಮೆ ಮಾನವ ಹೃದಯವನ್ನು ಹೊಂದಿದ್ದ ಮರ್ತ್ಯ ಅವನನ್ನು ಗೋಳಾಡಿಸಲು ಈಗ ಪಿಶಾಚಿಯಾಗಿದ್ದಾನೆ !'

ಆ ಅಭಾಗ್ಯನಾದ ವೈದ್ಯ ಯಾವುದೋ ಹೆದರಿಕೆಯಿಂದ ತನ್ನ ಕೈಗಳನ್ನು ಮೇಲಕ್ಕೆತ್ತಿದ. ಕನ್ನಡಿಯಲ್ಲಿ ತನ್ನ ಪ್ರತಿಬಿಂಬದ ಬದಲು ಮತ್ತಾವುದೋ ಘೋರ ಆಕೃತಿ ಕಂಡು ಬೆದರಿದಂತಿತ್ತು ಅವನ ಮುಖ. ಅವನಿಗೆ ಹಿಂದೆಂದೂ ಹೀಗಾಗಿರಲಿಕ್ಕಿಲ್ಲ.

'ನೀವು ಅವರಿಗೆ ಕೊಟ್ಟಿರುವ ಹಿಂಸೆ ಸಾಲದೆ ? ಅದಕ್ಕೆ ಆತ ನಿಮ್ಮ ಋಣದ ದಂಡ ತೆತ್ತಿಲ್ಲವೆ ?' ಎಂದಳು ಹೆಸ್ಟರ್.

'ಇಲ್ಲ !—ಇಲ್ಲ ! ಅವನ ಋಣ ಮತ್ತಷ್ಟು ಹೆಚ್ಚಾಗಿದೆ ! ಈಗ ಒಂಬತ್ತು ವರ್ಷಗಳ ಹಿಂದೆ ನಾನು ಹೇಗಿದ್ದನೆಂಬ ನೆನಪು ನಿನಗಿದೆಯೆ ಹೆಸ್ಟರ್ ? ಆಗಲೇ ನಾನು ನನ್ನ ಜೀವನ ಸಂಧ್ಯೆಯನ್ನೆ ಸಮೀಪಿಸಿದ್ದೆ. ಆದರೆ ಇನ್ನೂ ಮುದುಕನಾಗಿರಲಿಲ್ಲ. ಆದರೆ ನನ್ನ ಜೀವನವೆಲ್ಲ ವ್ಯಾಸಂಗದಲ್ಲಿ ತೊಡಗಿ ಶಾಂತವಾಗಿ ಕಳೆದಿದ್ದೆ. ನನ್ನೊಬ್ಬನಿಗಾಗಿಯೇ ಅಲ್ಲ—

ಮಾನವವರ್ಗದ ಹಿತಕ್ಕಾಗಿಯೇ ಜ್ಞಾನಾರ್ಜನೆಯನ್ನು ಮಾಡುತ್ತಿದ್ದೆ ನನ್ನಷ್ಟು ಸುಖವಾಗಿ, ಶಾಂತವಾಗಿ ಬೇರೆ ಯಾವ ವ್ಯಕ್ತಿಯೂ ಇರಲಿಲ್ಲ. ನನ್ನ ನೆನಪಿಲ್ಲವೇನು ನಿನಗೆ? ಕೊಂಚ ಗಡುಸಾಗಿ ಕಂಡರೂ ಯಾವಾಗಲೂ ಪರಹಿತ ಚಿಂತನೆಯಲ್ಲೇ ತೊಡಗಿರಲಿಲ್ಲವೇನು ನಾನು?'

'ಅಷ್ಟೇ ಅಲ್ಲ, ಇನ್ನೂ ಹೆಚ್ಚಾಗಿದ್ದಿರಿ' ಎಂದಳು ಹೆಸ್ಟರ್.

'ಈಗ ಏನಾಗಿದ್ದೇನೆ ನಾನು? ನಾನು ಏನೆಂಬುದನ್ನು ನಿನಗಾಗಲೇ ಹೇಳಿದ್ದೇನೆ! ನಾನೊಬ್ಬ ಪಿಶಾಚಿ! ನನ್ನನ್ನು ಹಾಗೆ ಮಾಡಿದವರು ಯಾರು?' ಅವಳನ್ನೇ ದಿಟ್ಟಿಸಿ ನೋಡುತ್ತಾ ಕೇಳಿದ. ಅವನ ಕ್ರೌರ್ಯವೆಲ್ಲಾ ಅವನ ಮುಖದಲ್ಲಿ ಮೂಡಿದ್ದು ಗೆರೆಗೆರೆಯಲ್ಲೂ ಬರೆದಿತ್ತು.

'ಹಾಗೆ ಮಾಡಿದ್ದು ನಾನು! ಆತನಿಗಿಂತ ಮಿಗಿಲಾಗಿ ಅದು ನನ್ನ ತಪ್ಪು! ನೀವು ನನ್ನ ಮೇಲೇಕೆ ಸೇಡು ತೀರಿಸಿಕೊಳ್ಳಲಿಲ್ಲ?'

'ಅದರ ಹೊರೆಯನ್ನು ಆ ಕೆಂಪು ಅಕ್ಷರಕ್ಕೇ ಬಿಟ್ಟಿದ್ದೇನೆ. ಅದು ನನ್ನ ಪರವಾಗಿ ಸೇಡು ತೀರಿಸಿಕೊಳ್ಳದಿದ್ದರೆ ನಾನಿನ್ನೇನೂ ಮಾಡಲಾರೆ!'

ನಗುತ್ತಾ ಅದರ ಮೇಲೆ ತನ್ನ ಬೆಟ್ಟೂರಿದ ರೋಜರ್ ಚಿಲಿಂಗ್ ವರ್ತ್.

'ಅದು ನಿಮ್ಮ ಸೇಡನ್ನು ತೀರಿಸಿಕೊಂಡಿದೆ!' ಎಂದಳು ಹೆಸ್ಟರ್.

'ಅದರಲ್ಲಿ ಸಂದೇಹವೇ ಇಲ್ಲ ನನಗೆ. ಈಗ ಇವನ ವಿಷಯವಾಗಿ ನಾನು ಏನು ಮಾಡಬೇಕೆನ್ನುತ್ತಿ?'

'ನಾನು ಆತನಿಗೆ ಈ ರಹಸ್ಯವನ್ನು ಹೇಳಲೇಬೇಕು. ನೀವು ಯಾರೆಂಬುದು ಅವರಿಗೆ ತಿಳಿಯಲೇಬೇಕು. ಅದರ ಫಲಿತಾಂಶ ಏನಾಗುವುದೋ ನಾನು ಕಾಣೆ. ಆದರೆ ಇಷ್ಟು ದಿನ ಅವರ ಅಧಃಪತನಕ್ಕೆ ನಾನು ಕಾರಣಳಾಗಿದ್ದೆ. ಈಗಲಾದರೂ ನನ್ನ ಕರ್ತವ್ಯದ ಋಣವನ್ನು ತೀರಿಸುತ್ತೇನೆ. ಆತನ ಖ್ಯಾತಿ, ಜೀವ, ಮಾನಗಳ ಉಳಿವು–ಅಳಿವು ನಿಮ್ಮ ಕೈಯ್ಯಲ್ಲಿದೆ. ಈ ಕೆಂಪು ಅಕ್ಷರ ನನ್ನ ಹೃದಯವನ್ನು ಕಾದ ಕಬ್ಬಿಣದಂತೆ ಕೊರೆಯುತ್ತಿದ್ದರೂ ಅದರಿಂದ ನಾನು ಸತ್ಯದ ಪಾಠ ಕಲಿತಿದ್ದೇನೆ. ಆತ ಈ ಹೆದರಿಕೆಯ ಒಣಬಾಳನ್ನು ಸಾಗಿಸುವುದರಲ್ಲಿ ನನಗೇನೋ ಸಮ್ಮತಿಯಿಲ್ಲದುದರಿಂದ ನಾನು ನಿಮ್ಮಲ್ಲಿ ಭಿಕ್ಷೆಬೇಡಲು ಬಂದಿಲ್ಲ. ನಿಮಗೆ ಇಷ್ಟಬಂದಂತೆ ಮಾಡಿ! ಇದರಿಂದ ಆತನಿಗೂ ಸುಖವಿಲ್ಲ,—ನನಗೂ ಸುಖವಿಲ್ಲ,—ನಿಮಗೂ ಸುಖವಿಲ್ಲ! ಆ ಪುಟ್ಟ ಮಗುವಿಗೂ ಸುಖವಿಲ್ಲ! ಈ ಸುಳಿಯಿಂದ ತಪ್ಪಿಸಿಕೊಳ್ಳುವುದಕ್ಕೆ ಬೇರೆ ಮಾರ್ಗವೇ ಕಾಣುತ್ತಿಲ್ಲ!'

ಹೆಸ್ಟರ್ ಕಠಿಣವಾಗಿ ನುಡಿದಳು.

'ಅಯ್ಯೋ ಮೂರ್ಖ ಹೆಂಗಸೇ. ನಿನ್ನನ್ನು ನೋಡಿದರೆ ನನಗೆ ಕನಿಕರವಾಗುತ್ತದೆ! ನಿನ್ನ ಭಾವನೆಗಳೆಲ್ಲ ಬಹಳ ಉದಾತ್ತವಾಗಿದೆ. ಬಹುಶಃ ನನಗಿಂತ ಮೊದಲು ಇನ್ನಾರನ್ನಾದರೂ ನೀನು ಪ್ರೀತಿಸುತ್ತಿದ್ದರೆ ಇದು ಹೀಗಾಗುತ್ತಿರಲಿಲ್ಲವೆಂದು ಕಾಣುತ್ತದೆ. ನಿನ್ನ ಒಳ್ಳೆಯ ಗುಣಗಳೆಲ್ಲ ಹೀಗೆ ವ್ಯರ್ಥವಾಗುತ್ತಿರುವುದನ್ನು ಕಂಡು ನನಗೆ ಮರುಕವಾಗುತ್ತಿದೆ!' ಈ ಸ್ಥಿತಿಯಲ್ಲೂ ಅವಳು ತೋರುತ್ತಿದ್ದ ಮನಸ್ಥೈರ್ಯವನ್ನು ಕಂಡು ತನ್ನ ಅಚ್ಚರಿಯನ್ನು ಮುಚ್ಚಿಟ್ಟುಕೊಳ್ಳಲಾರದೆ ಹೇಳಿದ.

'ಸಾಧುವಾಗಿದ್ದು ಈಗ ಪಿಶಾಚಿಯಾಗಿ ಮಾರ್ಪಟ್ಟಿರುವ ನಿಮ್ಮನ್ನು ಕಂಡು ನನಗೂ ಕನಿಕರವಾಗುತ್ತಿದೆ! ನೀವು ಅದನ್ನು ದೂರ ತಳ್ಳಿ ಮತ್ತೊಮ್ಮೆ ಮಾನವರಾಗಲಾರಿರಾ? ಆತನಿಗಾಗಿ ಅಲ್ಲದಿದ್ದರೂ ನಿಮಗಾಗಿ ಯಾದರೂ ಆಗಲೇಬೇಕು. ಇದನ್ನು ಕ್ಷಮಿಸಿಬಿಟ್ಟು, ಶಿಕ್ಷೆ ವಿಧಿಸುವುದನ್ನು ಆ ಭಗವಂತನಿಗೆ ಬಿಟ್ಟುಬಿಡಿ! ನಾವು ಮಾಡಿದ ಪಾಪದಿಂದ ನಮಗಾರಿಗೂ ಸುಖವಿಲ್ಲದಾಗಿದೆ. ನಾನು ಆಗಲೇ ಹೇಳಿದಂತೆ ಸುಳಿಯಲ್ಲಿ ಸಿಕ್ಕಿ ಮಾರ್ಗ ಕಾಣದೆ ಪೇಚಾಡುತ್ತಿದ್ದೇವೆ. ನಮ್ಮನ್ನು ಕ್ಷಮಿಸುವುದು ನಿಮ್ಮ ಕೈಯ್ಯಲ್ಲಿದೆ. ನಮ್ಮಿಂದ ನೊಂದಿರುವ ನಿಮಗೆ, ನಿಮ್ಮೊಬ್ಬರಿಗೆ ಮಾತ್ರ ಒಳ್ಳೆಯದಾಗುತ್ತದೆ. ಅದರಿಂದ ಲಭಿಸುವ ಲಾಭವನ್ನು ತಳ್ಳಿ ಹಾಕುತ್ತೀರಾ?' ಎಂದು ಹೇಳಿದಳು ಹೆಸ್ಟರ್.

'ಸಾಕು ಹೆಸ್ಟರ್, ಸಾಕು! ಕ್ಷಮಿಸುವ ಅಧಿಕಾರ ನನ್ನ ಕೈಯ್ಯಲ್ಲಿಲ್ಲ. ನೀನು ಹೇಳುವ ಅಂತಹ ಶಕ್ತಿ ಯಾವುದೂ ನನಗಿಲ್ಲ. ನಮ್ಮ ನಮ್ಮ ಕರ್ಮ ನಾವು ಅನುಭವಿಸಲೇಬೇಕು. ನೀನು ಮೊದಲ ಬಾರಿಗೆ ಕಾಲು ಜಾರಿದಾಗಲೇ ವಿಷವೃಕ್ಷವನ್ನು ನೆಟ್ಟೆ. ಅದರ ಅವಶ್ಯ ಪರಿಣಾಮ ಇದು. ನನಗೆ ಅನ್ಯಾಯ ಮಾಡಿರುವ ನೀನು ಪಾಪಿಯಲ್ಲ, ನಾನು ಪಿಶಾಚಿಯೂ ಅಲ್ಲ, ಇದೆಲ್ಲ ನಮ್ಮ ವಿಧಿ. ಆ ಕರಿಯ ಪುಷ್ಪ ಹೇಗೆ ಬೇಕೋ ಹಾಗೆ ಅರಳಲಿ! ಇನ್ನು ಹೊರಡು. ಅವನೊಡನೆ ನಿನ್ನ ಇಷ್ಟ ಬಂದ ಹಾಗೆ ಮಾಡಿಕೊ ಹೋಗು.'

ಅವಳೆಡೆಗೆ ಕೈಬೀಸಿ, ಮತ್ತೆ ಮೂಲಿಕೆಗಳನ್ನು ಹೆಕ್ಕುವ ಕೆಲಸದಲ್ಲಿ ಮಗ್ನನಾದ.

## ೧೫

ರೋಜರ್ ಚಿಲಿಂಗ್‌ವರ್ತನ ವಿಕೃತರೂಪ ಹೆಸ್ಟರ್ ಪ್ರೈನ್‌ಳನ್ನು

ಬಿಟ್ಟು ಬಗ್ಗಿ ನೆಲವನ್ನೇ ಹುಡುಕುತ್ತಾ ಅಲ್ಲಿಂದ ಹೊರಟು ಹೋಯಿತು. ಅಲ್ಲೊಂದು ಮೂಲಿಕೆ, ಇಲ್ಲೊಂದು ಬೇರು ಕಿತ್ತುಕೊಂಡು ಕೈಲಿದ್ದ ಬುಟ್ಟಿಗೆ ಹಾಕಿಕೊಳ್ಳತೊಡಗಿದ. ಬಗ್ಗಿದಾಗ ಅವನ ನರೆತ ಗಡ್ಡ ನೆಲವನ್ನು ಮುಟ್ಟುತ್ತಿತ್ತು. ಅವನ್ನು ತುಳಿದ ಹಸಿರು ಹುಲ್ಲು ಬೆಂದು ಕಂದು ಬಣ್ಣಕ್ಕೆ ತಿರುಗುತ್ತದೇನೋ ಎಂಬ ಕುತೂಹಲದಿಂದ ಹೆಸ್ಟರ್ ಅವನನ್ನೇ ದಿಟ್ಟಿಸಿ ನೋಡುತ್ತಿದ್ದಳು. ಅವನು ಅಷ್ಟು ಆಸಕ್ತಿಯಿಂದ ಆರಿಸುತ್ತಿರುವ ಮೂಲಿಕೆ ಯಾವುದಿರಬಹುದೆಂದು ಅವಳಿಗೆ ಆಶ್ಚರ್ಯವಾಯಿತು. ಅವನ ಮೇಲೆ ಸಹಾನುಭೂತಿಯಿಂದ ಅವನು ಕೈಯಿಟ್ಟ ಕಡೆಯಲ್ಲೆಲ್ಲಾ ಭೂಮಿ ಒಂದೊಂದು ವಿಷಮೂಲಿಕೆಯನ್ನು ನೀಡುತ್ತಿತ್ತೆ? ಅಥವಾ ಮುಟ್ಟಿದ ಗಿಡಗಳೆಲ್ಲ ಒಳ್ಳೆಯವಾಗಿದ್ದರೂ ವಿಷವಾಗಿ ಪರಿಣಮಿಸುತ್ತಿತ್ತೆ? ಎಲ್ಲ ಕಡೆಯೂ ಬೆಳಗುತ್ತಿರುವ ಸೂರ್ಯರಶ್ಮಿ ಅವನ ಮೇಲೂ ಬೀಳುತ್ತಿತ್ತೆ? ಅವನ ವಿಕೃತ ರೂಪ ತಿರುಗಿದ ಕಡೆಯಲ್ಲೆಲ್ಲ ಅವನ ಸುತ್ತ ಒಂದು ಕರಾಳ ಛಾಯೆಯ ವೃತ್ತ ಕವಿದಿತ್ತೆ? ಅವನು ಎಲ್ಲಿಗೆ ಹೋಗುತ್ತಿದ್ದ? ಇದ್ದಕ್ಕಿದ್ದಂತೆ ಭೂಮಿ ಅವನನ್ನು ನುಂಗಿಬಿಡುತ್ತದೆಯೆ? ಅಥವಾ ರೆಕ್ಕೆ ಹರಡಿ ಬಾವಲಿಯಂತೆ ರೆಕ್ಕೆ ಬಡಿಯುತ್ತಾ ಮೇಲಕ್ಕೆ ಹಾರಿ, ಮೇಲ ಮೇಲಕ್ಕೆ ಹೋದಂತೆ ಮತ್ತಷ್ಟು ವಿಕಾರವಾಗಿ ಕಾಣುತ್ತಾನೆಯೆ?

'ಅದು ಪಾಪವೋ ಅಲ್ಲವೋ, ನಾನು ಅವನನ್ನು ದ್ವೇಷಿಸುತ್ತೇನೆ' ಅವನು ಹೋದ ಕಡೆಯೇ ದಿಟ್ಟಿಸುತ್ತ ಕಹಿಯಾಗಿ ನುಡಿದಳು ಹೆಸ್ಟರ್.

ಅದನ್ನು ಅವಳ ಮನವೊಪ್ಪದಿದ್ದರೂ ಆ ಭಾವನೆಯನ್ನು ತೊರೆಯುವುದಕ್ಕಾಗಲೀ, ಅದನ್ನು ಕಡಮೆ ಮಾಡಿಕೊಳ್ಳುವುದಾಗಲೀ ಅವಳಿಂದ ಸಾಧ್ಯವಾಗಲಿಲ್ಲ. ಆಗ ಅವಳಿಗೆ ಹಿಂದಿನ ದಿನಗಳ ನೆನಪಾಯಿತು. ದಿನವೆಲ್ಲ ಒಂಟಿಯಾಗಿ ವ್ಯಾಸಂಗ ಮಾಡುತ್ತಿದ್ದು ಸಂಜೆಯ ಹೊತ್ತು ಮಾತ್ರ ಅವನು ಆಚೆಗೆ ಬರುತ್ತಿದ್ದ. ಕೋಣೆಯಲ್ಲಿ ಉರಿಯುತ್ತಿದ್ದ ಬೆಂಕಿಯ ಬೆಳಕಿನಲ್ಲಿ, ಆ ಹೊಸ ಮದುವಣಗಿತ್ತಿಯ ಮುಖದ ಮೇಲೆ ನಲಿಯುತ್ತಿದ್ದ ನಗುವಿನ ಬೆಳಕಿನಲ್ಲಿ ಕುಳಿತಿರುತಿದ್ದ. ಅವಳ ನಲುವಿನಲ್ಲಿ ಮಿಂದು, ಒಂಟಿಯಾಗಿ ದಿನವೆಲ್ಲಾ ವ್ಯಾಸಂಗ ಮಾಡಿ ಬೇಸತ್ತಿದ್ದ ತನಗೆ ಉಲ್ಲಾಸವುಂಟಾಗುತ್ತಿತ್ತೆಂದು ಹೇಳುತ್ತಿದ್ದ. ಈ ನೆನಪುಗಳು, ಒಂದಾನೊಂದು ಕಾಲದಲ್ಲಿ ಸಂತೋಷವುಂಟುಮಾಡುತ್ತಿತ್ತಾದರೂ ಈಗ ಅವಳ ಜೀವನದಲ್ಲೇ ಅತ್ಯಂತ ಕಹಿಯಾದ ನೆನಪುಗಳಾಗಿ ಉಳಿಯಿತು. ಅಂತಹ ಗಳಿಗೆಗಳೆಲ್ಲಾ ಹೇಗಿರುತ್ತಿದ್ದವೋ!—ಅವನನ್ನು ಮದುವೆಯಾಗುವುದಕ್ಕೆ ತಾನು ಹೇಗೆ ಒಪ್ಪಿ

ಕೊಂಡೆನೋ !—ಎಂದು ಅವಳಿಗೇ ಅಚ್ಚರಿಯಾಯಿತು. ಅವಳು ಎಲ್ಲದಕ್ಕಿಂತ ಹೆಚ್ಚಾಗಿ ಮಾಡಿದ ಅಪರಾಧ, ಅದಕ್ಕಾಗಿ ಪಡುತ್ತಿದ್ದ ಪಶ್ಚಾತ್ತಾಪವೆಂದರೆ, ಅವನ ಅರೆಬೆಚ್ಚನೆಯ ಹಿಡಿತದಲ್ಲಿ ಸಿಕ್ಕುತ್ತಿದ್ದುದು. ಅವರಿಬ್ಬರ ಕಣ್ಣು-ತುಟಿಗಳು ಬೆರೆತಾಗಲಂತೂ ಅವಳ ಮನಸ್ಸಿಗೆ ತುಂಬಾ ಯಾತನೆಯಾಗುತ್ತಿತ್ತು. ಮಿಕ್ಕವರು ಅವನಿಗೆ ಮಾಡಿದ ಅನ್ಯಾಯಕ್ಕಿಂತ ಮಿಗಿಲಾದುದು ರೋಜರ್ ಚಿಲಿಂಗ್‌ವರ್ತ್ ಮಾಡಿದ್ದ ಅಪರಾಧ. ಆಗ ಏನೂ ಅರಿಯದಿದ್ದ ಅವಳನ್ನು ಬಲವಂತದಿಂದ ಒಪ್ಪಿಸಿ ತನ್ನವಳನ್ನಾಗಿ ಮಾಡಿಕೊಂಡಿದ್ದ.

'ನಾನು ಅವನನ್ನು ದ್ವೇಷಿಸುವುದು ನಿಜ! ನನ್ನ ಜೀವನವನ್ನು ಹಾಳುಮಾಡಿಬಿಟ್ಟ! ನಾನು ಮಾಡಿರುವುದಕ್ಕಿಂತ ಹೆಚ್ಚಾಗಿ ಅವನೇ ನನಗೆ ಅನ್ಯಾಯ ಮಾಡಿದ್ದಾನೆ!' ಹೆಸ್ಟರ್ ಮೊದಲಿಗಿಂತ ಕಹಿಯಾಗಿ ಮತ್ತೆ ಮತ್ತೆ ಹೇಳಿಕೊಂಡಳು.

ತಾನಾಗಿಯೇ ಒಲಿದು ಬಾರದಿರುವ ಹೆಣ್ಣನ್ನು ಬಲಪಂತವಾಗಿ ತನ್ನವಳನ್ನಾಗಿ ಮಾಡಿಕೊಳ್ಳುವ ಗಂಡಸರು ಎಚ್ಚರಿಕೆಯಿಂದಿರಲಿ! ಇಲ್ಲದಿದ್ದಲ್ಲಿ ಅವರ ಸ್ಥಿತಿಯೂ ರೋಜರ್ ಚಿಲಿಂಗ್‌ವರ್ತ್‌ನ ಹಣೆಬರಹದಂತಾದೀತು! ಈ ಅನ್ಯಾಯದಿಂದ ಹೆಸ್ಟರ್ ಎಂದೋ ಪಾರಾಗಬೇಕಾಗಿತ್ತು. ಈ ಏಳು ವರ್ಷಗಳು ಕೆಂಪು ಅಕ್ಷರವನ್ನು ಧರಿಸಿ ಅದರಿಂದ ಅವಳು ಪಡುತ್ತಿದ್ದ ಯಾತನೆ ಸಾಲದೆ? ಅದರಿಂದ ಅವಳು ತುಂಬ ಪಶ್ಚಾತ್ತಾಪ ಪಡುತ್ತಿರಲಿಲ್ಲವೆ?

ರೋಜರ್ ಚಿಲಿಂಗ್‌ವರ್ತ್‌ನ ವಿಕೃತ ರೂಪದ ಕಡೆಯೇ ದಿಟ್ಟಿಸುತ್ತ ನಿಂತಿದ್ದ ಆ ಕೆಲವು ಕ್ಷಣಗಳಲ್ಲಿಯೇ ಹೆಸ್ಟರಳ ಮನಸ್ಸಿನಲ್ಲಿ ಅನೇಕ ಕೆಟ್ಟ ಭಾವನೆಗಳು ಸುಳಿದುಹೋದವು. ಅವಳು ಯಾವಾಗಲೂ ಈ ರೀತಿಯಾಗಿ ಯೋಚಿಸಿದ್ದಿಲ್ಲ.

ಅವನು ಅಲ್ಲಿಂದ ಹೊರಟುಹೋಗಿದ್ದ. ಹೆಸ್ಟರ್ ತನ್ನ ಮಗುವನ್ನು ಕೂಗಿದಳು.

'ಪರ್ಲ್! ಮಗೂ, ಪರ್ಲ್! ಎಲ್ಲಿದ್ದೀಯ?'

ತನ್ನ ತಾಯಿ ಆ ಮುದುಕನೊಡನೆ ಮಾತನಾಡುತ್ತಿರುವಷ್ಟು ಹೊತ್ತೂ ತುಂಬ ಲವಲವಿಕೆಯಿಂದ ಉಲ್ಲಾಸದಿಂದ ಪರ್ಲ್ ಆಡಿಕೊಳ್ಳುತ್ತಿದ್ದಳು. ಈ ಮೊದಲೇ ಹೇಳಿದಂತೆ ನೀರಿನಲ್ಲಿ ಕಂಡ ತನ್ನ ಪ್ರತಿಬಿಂಬದೊಡನೆ ಆಡಲು ಪ್ರಯತ್ನಿಸಿ, ಅದು ಸಾಗದೆ—ತಮ್ಮಿಬ್ಬರಲ್ಲಿ ಯಾರೋ

ಮಿಥ್ಯವೆಂದು ಭಾವಿಸಿ ಬೇರೆ ಆಟದ ಕಡೆಗೆ ಗಮನವಿತ್ತಳು. ಗಿಡದ ತೊಗಟೆಯಿಂದ ಸಣ್ಣ ಸಣ್ಣ ದೋಣಿಗಳನ್ನು ಮಾಡಿ, ಅದರಲ್ಲಿ ಕಪ್ಪೆಚಿಪ್ಪು ಗಳನ್ನೂ, ಶಂಖಗಳನ್ನೂ ತುಂಬಿ ನೀರಿನ ಮೇಲೆ ತೇಲಿಬಿಡುತ್ತಿದ್ದಳು. ಆ ದೋಣಿಗಳಲ್ಲಿ ಹೊರಲಾರದಷ್ಟು ಭಾರವನ್ನು ಹೇರುತ್ತಿದ್ದುದರಿಂದ ಅವೆಲ್ಲ ದಡದಲ್ಲೇ ಮುಳುಗಿ ಹೋಗುತ್ತಿದ್ದವು. ಪರ್ಲ್ ಬೇಕಾದಷ್ಟು ಏಡಿ ಗಳನ್ನು ಹಿಡಿದಳು. ಒಂದು ಮೀನನ್ನು ಹಿಡಿದು ಬಿಸಿಲಿನಲ್ಲಿ ಒಣಗಲು ಹಾಕಿದಳು. ದಡಕ್ಕೆ ಬಡಿಯುತ್ತಿರುವ ಅಲೆಯ ಅಂಚಿನಲ್ಲಿದ್ದ ನೊರೆಯನ್ನು ತೆಗೆದು ಮೇಲಕ್ಕೆ ಎಸೆದು, ಗಾಳಿಯಲ್ಲಿ ಅದು ತೇಲಿ ಬರುವಾಗ ಅದನ್ನು ಮತ್ತೆ ಹಿಡಿಯಲು ಪ್ರಯತ್ನಿಸಿದಳು. ಅಲ್ಲೊಂದು ಜಲಪಕ್ಷಿಗಳ ಗುಂಪು ಕಾಣಿಸಿತು. ತನ್ನ ಲಂಗದಲ್ಲಿ ತುಂಬ ಸಣ್ಣ ಸಣ್ಣ ಕಲ್ಲುಗಳನ್ನೂ ತುಂಬಿ ಕೊಂಡು, ಬಂಡೆಯಿಂದ ಬಂಡೆಗೆ ಹಾರುತ್ತಾ ಅವನ್ನು ಅಟ್ಟಿಸಿಕೊಂಡು ಹೋಗಿ ಗುರಿಯಿಟ್ಟು ಕಲ್ಲೆಸೆಯತೊಡಗಿದಳು. ಬಿಳಿಯ ಎದೆಯುಳ್ಳ ಬೂದಿ ಬಣ್ಣದ ಹಕ್ಕಿಯೊಂದು ತಾನು ಎಸೆದ ಕಲ್ಲಿನ ಏಟಿಗೆ ಸಿಕ್ಕಿ ರೆಕ್ಕೆ ಮುರಿದುಕೊಂಡು ರೆಕ್ಕೆ ಬಡಿಯುತ್ತಾ ಓಡಿಹೋಯಿತು. ಅದನ್ನು ಕಂಡು ಪರ್ಲ್‌ಗೆ ತುಂಬ ದುಃಖವಾಯಿತು. ಕಲ್ಲೆಸೆಯುವುದನ್ನು ನಿಲ್ಲಿಸಿಬಿಟ್ಟಳು.

ಅನಂತರ ಅಲ್ಲಿ ಬಿದ್ದಿದ್ದ ವಿಧವಿಧವಾದ ಶಂಖ ಚಿಪ್ಪುಗಳನ್ನೆಲ್ಲಾ ಆರಿಸಿ ಅವನ್ನೆಲ್ಲಾ ಕಟ್ಟಿ ಜಲಕನ್ಯೆಯರಂತೆ ಅಲಂಕರಿಸಿಕೊಳ್ಳತೊಡಗಿ ದಳು. ತಾಯಿಯಂತೆಯೇ ಅವಳಿಗೂ ಕಸೂತಿಯ ಕೈ ಚಳಕ ಹುಟ್ಟಿ ನಿಂದಲೇ ಬಂದಿತ್ತು. ತನ್ನ ಸಿಂಗಾರವನ್ನು ಪೂರೈಸಲು, ಅಲ್ಲಿದ್ದ ಗರಿಕೆ ಹುಲ್ಲನ್ನು ಕಿತ್ತು, ಸಾಧ್ಯವಾದಮಟ್ಟಿಗೂ ತನ್ನ ತಾಯಿಯ ಎದೆಯ ಮೇಲಿನ ಆಭರಣವನ್ನು ಹೋಲುವಂತೆ ಮಾಡಿಕೊಳ್ಳಲು ಪ್ರಯತ್ನಿಸಿದಳು ಆ ಅಕ್ಷರ—ಎ (A)—ಕೆಂಪಾಗಿರುವ ಬದಲು ಹಸುರಾಗಿತ್ತು ! ತನ್ನ ಎದೆಯ ಮೇಲೆ ತಲೆ ಬಾಗಿಸಿಕೊಂಡು, ಅದರ ಅರ್ಥವೇನಿರಬಹುದೆಂದು ಯೋಚಿಸು ವಂತೆ ಅದನ್ನೇ ತುಂಬ ಆಸಕ್ತಿಯಿಂದ ನೋಡತೊಡಗಿದಳು.

'ಇದು ಏನು ಅಂತ ಅಮ್ಮ ಕೇಳುತ್ತಾಳೆಯೋ ಏನೋ !' ಎಂದು ಕೊಂಡಳು ಪರ್ಲ್.

ತಕ್ಷಣ ತನ್ನ ತಾಯಿಯ ದನಿ ಕೇಳಿಸಿತು. ತಕ್ಷಣ ಹಕ್ಕಿಯಂತೆ ಹಾರುತ್ತಾ, ನೆಗೆಯುತ್ತಾ, ನಗುತ್ತಾ ತಾಯ ಬಳಿಗೆ ಓಡಿಬಂದು ತನ್ನೆದೆಯ ಮೇಲಿದ್ದ ಆಭರಣವನ್ನು ತೋರಿಸಿದಳು.

'ಪರ್ಲ್ ಇದೇನು ಈ ಹಸಿರು ಅಕ್ಷರ. ನಿನ್ನಂಥ ಪುಟ್ಟ ಮಕ್ಕಳು

ಹಾಕಿಕೊಳ್ಳಬಾರದು. ಅದನ್ನು ಧರಿಸುವ ದುರ್ವಿಧಿ ನನ್ನದಾಗಿದೆ. ಆ ಅಕ್ಷರದ ಅರ್ಥವೇನೆಂದು ಗೊತ್ತೆ ?'

'ಗೊತ್ತಮ್ಮ. ಅದು ಎ (A) ಅನ್ನುವ ಅಕ್ಷರ. ಪುಸ್ತಕದಲ್ಲಿ ನೀನೇ ಹೇಳಿಕೊಟ್ಟಿದ್ದೀಯೆ.'

ಹೆಸ್ಟರ್ ಅವಳನ್ನೇ ದಿಟ್ಟಿಸಿ ನೋಡತೊಡಗಿದಳು. ಪರ್ಲ್ ಆ ಚಿಹ್ನೆಗೆ ದಿಟವಾಗಿಯೂ ಅರ್ಥ ಕಲ್ಪಿಸಿದ್ದಾಳೆಯೋ ಎಂದು ಖಚಿತಮಾಡಿಕೊಳ್ಳಲಾರದೆ ಮತ್ತೆ ಕೇಳಿದಳು.

'ನಿನ್ನ ತಾಯಿ ಇದನ್ನು ಏಕೆ ಧರಿಸುತ್ತಾಳೆನ್ನುವುದು ನಿನಗೆ ಗೊತ್ತೆ ಮಗು ?'

'ನಿಜವಾಗಿಯೂ ಗೊತ್ತು. ಆ ಪಾದ್ರಿ ಯಾವ ಕಾರಣಕ್ಕೋಸ್ಕರ ಎದೆಯ ಮೇಲೆ ಕೈಯಿಟ್ಟುಕೊಳ್ಳುತ್ತಾನೆಯೋ ಅದೇ ಕಾರಣಕೋಸ್ಕರವೇ!'

ಮಗುವಿನ ಹುಚ್ಚು ಮಾತನ್ನು ಕೇಳಿ ಮೊದಲು ಕೊಂಚ ನಗು ಬಂದರೂ, ತಕ್ಷಣ ಹೆಸ್ಟರ್‌ಳ ಮುಖ ವಿವರ್ಣವಾಯಿತು. 'ಅದು ಯಾವ ಕಾರಣ ಹೇಳು ? ನನ್ನ ಹೃದಯವೊಂದನ್ನು ಬಿಟ್ಟರೆ ಮಿಕ್ಕ ಯಾರ ಹೃದಯಕ್ಕೂ ಈ ಅಕ್ಷರದಿಂದ ಏನಾಗಬೇಕಾಗಿದೆ ?'

'ಅದೇನೋಮ್ಮ, ನನಗೆ ಗೊತ್ತಿರುವಷ್ಟು ಹೇಳಿದೆ. ನೀನು ಮಾತಾಡುತ್ತಿದೆಯಲ್ಲ, ಆ ಮುದುಕನನ್ನು ಕೇಳು ! ಅವನಿಗೆ ತಿಳಿದಿರಬಹುದು. ಹೌದಮ್ಮ, ಆದರೆ ನಿಜವಾಗಿಯೂ ಈ ಕೆಂಪು ಅಕ್ಷರದ ಅರ್ಥವೇನಮ್ಮ? ಅದನ್ನು ಯಾಕಮ್ಮ ನೀನು ಎದೆಯ ಮೇಲೆ ಧರಿಸುವುದು ? ಅದೂ ಅಲ್ಲದೆ ಆ ಪಾದ್ರಿ ಏಕಮ್ಮ ಎದೆಯ ಮೇಲೇ ಕೈಯ್ಯಿಟ್ಟುಕೊಂಡಿರುತ್ತಾನೆ ?' ಕಾತುರಳಾಗಿ ಕೇಳಿದಳು ಪರ್ಲ್.

ತನ್ನ ತಾಯಿಯ ಎರಡು ಕೈಗಳನ್ನೂ ತನ್ನ ಕೈಯಲ್ಲಿ ತೆಗೆದುಕೊಂಡು ಎವೆಯಿಕ್ಕದೆ ತುಂಬ ಆಸಕ್ತಿಯಿಂದ ಮುಖವನ್ನೇ ನೋಡುತ್ತಿದ್ದಳು. ಈ ಆಸಕ್ತಿ ಹಿಂದೆಂದೂ ಅವಳ ತುಂಟ ಸ್ವಭಾವದಲ್ಲಿ ಕಂಡುಬರಲಿಲ್ಲ. ಇಷ್ಟು ದಿನ ತಾನು ಎಳೆಯ ಮಗುವೆಂದು ಭಾವಿಸಿದ್ದ ಪರ್ಲ್‌ಳನ್ನು ಈಗ ಸ್ನೇಹಿತೆಯಂತೆ ಪರಿಗಣಿಸುವ ವಯಸ್ಸು ಬಂದಿದೆಯೆಂದು ಇದ್ದಕ್ಕಿದ್ದ ಹಾಗೆ ಹೆಸ್ಟರ್‌ಳ ಮನಸ್ಸಿಗೆ ಬಂತು. ಅವಳೊಡನೆ ತನ್ನ ದುಃಖವನ್ನೂ ತೋಡಿಕೊಳ್ಳಬಹುದೆಂದೆನಿಸಿತು. ಪರ್ಲ್‌ಳಲ್ಲಿ ಈಗೀಗ ಒಂದು ವಿಧವಾದ ಎದೆಗಾರಿಕೆ, ಸ್ವಾಭಿಮಾನ, ಸುಳ್ಳಿನ ಸುಳಿವಿದ್ದ ಸಂಗತಿಯನ್ನು ಕಂಡರೆ ದ್ವೇಷ, ಈ ವಿಧವಾದ ಗುಣಗಳು ಬೆಳೆದುಬರುತ್ತಿದ್ದವು. ಅವಳಿಗೆ ಅಭಿಮಾನಗಳೂ

ಇದ್ದುವು—ಕೊಂಚ ಹುಳಿಯಾದರೂ ದೋರೆಕಾಯಿ ರುಚಿಯಾಗಿರುವಂತೆ, ಈ ಗುಣಗಳನ್ನೆಲ್ಲಾ ನೋಡಿ ಹೆಸ್ಟರ್‌ಗೆ ಅನ್ನಿಸಿತು,—ಈ ತುಂಟ ಮಗು ಬೆಳೆದ ಮೇಲೆ ಗಂಭೀರ ಮಹಿಳೆಯಾಗದಿದ್ದ ಪಕ್ಷದಲ್ಲಿ ತನ್ನ ತಾಯಿಯಿಂದ ಪಡೆದು ಬಂದಿರುವ ಕೆಟ್ಟ ಗುಣಗಳು ತುಂಬ ಎಂದು.

ಕೆಂಪು ಅಕ್ಷರದ ಸಮಸ್ಯೆಯನ್ನು ಬಿಡಿಸಲು ಯಾವಾಗಲೂ ಚಡಪಡಿಸುತ್ತಿರುವುದೇ ಪರ್‍ಲ್‌ಳ ಗುಣಗಳಲ್ಲೊಂದಾಗಿತ್ತೆಂದು ಕಾಣುತ್ತದೆ. ಬುದ್ಧಿ ಬಂದಂದಿನಿಂದ ಅವಳಿಗೆ ಇದೇ ಕೆಲಸವೇ ಆಗಿತ್ತು. ತನಗೆ ಪ್ರಾಯಶ್ಚಿತ್ತ ಮಾಡಲು ದೇವರೇ ಮಗುವಿಗೆ ಆ ರೀತಿ ಬುದ್ಧಿ ಕೊಟ್ಟಿರುವನೆಂದು ಹೆಸ್ಟರ್ ಅನೇಕ ಬಾರಿ ಅಂದುಕೊಳ್ಳುತ್ತಿದ್ದಳು. ಆದರೆ ಇಂದು, ಪ್ರಾಯಶ್ಚಿತ್ತದ ಜೊತೆಗೆ ಕರುಣೆಯಿಂದ ತನ್ನನ್ನು ಉದ್ಧಾರ ಮಾಡುವ ಉದ್ದೇಶವೂ ಇರಬಹುದೆಂದೆನಿಸಿತು.

ಹೆಸ್ಟರ್‌ಳ ಮನಸ್ಸಿನಲ್ಲಿ ಸುಳಿಯುತ್ತಿದ್ದ ಈ ಯೋಚನೆಗಳೆಲ್ಲ ಎಷ್ಟು ಪ್ರಭಾವ ಬೀರಿದ್ದುವೆಂದರೆ, ಅವನ್ನೆಲ್ಲಾ ಯಾರೋ ತನ್ನ ಕಿವಿಯಲ್ಲಿ ಪಿಸುಗುಟ್ಟಿದಂತೆ ಆಗುತ್ತಿತ್ತು. ಇಷ್ಟು ಹೊತ್ತೂ ಪರ್‍ಲ್ ತನ್ನ ತಾಯಿಯ ಎರಡು ಕೈಗಳನ್ನೂ ಹಿಡಿದುಕೊಂಡು, ತಲೆಯೆತ್ತಿ ತಾನು ಪುನಃ ಪುನಃ ಕೇಳುತ್ತಿದ್ದ ಪ್ರಶ್ನೆಯನ್ನೇ ಮತ್ತೆ ಕೇಳಿದಳು.

'ಈ ಅಕ್ಷರದ ಅರ್ಥ ಏನಮ್ಮ? ನೀನೇಕೆ ಅದನ್ನು ಧರಿಸುತ್ತೀಯೆ?–ಪಾದ್ರಿ ಏಕೆ ಎದೆಯ ಮೇಲೆ ಕೈಯಿಟ್ಟುಕೊಂಡಿರುತ್ತಾನೆ?'

'ನಾನೇನು ಹೇಳಲಿ? ಇಲ್ಲ! ಮಗುವಿನ ಸಹಾನುಭೂತಿಯ ಬೆಲೆ ಇದೇ ಆದರೆ, ನಾನು ತೆರಲಾರೆ.' ತನ್ನಲ್ಲೇ ಅಂದುಕೊಂಡಳು ಹೆಸ್ಟರ್.

ಅನಂತರ ಜೋರಾಗಿ ಮಾತನಾಡಿದಳು.

'ಹುಚ್ಚು ಹುಡುಗಿ! ಏನು ಪ್ರಶ್ನೆಗಳು ನೀನು ಕೇಳುತ್ತಿರುವುದು? ಚಿಕ್ಕ ಮಕ್ಕಳಿಗೆ ತಿಳಿಯಬಾರದಂಥ ವಿಷಯಗಳು ಈ ಪ್ರಪಂಚದಲ್ಲಿ ಅನೇಕ ವಿವೆ. ಪಾದ್ರಿಯ ಹೃದಯದ ಸಂಗತಿ ನನಗೇನು ಗೊತ್ತು? ಈ ಕೆಂಪು ಅಕ್ಷರ ಮಾತ್ರ, ಅದರಲ್ಲಿ ಚಿನ್ನದ ದಾರವಿದೆ ನೋಡು, ಅದಕ್ಕೋಸ್ಕರ ಧರಿಸುತ್ತೇನೆ' ಎಂದಳು.

ಕಳೆದ ಈ ಏಳು ವರ್ಷಗಳಲ್ಲಿ ತನ್ನೆದೆಯ ಮೇಲಿದ್ದ ಚಿಹ್ನೆಯ ಬಗ್ಗೆ ಎಂದೂ ಸುಳ್ಳಾಡಿರಲಿಲ್ಲ. ಇಷ್ಟು ದಿನ ಅವಳ ಬೆಂಗಾವಲಿಗಾಗಿದ್ದ ಯಾವುದೋ ಶಕ್ತಿ ಅವಳನ್ನು ತ್ಯಜಿಸಿರಬೇಕು. ಮನಸ್ಸನ್ನು ಬಹಳ ಭದ್ರವಾಗಿ ಕಾಯುತ್ತಿದ್ದರೂ ಯಾವುದೋ ದುಷ್ಟ ಶಕ್ತಿ ಒಳಕ್ಕೆ ನುಸುಳಿರ

ಬೇಕು; ಅಥವಾ ಹೊರದೂಡಲು ಸಾಧ್ಯವಿಲ್ಲದ ಹಳೆಯದೊಂದು ಶಕ್ತಿ ಅಲ್ಲಿದ್ದಿರಬೇಕು. ಪರ್ಲ್‌ಳಿಗೆ ಮಾತ್ರ, ಮುಖದಲ್ಲಿದ್ದ ಆಸಕ್ತಿಯೇ ಮಾಯವಾಯಿತು.

ಆದನ್ನು ಮರೆತುಬಿಡುವುದು ಯೋಗ್ಯವಲ್ಲವೆಂದು ಪರ್ಲ್‌ಗೆ ತೋರಿರಬೇಕು. ಮನೆಗೆ ಹೋಗುತ್ತಿರುವಾಗ ಎರಡು ಮೂರು ಬಾರಿ, ರಾತ್ರಿ ಊಟದ ಹೊತ್ತಿನಲ್ಲಿ, ಮಲಗಿಕೊಳ್ಳುವಾಗ ಚೆನ್ನಾಗಿ ನಿದ್ರೆ ಹತ್ತಿರುವಂತೆ ಕಾಣುತ್ತಿರುವ ಸಮಯದಲ್ಲೂ ಪರ್ಲ್ ತುಂಟ ದೃಷ್ಟಿಯಿಂದ ನೋಡುತ್ತಲೇ ಇದ್ದಳು.

ಅಮ್ಮ, ಆ ಕೆಂಪು ಅಕ್ಷರದ ಅರ್ಥವೇನು ?

ಮಾರನೆಯ ದಿನ ಬೆಳಗ್ಗೆ ಎಚ್ಚರವಾದ ಕೂಡಲೇ ದಿಂಬಿನಿಂದ ತಲೆಯೆತ್ತಿ, ಆ ಪ್ರಶ್ನೆಗೆ ಸಂಬಂಧವಿದ್ದ ಇನ್ನೊಂದು ಪ್ರಶ್ನೆಯನ್ನೂ ಕೇಳಿದಳು,—

ಅಮ್ಮಾ, ಅದೇಕಮ್ಮಾ ಪಾದ್ರಿ ಎದೆಯ ಮೇಲೆ ಕೈಯಿಟ್ಟುಕೊಂಡೇ ಇರುತ್ತಾನೆ?

ಹೆಸ್ಟರ್‌ಗೆ ಹಿಂದೆಂದೂ ಬಾರದಂಥ ಕೋಪ ಬಂತು. 'ಮುಚ್ಚು ಬಾಯಿ, ಕೆಟ್ಟ ಹುಡುಗಿ! ನನ್ನ ರೇಗಿಸಬೇಡ! ರೇಗಿಸಿದರೆ ಕತ್ತಲೆಯ ಕೋಣೆಯಲ್ಲಿ ಕೂಡಿಸಿಬಿಡುತ್ತೇನೆ!' ಎಂದಳು.

## ೧೬

[illegible]ಷ್ಟ ಬರಲಿ, ರೋಜರ್ ಚಿಲಿಂಗ್‌ವರ್ತ್‌ನ ವಿಷಯವನ್ನು ಡಿಮ್ಸ್‌ಡೇಲನಿಗೆ ಹೇಳಿಯೇ ಬಿಡಬೇಕೆಂದು ಹೆಸ್ಟರ್ ಪ್ರೈನ್ ನಿರ್ಧಾರ ಮಾಡಿಬಿಟ್ಟಿದ್ದಳು. ಅವನು ಸಾಧಾರಣವಾಗಿ ಅಲೆದಾಡಲು ಹೋಗುತ್ತಿದ್ದ ಸಮುದ್ರದ ದಂಡೆಯ ಮೇಲೋ, ಅಥವಾ ಕಾಡಿನಿಂದ ಕೂಡಿದ ಗುಡ್ಡಗಳ ಮೇಲೋ ಅವನನ್ನು ಸಂಧಿಸಿ ಅವನೊಡನೆ ಮಾತನಾಡಬೇಕೆಂದು ಅನೇಕ ದಿನಗಳಿಂದ ಅವಳು ಪ್ರಯತ್ನಿಸಿದರೂ ಸಾರ್ಥಕವಾಗಲಿಲ್ಲ. ನಿರ್ಭಯವಾಗಿ ಅವಳು ಅವನ ಮನೆಗೇ ಹೋಗಿ ಅವನೊಡನೆ ಮಾತನಾಡಿಸಿದ್ದರೂ ಯಾವ ಕೆಟ್ಟ ವದಂತಿಯೂ ಹಬ್ಬುವ ಸಂಭವವಿರಲಿಲ್ಲ; ಹಾಗಿತ್ತು ಅವನ ಒಳ್ಳೆಯ ಖ್ಯಾತಿ. ಅನೇಕ ಮಂದಿ ಅಪರಾಧ ಮಾಡಿ ಅದಕ್ಕಾಗಿ ಅವನಲ್ಲಿ ಪಶ್ಚಾತ್ತಾಪ ಸೂಚಿಸಲು ಅಲ್ಲಿಗೆ ಹೋಗುತ್ತಿದ್ದುದುಂಟು. ಅವಳಿಗೆ ಸ್ವಲ್ಪ ಮಟ್ಟಿಗೆ ರೋಜರ್ ಚಿಲಿಂಗ್‌ವರ್ತ್‌ನ ಭಯವೊಂದಿತ್ತು. ಆದುದರಿಂದ

ಮನೆಯಿಂದ ಹೊರಗಡೆಯೇ ಎಲ್ಲಾದರೂ ಅವನನ್ನೂ ಸಂಧಿಸುವುದು ಉತ್ತಮವೆನಿಸಿತು.

ಕಡೆಗೊಂದು ದಿನ ಹೆಸ್ಟರ್ ಖಾಯಿಲೆಯ ಮನೆಯೊಂದಕ್ಕೆ ಹೋದಳು. ರೆ|| ಡಿಮ್ಸ್‌ಡೇಲನೂ ಅಲ್ಲಿಗೆ ಪ್ರಾರ್ಥನೆ ಮಾಡುವುದಕ್ಕಾಗಿ ಬರಬೇಕಾಗಿತ್ತು. ಆದರೆ ಹಿಂದಿನ ದಿನ ತಾನೆ ಅವನು ಪರಿವರ್ತಿತ ರೆಡ್ ಇಂಡಿಯನ್ನರ ಪಂಗಡದವನಾದ ಈಲಿಯಟ್ ಎಂಬವರ ಪ್ರಚಾರವನ್ನು ನೋಡಲು ಹೋಗಿದ್ದನಂತೆ. ಮಾರನೆಯ ಮಧ್ಯಾಹ್ನ ಬರಬಹುದೆಂದು ತಿಳಿಯಿತು. ಮಾರನೆಯ ದಿನ ಹೆಸ್ಟರ್–ಇಷ್ಟವಿರಲಿ ಇಲ್ಲದಿರಲಿ ತನ್ನನ್ನೇ ಅಂಟಿಕೊಂಡಿದ್ದ–ಪರ್ಲ್‌ಳನ್ನು ಕರೆದುಕೊಂಡು ಹೊರಟಳು.

ದೊಡ್ಡ ರಸ್ತೆಯನ್ನು ದಾಟಿದ ಕೂಡಲೇ ಕಾಡಿನೊಳಕ್ಕೆ ಹೋಗುವ ಕಾಲು ಹಾದಿ ಸಿಕ್ಕಿತು. ಇಕ್ಕಟ್ಟಾದ ಆ ಕಾಲುಹಾದಿಯ ಎರಡು ಪಕ್ಕಗಳಲ್ಲಿಯೂ ಆಕಾಶವೇ ಕಾಣದಂತೆ ದಟ್ಟವಾಗಿ ಮರಗಳು ಬೆಳೆದಿದ್ದವು. ಅದನ್ನು ನೋಡಿ ಹೆಸ್ಟರ್‌ಳಿಗೆ ತಾನು ಇಷ್ಟು ದಿನ ಅನುಭವಿಸುತ್ತಿದ್ದ, ಮನಸ್ಸಿನ ಗೊಂದಲದ ನೆನಪಾಯಿತು. ನೆತ್ತಿಯ ಮೇಲೆ ಸರಿಯಾಗಿ ಸ್ವಲ್ಪವೂ ಅಲುಗಾಡದ ದೊಡ್ಡದೊಂದು ಮೋಡ ಕವಿದಿತ್ತು. ಆಗೊಮ್ಮೆ ಈಗೊಮ್ಮೆ ಗಾಳಿ ಬೀಸಿ ಅದು ಚಲಿಸುವಾಗ ಬಿಸಿಲು ಆಗಾಗ್ಗೆ ಆ ಹಾದಿಯ ಮೇಲೆ ಬಿದ್ದು ಮತ್ತೆ ಮಾಯವಾಗಿತ್ತು. ಆ ಬಿಸಿಲು ಯಾವಾಗಲೂ ಇವರಿಗಿಂತ ಬಹಳ ದೂರದಲ್ಲೇ ಬಿದ್ದಿರುವಂತೆ ಕಾಣಿಸುತ್ತಿತ್ತು. ಪ್ರಕಾಶಮಾನವಾಗಿರುತ್ತದೆಂದು ಅವರು ಭಾವಿಸಿ ಬಂದ ಸ್ಥಳದಿಂದ ಬಿಸಿಲು ಸುರಿಯುತ್ತಿದ್ದುದರಿಂದ ಅವರಿಗೆ ಆ ಸ್ಥಳ ಮತ್ತಷ್ಟು ಮಂಕಾಗಿ ಕಾಣಿಸುತ್ತಿತ್ತು.

'ಅಮ್ಮಾ, ಆ ಬಿಸಿಲಿಗೆ ನಿನ್ನ ಕಂಡರೆ ವಿಶ್ವಾಸವಿಲ್ಲ ನಿನ್ನೆದೆಯ ಮೇಲಿರುವುದನ್ನು ನೋಡಿ ಅದು ಹೆದರಿಕೊಂಡು ಓಡಿಹೋಗಿ ಅವಿತುಕೊಳ್ಳುತ್ತಿದೆ. ಬೇಕಾದರೆ ನೋಡು, ಇಲ್ಲಿಯೇ ನಿಂತುಕೊ. ನಾನು ಹೋಗಿ ಅದನ್ನು ಮುಟ್ಟುತ್ತೇನೆ ನಾನಿನ್ನೂ ಮಗು. ಅದು ನನ್ನಿಂದ ಓಡಿಹೋಗುವುದಿಲ್ಲ. ಏಕೆಂದರೆ ನಾನು ನನ್ನ ಎದೆಯ ಮೇಲೆ ಇನ್ನೂ ಏನೂ ಧರಿಸಿಲ್ಲ!' ಎಂದಳು ಪರ್ಲ್.

'ನೀನು ಎಂದಿಗೂ ಅದನ್ನು ದರಿಸುವುದೂ ಬೇಡ ಮಗು' ಎಂದಳು ಹೆಸ್ಟರ್.

'ಅದೇಕಮ್ಮ ಬೇಡ? ನಾನು ದೊಡ್ಡವಳಾದ ಮೇಲೆ ಅದು ತಾನಾ

ಗಿಯೇ ಬರುವುದಿಲ್ಲವೇ ?' ಓಡಲು ತೊಡಗಿದ್ದ ಪರ್ಲ್ ತಕ್ಷಣ ನಿಂತು ಕೇಳಿದಳು.

'ಓಡು ಮಗು. ಬಿಸಿಲನ್ನು ಹಿಡಿದುಕೊ. ಇಲ್ಲದಿದ್ದರೆ ಅದು ಓಡಿ ಹೋಗಿಬಿಡುತ್ತದೆ' ಎಂದಳು ಅವಳ ತಾಯಿ.

ಹೆಸ್ಟರ್ ನಗುತ್ತಾ ನೋಡುತ್ತಿದ್ದಂತೆಯೇ ಪರ್ಲ್ ವೇಗವಾಗಿ ಓಡಿ ಆ ಬಿಸಿಲನ್ನು ಮುಟ್ಟಿಯೇ ಬಿಟ್ಟಳು. ಓಟದ ರಭಸದಿಂದ ಕೆಂಪೇರಿ, ಆ ಬಿಸಿಲಿನ ಪ್ರಕಾಶದಲ್ಲಿ ನಗುತ್ತ ನಿಂತಿದ್ದ ಅವಳ ಮುಖ ತುಂಬ ಮುದ್ದಾಗಿ ಕಾಣುತ್ತಿತ್ತು. ಹೆಸ್ಟರ್ ಆ ಬೆಳಕಿನ ವೃತ್ತದಲ್ಲಿ ನುಗ್ಗುವಷ್ಟು ಹತ್ತಿರ ಬರುವವರೆಗೂ, ಸಂಗಾತಿಯೊಡನೆ ಆಡುವಂತೆ ಬೆಳಕು ಮಗುವಿನ ಸುತ್ತ ನಲಿಯುತ್ತಿತ್ತು.

'ಈಗ ಅದು ಹೊರಟುಹೋಗುತ್ತದೆ' ತಲೆಯಾಡಿಸುತ್ತ ಹೇಳಿದಳು ಪರ್ಲ್.

'ಇಲ್ಲ ನೋಡು, ಬೇಕಾದರೆ ಕೈಚಾಚಿ ಅದನ್ನು ಹಿಡಿದುಕೊಳ್ಳು ತ್ತೇನೆ' ನಗುತ್ತಾ ನುಡಿದಳು ಹೆಸ್ಟರ್.

ಹಾಗೆ ಮಾಡಲು ಅವಳು ಪ್ರಯತ್ನಿಸಿದ ಕ್ಷಣವೇ ಬಿಸಿಲು ಅಲ್ಲಿಂದ ಮಾಯವಾಯಿತು. ಪರ್ಲ್‌ಳ ಮುಖದ ಮೇಲೆ ನಲಿಯುತ್ತಿದ್ದ ಬೆಳಕನ್ನು ನೋಡಿದರೆ, ತನ್ನ ಮಗುವೇ ಅದೆಲ್ಲವನ್ನೂ ಹೀರಿಕೊಂಡಳೇನೋ ಎನ್ನಿಸು ತ್ತಿತ್ತು ತಾಯಿಗೆ.

ಇನ್ನೂ ಬಿಸಿಲಲ್ಲೇ ನಿಂತಿದ್ದ ಮಗಳನ್ನು ನೋಡಿ ಹೆಸ್ಟರ್, 'ಬಾ ನನ್ನ ಕಂದ ! ಕಾಡಿನೊಳಕ್ಕೆ ಹೋಗಿ ಕುಳಿತು ವಿಶ್ರಮಿಸಿಕೊಳ್ಳುವ' ಎಂದಳು.

'ನನಗೇನೂ ಆಯಾಸವಾಗಿಲ್ಲವಮ್ಮ. ಕಥೆಯನ್ನು ಹೇಳುವಿ ಯಾದರೆ, ನೀನು ಮಾತ್ರ ಕುಳಿತುಕೊಳ್ಳಬಹುದು' ಎಂದಳು ಆ ಪುಟ್ಟ ಹುಡುಗಿ.

'ಕಥೇನೆ! ಯಾವ ಕತೆ ಮಗು ?'

'ಆ ಕಪ್ಪು ಮನುಷ್ಯನ ಕತೆಯಮ್ಮ. ಈ ಕಾಡಿನಲ್ಲೇ ಒಂದು ದೊಡ್ಡ ಪುಸ್ತಕ ಹೊತ್ತುಕೊಂಡು ಅಲೆಯುತ್ತಿರುತ್ತಾನೆ. ಆ ಪುಸ್ತಕಕ್ಕೆ ಕಬ್ಬಿಣದ ಕೀಲಿರುತ್ತದೆ. ಕಾಡಿನಲ್ಲಿ ತನಗೆ ಸಿಕ್ಕಿದವರಿಗೆಲ್ಲಾ ಕಬ್ಬಿಣದ ಲೇಖಣಿಯನ್ನು ಕೊಟ್ಟು, ತಮ್ಮ ರಕ್ತದಿಂದಲೇ ಅದರಲ್ಲಿ ಹೆಸರು ಬರೆಯು ವಂತೆ ಹೇಳುತ್ತಾನೆ. ಆಮೇಲೆ ಅವರ ಎದೆಯ ಮೇಲೆ ತನ್ನ ಮುದ್ರೆ

ಯೊತ್ತಿ ಕಳುಹಿಸುತ್ತಾನೆ. ನೀನು ಆ ಕುರೂಪಿಯಾದ ಕರಿ ಮನುಷ್ಯನನ್ನು ಎಂದಾದರೂ ನೋಡಿದ್ದೀಯಾ ಅಮ್ಮಾ?'

ಅದು ಬಳಿಕೆಯಲ್ಲಿದ್ದ ಮೂಢ ನಂಬಿಕೆ ಎನ್ನುವುದು ಹೆಸ್ಟರ್‌ಳಿಗೆ ತಿಳಿಯಿತು. 'ಯಾರು ನಿನಗೆ ಈ ಕತೆಯನ್ನೆಲ್ಲಾ ಹೇಳಿದರು ಪರ್ಲ್?' ಎಂದು ಕೇಳಿದಳು.

'ಆ ಚಿಮಣಿ ಮನೆಯಲ್ಲಿರುವ ಮುದುಕಿ ಹೇಳುತ್ತಿದ್ದಳು. ಅದೇ ನಿನ್ನೆ ರಾತ್ರಿ ನೀನು ಕಾಯುತ್ತ ಕುಳಿತಿದ್ದೆಯಲ್ಲಮ್ಮ, ಆ ಮನೆ. ನಾನು ನಿದ್ರೆ ಮಾಡುತ್ತಿದ್ದೇನೆಂದುಕೊಂಡು ಅವಳು ಇದನ್ನು ಹೇಳುತ್ತಿದ್ದಳು. ಅವನನ್ನು ನೋಡಿದ ಸಾವಿರಾರು ಜನ, ಪುಸ್ತಕದಲ್ಲಿ ತಮ್ಮ ಹೆಸರು ಬರೆದು ಎದೆಯ ಮೇಲೆ ಮುದ್ರೆಯೊತ್ತಿಸಿಕೊಂಡಿದ್ದರಂತೆ. ಅವರಲ್ಲಿ ಆ ಕೆಟ್ಟ ಮುದುಕಿ ಮಿಸ್ಟ್ರೆಸ್ ಹಿಬ್ಬನ್ಸ್ ಇಲ್ಲವೇನಮ್ಮ, ಅವಳೂ ಒಬ್ಬಳಂತೆ. ಅದೂ ಅಲ್ಲದೆ ಅಮ್ಮ, ಆ ಮುದುಕಿ ಹೇಳುತ್ತಿದ್ದಳು—ನಿನ್ನೆದೆಯ ಮೇಲಿರುವ ಈ ಕೆಂಪು ಅಕ್ಷರವೂ ಆ ಕಪ್ಪು ಮನುಷ್ಯನ ಮುದ್ರೆಯಂತೆ! ನೀನು ಮಧ್ಯ ರಾತ್ರಿಯ ಕತ್ತಲಲ್ಲಿ ಅವನನ್ನು ಈ ಕಾಡಿನಲ್ಲಿ ಸಂಧಿಸಿದಾಗ ಅದು ಕೆಂಪು ಜ್ವಾಲೆಯಂತೆ ಉರಿಯುವುದಂತೆ. ಅದು ನಿಜವೇನಮ್ಮ? ನೀನು ರಾತ್ರಿಯ ಹೊತ್ತು ಅವನನ್ನು ನೋಡಲು ಹೋಗುತ್ತೀಯ?' ಎಂದಳು ಆ ಮಗು.

'ನಿನಗೆ ಯಾವಾಗಲಾದರೂ ಎಚ್ಚರಿಕೆಯಾದಾಗ ನಾನು ಹೊರಟು ಹೋಗಿರುವುದನ್ನು ಕಂಡಿದ್ದೀಯೇನು?' ಎಂದಳು ಹೆಸ್ಟರ್.

'ನನಗೆ ಜ್ಞಾಪಕವಿರುವಂತೆ ಹಾಗೇನೂ ಇಲ್ಲ. ನನ್ನೊಬ್ಬಳನ್ನೇ ಗುಡಿಸಲಲ್ಲಿ ಬಿಟ್ಟು ಹೋಗಲು ನಿನಗೆ ಭಯವಾದರೆ, ಬೇಕಾದರೆ ನನ್ನನ್ನೂ ಕರೆದುಕೊಂಡು ಹೋಗು. ಸಂತೋಷದಿಂದ ಬರುತ್ತೇನೆ! ಆದರೆ, ನಿಜ ವಾಗಿಯೂ ಅಂಥ ಕಪ್ಪು ಮನುಷ್ಯನಿದ್ದಾನೇನಮ್ಮ? ನೀನು ಅವನನ್ನು ಯಾವಾಗಲಾದರೂ ನೋಡಿದ್ದೀಯಾ? ಇದು ಅವನ ಮುದ್ರೆಯೇನಮ್ಮ?'

'ನಾನು ಈ ಒಂದು ಸಲ ಹೇಳಿದರೆ, ನನ್ನನ್ನು ಪೀಡಿಸದೆ ಸುಮ್ಮ ನಿರುತ್ತೀಯ?'

'ನೀನು ಎಲ್ಲ ಹೇಳುವುದಾದರೆ, ಆಗಲಿ.'

'ಹಿಂದೊಮ್ಮೆ ನಾನು ಆ ಕಪ್ಪು ಮನುಷ್ಯನನ್ನು ನೋಡಿದ್ದೆ! ಈ ಕೆಂಪು ಅಕ್ಷರ ಅವನದೇ ಮುದ್ರೆ!' ಎಂದಳು ಹೆಸ್ಟರ್.

ಹೀಗೆಯೇ ಹರಟುತ್ತಾ ಕಾಡಿನೊಳಕ್ಕೆ ಹೋಗಿ, ಆ ಕಾಲು ದಾರಿ ಯಲ್ಲಿ ಸುಳಿದಾಡುವವರ ಕಣ್ಣಿಗೆ ಕಾಣದಿರುವ ಸ್ಥಳಕ್ಕೆ ಹೋದರು. ಅಲ್ಲಿ

ಬಿದ್ದಿದ್ದ ಒಂದು ದೊಡ್ಡ ಒಣಗಿದ ಮರದ ಮೇಲೆ ಇಬ್ಬರೂ ಕುಳಿತು ಕೊಂಡರು. ಸುತ್ತಲೂ ತರಗೆಲೆಗಳು ಬಿದ್ದಿದ್ದವು. ಅವರ ಮಧ್ಯೆ ಒಂದು ಸಣ್ಣ ಝರಿ ಹರಿಯುತ್ತಿತ್ತು. ಅದರ ಪಕ್ಕದಲ್ಲಿ ಬೆಳೆದುಕೊಂಡಿದ್ದ ದೊಡ್ಡ ಮರಗಳ ಭಾರಿ ಕೊಂಬೆಗಳು ಅದರಲ್ಲಿ ಅದ್ದಿಕೊಂಡಿದ್ದುದರಿಂದ, ಝರಿಯ ಓಟಕ್ಕೆ ತಡೆಯಾಗಿ ಅಲ್ಲಲ್ಲೇ ಸುಳಿಗಳು ಸುತ್ತುತ್ತಿದ್ದವು. ಕೆಲವು ಕಡೆ ತುಂಬ ಆಳವಾಗಿಯೂ ಇತ್ತು. ಝರಿ ವೇಗವಾಗಿ ಹರಿಯುತ್ತಿರುವ ಹೆಚ್ಚು ಆಳವಿಲ್ಲದ ಸ್ಥಳಗಳಲ್ಲಿ ಸಣ್ಣ ಪುಟ್ಟ ಕಲ್ಲುಗಳೂ, ಮಿರುಗುತ್ತಿರುವ ಮರಳೂ ಕಾಣುತ್ತಿತ್ತು. ಆ ಹೊಳೆಯ ಮೇಲೆ ಬಿದ್ದಿದ್ದ ಬೆಳಕು ಪ್ರತಿ ಬಿಂಬಿತವಾಗಿ ಅಲ್ಲಿದ್ದ ದೊಡ್ಡ ಗಿಡಗಳ ಮತ್ತು ಪೊದೆಗಳ ಸಂದಿಯಲ್ಲಿ ಮಾಯವಾಗಿತ್ತು. ಅಲ್ಲಲ್ಲೇ ಪಾಚಿ ಬೆಳೆದುಕೊಂಡಿರುವ ಭಾರಿ ಬಂಡೆ ಗಳೂ ಇದ್ದವು. ತಾನು ಕಾಡಿನೊಳಗೆ ಕಂಡದ್ದನ್ನೆಲ್ಲಾ ಎಲ್ಲಿ ಪಿಸುಗುಟ್ಟು ವುದೋ, ಅಥವಾ ಕೊಳವಾಗಿ ನಿಂತು ಎಲ್ಲಿ ಅವನ್ನೆಲ್ಲಾ ಪ್ರತಿಬಿಂಬಿಸು ವುದೋ ಎನ್ನುವ ಭಯದಿಂದ ಆ ಭಾರಿ ಮರಗಳೂ, ಬಂಡೆಗಳೂ ಝರಿಯ ದಾರಿಯಲ್ಲಿ ಅಡ್ಡವಾಗಿ ನಿಂತು ಅದರ ದಾರಿಯನ್ನು ತಿರುಗು ಮುರುಗು ಮಾಡುವಂತೆ ಕಾಣುತ್ತಿತ್ತು. ಮಂಕಾದ ಆವರಣದಲ್ಲೇ ಬೆಳೆದು, ಉಲ್ಲಾಸವನ್ನೇ ಕಾಣದಿದ್ದ ಪುಟ್ಟ ಮಗುವಿನ ದನಿಯಂತಿತ್ತು ಆ ಝರಿ ಮೆಲ್ಲನೆ ಹರಿಯುತ್ತ ಮಾಡುತ್ತಿದ್ದ ಕಲಕಲ ನಿನಾದ.

ಅದರ ಶಬ್ದವನ್ನೇ ಸ್ವಲ್ಪ ಹೊತ್ತು ಆಲಿಸುತ್ತಿದ್ದ ಪರ್ಲ್—'ಥೂ, ಹಾಳು ಝರಿ, ಬೇಜಾರು ಹಿಡಿಸುತ್ತಿದ್ದೀಯೆ. ಏಕೆ ಸಪ್ಪಗಿದ್ದೀಯ ನೀನು? ಸ್ವಲ್ಪ ಉಲ್ಲಾಸ ತಂದುಕೊ. ಸುಮ್ಮನೆ ಮೂರು ಹೊತ್ತು ನಿಟ್ಟುಸಿರು ಬಿಡುತ್ತಾ ಗೊಣಗಾಡುತ್ತಿರಬೇಡ' ಎಂದಳು.

ಆ ಕಾಡಿನ ಮುಸುಕಿನಲ್ಲೇ ಜೀವನ ನಡೆಸಿದ್ದ ಆ ಝರಿ, ಅದನ್ನು ಬಿಟ್ಟು ಬೇರೆಯುವುದನ್ನೂ ಮಾತನಾಡುವಂತಿರಲಿಲ್ಲ. ಪರ್ಲ್ ಕೂಡ ಆ ಝರಿಯನ್ನೇ ಹೋಲುತ್ತಿದ್ದಳು. ಆದರೆ ಅದರಂತೆ ಸಪ್ಪಗಿರದೆ ಅವಳು ಕುಣಿಯುತ್ತಾ ನಲಿಯುತ್ತಾ ಮುಂದೆ ಸಾಗಿದ್ದಳು.

'ಈ ಸಪ್ಪಗಿರುವ ಝರಿ ಏನು ಹೇಳುತ್ತಿದೆಯಮ್ಮ?' ಎಂದು ತಾಯಿ ಯನ್ನು ಕೇಳಿದಳು.

'ಈಗ ನನಗೆ ನನ್ನ ದುಃಖವನ್ನು ಹೇಳುತ್ತಿರುವಂತೆ, ನಿನಗೊಂದು ದುಃಖವಿದ್ದಿದ್ದರೆ, ನಿನಗೂ ಹೇಳುತ್ತಿತ್ತು! ನೋಡು ಪರ್ಲ್ ಯಾರೋ ಬರುತ್ತಿರುವ ಹಾಗಿದೆ. ಕಾಲು ಸಪ್ಪಳ ಕೇಳುತ್ತಿದೆ. ಅಲ್ಲಿ ಬರುತ್ತಿರು

ವಾತನ ಹತ್ತಿರ ನಾನು ಮಾತನಾಡಬೇಕಾಗಿದೆ. ನೀನು ಹೋಗಿ ಆಡಿಕೊ' ಎಂದಳು ಹೆಸ್ಟರ್.

'ಅವನೇನೇನು ಕಪ್ಪು ಮನುಷ್ಯ?' ಎಂದು ಕೇಳಿದಳು.

'ನೀನು ಹೋಗಿ ಆಡಿಕೊಳ್ಳುತ್ತೀಯೋ ಇಲ್ಲವೋ ಮಗು? ಹೋಗು. ಆದರೆ ಒಂದು ಸಲ ಕೂಗಿದ ತಕ್ಷಣ ಓಡಿಬರಬೇಕು. ತಿಳಿಯಿತೆ?'

'ಆಗಲಿ ಅಮ್ಮ. ಆದರೆ ಅವನು ಕಂಕುಳಲ್ಲಿ ದೊಡ್ಡ ಪುಸ್ತಕ ಹೊತ್ತಿರುವ ಕಪ್ಪುಮನುಷ್ಯನೇ ಆಗಿದ್ದರೆ, ಒಂದು ಕ್ಷಣ ಇದ್ದು ಅವನನ್ನು ನೋಡಿಕೊಂಡು ಹೋಗಲೇನಮ್ಮ?'

'ಹೋಗೆ ಹುಚ್ಚಿ! ಆತ ಕಪ್ಪು ಮನುಷ್ಯನಲ್ಲ! ಗಿಡದ ಮರೆಯಲ್ಲಿರುವ ಆತ ನಿನಗೆ ಕಾಣಿಸುತ್ತಿಲ್ಲ. ಆತ ಪಾದ್ರಿ!'

'ಓಹೋ ಹೌದು! ನೋಡಮ್ಮ ಎದೆಯಮೇಲೆ ಕೈಯಿಟ್ಟುಕೊಂಡೇ ಇದ್ದಾನೆ! ಅದೇಕಮ್ಮ, ಪುಸ್ತಕದಲ್ಲಿ ಹೆಸರು ಬರೆದ ಮೇಲೆ ಕಪ್ಪು ಮನುಷ್ಯ ಮುದ್ರೆ ಒತ್ತಿದುದರಿಂದಲೆ? ಆದರೆ ನಿನ್ನ ಹಾಗೆ ಅವನು ಬಟ್ಟೆಯ ಮೇಲೆ ಧರಿಸಿಕೊಳ್ಳುವುದಿಲ್ಲ!'

'ಈಗ ಸುಮ್ಮನೆ ಹೋಗು ಮಗು. ನನ್ನನ್ನು ಕೀಟಲೆ ಮಾಡಬೇಕಾದರೆ ಇನ್ನಾವಾಗಾದರೂ ಮಾತಾಡುವಿಯಂತೆ. ದೂರ ಹೋಗಬೇಡ ಝರಿಯ ಶಬ್ದ ಕೇಳಿಸುತ್ತಿರುವಷ್ಟು ದೂರದಲ್ಲಿಯೇ ಇರು' ಎಂದಳು ಹೆಸ್ಟರ್.

ಝರಿಯ ಆರ್ತಧ್ವನಿಯ ಜೊತೆಗೆ ಉಲ್ಲಾಸವನ್ನು ಬೆರಸಲೆನ್ನುವಂತೆ ಹಾಡಿಕೊಳ್ಳುತ್ತಾ ಮಗು ಓಡಿಹೋಯಿತು. ಆದರೂ ಝರಿಗೆ ಅದರಿಂದ ಸಮಾಧಾನವಾದಂತೆ ಕಾಣಲಿಲ್ಲ. ತಾನು ಕಂಡ ಯಾವುದೋ ದುಃಖಕರ ರಹಸ್ಯವನ್ನು ಗೊಣಗುಟ್ಟುತ್ತಿತ್ತು; ಅಥವಾ ಆ ಕಾಡಿನಲ್ಲಿ ಮುಂದೆ ಆಗಬಹುದಾಗಿದ್ದುದನ್ನು ಕುರಿತು ದುಃಖಿಸುತ್ತಿತ್ತು. ಪರ್ಲ್‌ಗೆ ತುಂಬ ಬೇಸರವಾಯಿತು. ಅಲ್ಲಿದ್ದ ದೊಡ್ಡ ಬಂಡೆಯ ಮೇಲೆ ಬೆಳೆದಿದ್ದ ನೀಲಿ ಮತ್ತು ಕೆಂಪು ಹೂಗಳನ್ನು ಶೇಖರಿಸತೊಡಗಿದಳು.

ಆ ತುಂಟ ಮಗು ಅತ್ತ ಹೊರಟು ಹೋದ ಮೇಲೆ ಹೆಸ್ಟರ್ ಪ್ರೈನ್ ತಾನೂ ಎದ್ದು ಕಾಲು ದಾರಿಯ ಕಡೆಗೆ ಒಂದೆರಡು ಹೆಜ್ಜೆಹಾಕಿ ಮತ್ತೆ ಆ ನೆರಳಿನಲ್ಲೇ ನಿಂತಳು. ದಾರಿಯಲ್ಲಿ ಮುರಿದುಕೊಂಡಿದ್ದ ಒಂದು ಕೋಲನ್ನು ಹಿಡಿದು ಪಾದ್ರಿ ನಿಧಾನವಾಗಿ ಆ ಕಾಲುದಾರಿಯಲ್ಲಿ ಮುಂದುವರಿಯುತ್ತಿದ್ದ

ಅವನ ಮುಖ ಮೊದಲೇ ಕಳೆಗುಂದಿಹೋಗಿತ್ತು. ಈ ಕಾಡಿನ ಏಕಾಂತ ದಲ್ಲಿ ಅದು ಮತ್ತಷ್ಟು ಎದ್ದು ಕಾಣುತ್ತಿತ್ತು. ಅವನ ನಡಗೆಯಲ್ಲಿ ಚೈತನ್ಯವೇ ಇರಲಿಲ್ಲ; ಯಾವುದಾದರೂ ಗಿಡದ ಕೆಳಗೆ ಬಿದ್ದುಕೊಂಡು ನಿರಂತರವಾಗಿ ಮಲಗಿಬಿಡಬೇಕೆನ್ನುವಂತಿತ್ತು. ಅವನಲ್ಲಿ ಜೀವವಿರಲಿ ಇಲ್ಲದಿರಲಿ, ತರಗೆಲೆಗಳು ಅವನನ್ನು ಕವಿದು ಅವನ ಸುತ್ತ ಹುತ್ತ ಬೆಳೆಯ ಬಹುದಾಗಿತ್ತು. ಬಯಸಲಿ, ಬಿಡಲಿ ಸಾವು ಮಾತ್ರ ಖಂಡಿತವಾಗಿತ್ತು.

ಹೆಸ್ಟರ್ ಕಣ್ಣಿಗೆ ಅವನು ಅನುಭವಿಸುತ್ತಿರುವ ಯಾತನೆಯ ಚಿಹ್ನೆ ಗಳೇನೂ ಬೀಳಲಿಲ್ಲ. ಆದರೆ ಪರ್ಲ್ ಹೇಳಿದ ಹಾಗೆ, ಎದೆಯ ಮೇಲೆ ಕೈಯ್ಯಿಟ್ಟುಕೊಂಡಿದ್ದ.

## ೧೭

ಪಾದ್ರಿ ನಿಧಾನವಾಗಿ ನಡೆದು ಹೋಗುತ್ತಿದ್ದ. ಹೆಸ್ಟರ್ ಅವನನ್ನು ಕೂಗಲು ದನಿಗೂಡಿಸಿಕೊಳ್ಳುವುದೇ ಪ್ರಯಾಸವಾಯಿತು.

'ಆರ್ಥರ್ ಡಿಮ್ಸ್‌ಡೇಲ್!' ಎಂದು ಮೊದಲು ಮೆಲ್ಲನೆ ಕೂಗಿದಳು. ಮತ್ತೆ ಜೋರಾಗಿ ಕೂಗು ಹಾಕಿದಳು—'ಆರ್ಥರ್ ಡಿಮ್ಸ್‌ಡೇಲ್ !'

'ಯಾರು ಕರೆಯುತ್ತಿರುವುದು ?' ಎಂದ ಪಾದ್ರಿ.

ತನ್ನನ್ನು ಈ ಸ್ಥಿತಿಯಲ್ಲಿ ಯಾರೂ ನೋಡಬಾರದೆಂದಿರುವವನಂತೆ ಸರ್ರನೆ ನೆಟ್ಟಗೆ ನಿಂತುಕೊಂಡ. ದನಿ ಬಂದ ಕಡೆಗೆ ಕಾತುರನಾಗಿ ಕಣ್ಣು ಹೊರಳಿಸಿದ. ಮಂಕಾದ ಬಟ್ಟೆ ಧರಿಸಿ ಆ ಕತ್ತಲ ನೆರಳಲ್ಲಿ ನಿಂತಿರುವುದು ಹೆಂಗಸೋ ಅಥವಾ ನೆರಳೋ ಎಂದು ತಿಳಿಯಲಿಲ್ಲ. ತನ್ನನ್ನೇ ಬೆನ್ನು ಹಿಡಿದಿರುವ ಭೂತವೋ ಏನೋ ಎನ್ನಿಸಿತು.

ಸ್ವಲ್ಪ ಹತ್ತಿರಕ್ಕೆ ಸರಿದು ನೋಡಿದಾಗ ಕೆಂಪು ಅಕ್ಷರ ಕಾಣಿಸಿತು.

'ಹೆಸ್ಟರ್ ! ಹೆಸ್ಟರ್ ಪ್ರೈನ್ ! ನೀನೇಯೇನು ? ಜೀವಂತವಾಗಿದ್ದೀಯಷ್ಟೆ ?' ಎಂದ.

'ಕಳೆದ ಏಳು ವರ್ಷಗಳಿಂದ ಹೇಗೆ ಜೀವಂತವಾಗಿದ್ದೆನೋ, ಈಗಲೂ ಹಾಗೆಯೇ ಇದ್ದೇನೆ. ನೀವು ಮಾತ್ರ ಇನ್ನೂ ಬದುಕಿದ್ದೀರೇನು ?' ಎಂದಳು ಹೆಸ್ಟರ್.

ಅವರಿಬ್ಬರೂ ಒಬ್ಬರನ್ನೊಬ್ಬರು ಹೀಗೆ ಕೇಳಿದುದರಲ್ಲಿ ಆಶ್ಚರ್ಯ ವೇನಿಲ್ಲ. ದೇಹಗಳು ಇನ್ನೂ ಇರುವುದೇ ಅವರಿಗೆ ಸಂದೇಹ ವಾಗಿತ್ತು. ಅವರಿಬ್ಬರೂ ಸಂಧಿಸಿದ್ದು ದೇಹವನ್ನು ತ್ಯಜಿಸಿದ ಎರಡು ಆತ್ಮ

ಗಳು, ತಮ್ಮ ಈ ಹೊಸ ಸ್ಥಿತಿಗೆ ಇನ್ನೂ ಪಳಗದೆ, ಒಂದನ್ನೊಂದು ಕಂಡು ಬೆದರುವಂತಿತ್ತು. ಒಂದು ಪ್ರೇತ ಇನ್ನೊಂದು ಪ್ರೇತವನ್ನು ಕಂಡು ಹೆದರಿದಂತೆ ಅವರಿಗೂ ಒಬ್ಬರನ್ನೊಬ್ಬರು ಕಂಡು ಭಯವಾಗಿತ್ತು! ಹೆದರುತ್ತಲೇ ಆರ್ಥರ್ ಡಿಮ್ಸ್‌ಡೇಲ್ ತನ್ನ ಕೊರೆಯುತ್ತಿರುವ ತಣ್ಣನೆಯ ಕೈಚಾಚಿ ಹೆಸ್ಟರ್‌ಳ ತಣ್ಣನೆಯ ಕೈಯನ್ನು ಸ್ಪರ್ಶಿಸಿದ. ತಣ್ಣಗಿದ್ದರೂ ಆ ಸ್ಪರ್ಶದಿಂದ ಪರಸ್ಪರ ಮೂಡಿದ್ದ ಭಯ ಮಾಯವಾಯಿತು. ತಾವಿಬ್ಬರೂ ಇನ್ನೂ ಒಂದೇ ಜಗತ್ತಿನ ಜೀವಿಗಳಾಗಿರುವುದರ ಅರಿವು ಇಬ್ಬರಿಗೂ ಉಂಟಾಯಿತು.

ಹೆಚ್ಚು ಮಾತನಾಡದೆ ಇಬ್ಬರೂ ಕಾಡಿನ ಮರೆಯೊಳಕ್ಕೆ ಮತ್ತೆ ಹೋಗಿ ಹೆಸ್ಟರ್ ಮತ್ತು ಪರ್ಲ್ ಮೊದಲು ಕುಳಿತಿದ್ದ ಸ್ಥಳದಲ್ಲಿಯೇ ಕುಳಿತರು. ಮೊದಮೊದಲು, ಹೊಸಬರಂತೆ, ವಾಯುಗುಣ, ಮೋಡ ಮುಚ್ಚಿದ ಆಕಾರ, ಪರಸ್ಪರ ಆರೋಗ್ಯ ಇವುಗಳಿಂದ ಮಾತು ಪ್ರಾರಂಭಿಸಿದರು. ಹೀಗೆಯೇ ಮಾತನಾಡುತ್ತಾ ತಮ್ಮಿಬ್ಬರ ಹೃದಯವನ್ನು ಕೊರೆಯುತ್ತಿರುವ ವಿಷಯದ ಕಡೆ ಮಾತು ಹೊರಳಿತು. ವಿಧಿ ನಿಯಮದಂತೆ ಇಷ್ಟು ದಿನ ಅಗಲಿದ್ದ ಅವರಿಗೆ ಮಾತು ಪ್ರಾರಂಭಿಸಲು ಏನಾದರೂ ವಿಷಯ ಬೇಕಾಗಿತ್ತು.

ಸ್ವಲ್ಪ ಹೊತ್ತಾದಮೇಲೆ ಪಾದ್ರಿ, ಹೆಸ್ಟರ್‌ಳನ್ನೇ ನೋಡುತ್ತ—

'ನಿನಗೆ ಶಾಂತಿ ದೊರೆತಿದೆಯೆ ಹೆಸ್ಟರ್?' ಎಂದು ಕೇಳಿದ.

ಅವಳು ಮಂಕಾಗಿ ನಗುತ್ತಾ ತನ್ನ ಎದೆಯನ್ನೇ ನೋಡಿಕೊಂಡು,

'ನಿಮಗೆ?' ಎಂದು ಕೇಳಿದಳು.

'ಏನೂ ಇಲ್ಲ. ಬರಿಯ ದುಃಖ ಅಷ್ಟೆ! ಹೀಗೆ ಕಾಲ ತಳ್ಳುತ್ತಿರುವ ಸ್ಥಿತಿಯಲ್ಲಿ ನನಗೇನು ದೊರೆಯುತ್ತದೆ? ನಾನೊಬ್ಬ ನಾಸ್ತಿಕನಾಗಿ, ಹೃದಯವಿಲ್ಲದ ಕಟುಕನಾಗಿದ್ದರೆ ನನಗೆ ಶಾಂತಿ ದೊರೆತು ಎಷ್ಟೋ ಕಾಲವಾಗಿರುತ್ತಿತ್ತು. ಆದರೆ ಈಗ ನನ್ನ ಆತ್ಮ ಇರುವ ಸ್ಥಿತಿಯಲ್ಲಿ, ನನ್ನ ಒಳ್ಳೆಯತನ, ದೇವರು ನನಗೆ ಕರುಣಿಸಿದ್ದ ಗುಣಗಳೆಲ್ಲ ಈಗ ಯಾತನೆಗಳಾಗಿವೆ. ನಾನು ತುಂಬ ಹೀನಸ್ಥಿತಿಯಲ್ಲಿದ್ದೇನೆ ಹೆಸ್ಟರ್!' ಎಂದು ಉತ್ತರಕೊಟ್ಟ.

'ಜನರು ನಿಮ್ಮಲ್ಲಿ ಭಕ್ತಿಯಿಟ್ಟಿದ್ದಾರೆ. ಖಂಡಿತವಾಗಿಯೂ ನೀವು ಅವರಿಗೆ ಒಳ್ಳೆಯದನ್ನೇ ಮಾಡುತ್ತಿದ್ದೀರಿ! ಇದರಿಂದಲೂ ನಿಮಗೆ ಶಾಂತಿ ದೊರೆತಿಲ್ಲವೆ?'

'ಇನ್ನಷ್ಟು ದುಃಖ ಹೆಸ್ಟರ್! ಹೆಚ್ಚು ಹೆಚ್ಚು ದುಃಖ ಅಷ್ಟೆ! ನಾನು ಒಳ್ಳೆಯದನ್ನು ಮಾಡುತ್ತಿರುವಂತೆ ಕಂಡರೂ, ನನಗೇ ಅದರಲ್ಲಿ ನಂಬಿಕೆಯಿಲ್ಲ. ಅದೆಲ್ಲ ಕನಸಾಗಿದೆ. ತಾನೇ ಅಧಃಪತನ ಹೊಂದಿರುವ ಆತ್ಮ ಮಿಕ್ಕ ಆತ್ಮಗಳ ಉದ್ಧಾರಕ್ಕಾಗಿ ಏನು ಮಾಡಬಲ್ಲದು? ಆ ಜನರು ಭಕ್ತಿ ತೋರುವ ಬದಲು ಕೋಪವನ್ನೂ ದ್ವೇಷವನ್ನೂ ತೋರಿಸಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಸತ್ಯದ ಹಸಿವಿನಿಂದ ದೇವರೇ ಮಾತನಾಡುತ್ತಿರುವ ನೆಂಬಷ್ಟು ಭಕ್ತಿಯಿಂದ ನನ್ನನ್ನೇ ನೋಡುತ್ತಿರುವ ಅಷ್ಟೊಂದು ಕಣ್ಣು ಗಳನ್ನು ವೇದಿಕೆಯ ಮೇಲಿಂದ ನೋಡಿ, ಮತ್ತೆ ನನ್ನ ಆತ್ಮದಲ್ಲಡಗಿರುವ ಕಹಿ ಸತ್ಯವನ್ನು ನೋಡಿಕೊಂಡರೆ ಅದರಿಂದ ನನಗೆ ಹಿತವಿದೆ ಎಂದು ತಿಳಿದೆಯ? ನಾನು ಹೊರಗೆ ಕಾಣುವುದಕ್ಕೂ ಒಳಗೆ ಇರುವುದಕ್ಕೂ ಹೋಲಿಸಿಕೊಂಡು, ಯಾತನೆಯಿಂದ ಎಷ್ಟೊಂದು ಭಾರಿ ನಕ್ಕಿದ್ದೇನೆ! ಅದನ್ನು ನೋಡಿ ಸೈತಾನ ನಗುತ್ತಾನೆ!' ಎಂದು ಕಹಿಯಾಗಿ ನಕ್ಕ ಪಾದ್ರಿ.

'ನೀವು ನಿಮ್ಮನ್ನೇ ವಂಚಿಸಿಕೊಳ್ಳುತ್ತಿದ್ದೀರಿ. ನೀವು ಎಷ್ಟೊಂದು ಪಶ್ಚಾತ್ತಾಪ ಪಟ್ಟಿದ್ದೀರಿ. ನಿಮ್ಮ ಪಾಪ ತೊಡೆದು ಹೋಗಿ ಎಷ್ಟೋ ಕಾಲವಾಯಿತು. ಜನರ ಕಣ್ಣಿಗೆ ಕಾಣುವುದಕ್ಕಿಂತ ಹೆಚ್ಚು ಪವಿತ್ರ ವಾಗಿದೆ ಈಗಿನ ನಿಮ್ಮ ಜೀವನ. ಸತ್ಕಾರ್ಯಗಳನ್ನು ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದು ಸುಳ್ಳೇನು? ಅದರಿಂದ ನಿಮಗೇಕೆ ಶಾಂತಿ ದೊರೆಯ ಬಾರದು?' ಮೃದುವಾಗಿ ನುಡಿದಳು ಹೆಸ್ಟರ್.

'ಇಲ್ಲ ಹೆಸ್ಟರ್, ಇಲ್ಲ! ಅದರಲ್ಲಿ ಸತ್ಯವೇ ಇಲ್ಲ. ಅದು ಸತ್ತು ತಣ್ಣಗಾಗಿದೆ, ಅದರಿಂಪ ನನಗೇನೂ ಉಪಯೋಗವಿಲ್ಲ! ನಾನು ಬೇಕಾ ದಷ್ಟು ಪಶ್ಚಾತಾಪಪಟ್ಟಿದ್ದೇನೆ! ಆದರೆ ಯಾವ ವಿಧವಾದ ಪ್ರಾಯಶ್ಚಿತ್ತ ವನ್ನೂ ಮಾಡಿಕೊಂಡಿಲ್ಲ! ಹಾಗಿದ್ದ ಪಕ್ಷಕ್ಕೆ ಎಂದೋ ಆಷಾಡಭೂತಿ ವೇಷವನ್ನು ಕಿತ್ತೊಗೆದು, ನ್ಯಾಯಾಲಯದಲ್ಲಿ ಅವರು ನನ್ನನ್ನು ಯಾವ ರೀತಿ ಕಾಣುತ್ತಾರೋ ಹಾಗೆ ತೋರಿಸಿಕೊಳ್ಳುತ್ತಿದ್ದೆ. ಬಹಿರಂಗವಾಗಿ ಆ ಕೆಂಪು ಅಕ್ಷರವನ್ನು ಧರಿಸಿರುವ ನೀನು ಎಷ್ಟೋ ವಾಸಿ ಹೆಸ್ಟರ್! ಆದರೆ ನನ್ನದು ರಹಸ್ಯವಾಗಿಯೇ ಉರಿಯುತ್ತಿದೆ! ಈ ಏಳು ವರ್ಷಗಳ ಮೋಸದ ಯಾತನೆಯಿಂದ, ನಾನು ಎಂಥವನೆಂಬುದನ್ನೂ ಅರಿತು ನನ್ನನ್ನು ನೋಡುತ್ತಿರುವ ಕಣ್ಣನ್ನು ಕಂಡು ನನ್ನ ಮನಸ್ಸು ಎಷ್ಟೋ ಹಗುರಾಗಿದೆ. ನನಗೆ ಒಬ್ಬನೇ ಒಬ್ಬ ಗೆಳೆಯನಾಗಲೀ ಅಥವಾ ನನ್ನ ಶತ್ರುವಾಗಿದ್ದರೂ ಚಿಂತೆಯಿಲ್ಲ—ಮಿಕ್ಕೆಲ್ಲರ ಹೊಗಳಿಕೆಯಿಂದ ಬೇಸರಗೊಂಡಾಗ ನಾನೆಂಥ

ಮಹಾ ಪಾಪಿಯೆಂದು ಅವನೊಡನೆ ಹೇಳಿಕೊಳ್ಳುವಷ್ಟಾದರೂ ಇದ್ದಿದ್ದರೆ ನನ್ನ ಆತ್ಮ ಎಷ್ಟೋ ಜೀವಂತವಾಗಿರುತ್ತಿತ್ತು! ಅಷ್ಟು ಮಟ್ಟಿಗೆ ಸತ್ಯವನ್ನು ಹೇಳಿದರೂ ನಾನು ಉಳಿದುಕೊಳ್ಳುತ್ತೇನೆ! ಆದರೆ ಈಗ, ಎಲ್ಲ ಸುಳ್ಳು!—ಎಲ್ಲ ಪೊಳ್ಳು!—ಎಲ್ಲ ಸಾವು!' ಎಂದ ಪಾದ್ರಿ.

ಹೆಸ್ಟರ್ ಅವನ ಮುಖವನ್ನೇ ನೋಡುತ್ತಿದ್ದಳು. ಆದರೆ ಮಾತ ನಾಡುವುದಕ್ಕೆ ಹಿಂದೆಗೆದಳು. ಇಷ್ಟು ದಿನ ಅವನು ತಡೆ ಹಿಡಿದಿದ್ದು ಈಗ ಅವನು ತನ್ನ ದುಃಖವನ್ನು ತೋಡಿಕೊಂಡುದನ್ನು ಕಂಡು, ತಾನು ಹೇಳ ಬೇಕೆಂದಿದ್ದುದಕ್ಕೆ ಇದೇ ಸರಿಯಾದ ಸಮಯವೆಂದು ಅರಿತಳು. ತನಗಿದ್ದ ಭಯಗಳನ್ನು ಅದುಮಿಟ್ಟು ಮಾತನಾಡತೊಡಗಿದಳು.

'ನಿಮ್ಮ ದುಃಖಗಳನ್ನು ತೋಡಿಕೊಳ್ಳಲು ಸ್ನೇಹಿತ ಬೇಕೆಂದಿರಿ. ಅದಕ್ಕೆ ಅಪರಾಧದಲ್ಲಿ ಭಾಗಿಯಾಗಿರುವ ನಾನಿದ್ದೇನೆ. ನಿಮ್ಮ ಮನೆಯಲ್ಲೇ ನಿಮ್ಮ ಜೊತೆಯಲ್ಲಿಯೇ ಇರುವ ಅಂಥ ಶತ್ರುವೂ ನಿಮಗೆ ಬಹಳ ದಿನದಿಂದ ಇದ್ದಾನೆ!' ತಡೆತಡೆದು ಹೇಳಿದಳು ಹೆಸ್ಟರ್.

ಪಾದ್ರಿಗೆ ಗಾಬರಿಯಾಗಿ ಉಸಿರು ಸಿಕ್ಕಿಕೊಂಡವನಂತೆ ಎದ್ದುಬಿಟ್ಟ. ಹೃದಯವನ್ನೇ ಕಿತ್ತೆಸೆಯುವಷ್ಟು ಬಲವಾಗಿ ತನ್ನ ಎದೆಯನ್ನು ಮುಷ್ಟಿಯಲ್ಲಿ ಹಿಡಿದ.

'ಹ್ಹಾ! ಏನು ಹೇಳುತ್ತಿದ್ದೀಯೆ! ಶತ್ರುವೆ! ನನ್ನ ಮನೆಯಲ್ಲಿ!' ಆತುರವಾಗಿ ಕೇಳಿದ.

ಇಷ್ಟು ವರ್ಷಗಳು ತಾನು ಹೇಳದೆ ಇದ್ದುದರಿಂದ ಅವನ ಹೃದಯಕ್ಕಾಗಿದ್ದ ಆಘಾತ ಹೆಸ್ಟರ್‌ಳಿಗೆ ಈಗ ಅರಿವಾಯಿತು. ಅವನ ಮನಸ್ಸಿನ ಹದ ಕೆಡಿಸಲು ಅಷ್ಟೇ ಸಾಕಾಗಿತ್ತು. ಇಷ್ಟು ದಿನ ಅವನು ಇದ್ದ ಸ್ಥಿತಿಯೇ ವಾಸಿಯೆಂದು ಹೆಸ್ಟರ್ ಭಾವಿಸಿದ್ದಳು. ಆದರೆ ಆ ದಿನ ರಾತ್ರಿ ಅವನನ್ನು ಕಂಡಾಗಲಿಂದ ಅವಳ ಅನುಕಂಪ ತುಂಬ ಹೆಚ್ಚಾಗಿತ್ತು. ಈಗ ಅವನ ಮನಸ್ಸನ್ನು ಚೆನ್ನಾಗಿ ಅರಿತುಕೊಂಡಳು. ಇಷ್ಟು ದಿನ ರೋಜರ್ ಚಿಲಿಂಗ್‌ವರ್ತ್‌ನ ಸಹವಾಸದಲ್ಲಿದ್ದ ಅವನ ಆತ್ಮ ಸದಾ ಕಾಲವೂ ಕೆರಳಿ ಹದಗೆಟ್ಟಿತ್ತು. ಅದರ ಪರಿಣಾಮದಿಂದಾಗಿ ಅವನಿಗೆ ಹುಚ್ಚು ಹಿಡಿದಿದ್ದರೂ ಅಚ್ಚರಿಯಿರಲಿಲ್ಲ.

ಅವಳಿಂದಾಗಿ ಅವನು ಈ ಅಧೋಗತಿಗಿಳಿದಿದ್ದ—ಬೇಡ ಅದರ ಮಾತೇಕೆ ಈಗ?–ಅವಳು ಅವನನ್ನು ಇನ್ನೂ ತುಂಬಾ ಪ್ರೀತಿಸುತ್ತಿದ್ದಳು! ಪಾದ್ರಿಯ ಒಳ್ಳೆಯ ಹೆಸರನ್ನು ಕೆಡಿಸುವುದಕ್ಕಿಂತ ತಾನು ರೋಜರ್

ಚಿಲಿಂಗ್‌ವರ್ತ್‌ನಿಗೆ ಹೇಳಿದ್ದಂತೆ ಸಾವೇ ವಾಸಿಯೆಂದು ಹೆಸ್ಟರ್‌ಳಿಗೆ ಅನ್ನಿಸಿತ್ತು. ಆದರೆ ಈಗ, ತಾನು ಮಾಡಿದ್ದ ದೊಡ್ಡ ತಪ್ಪನ್ನು ಒಪ್ಪಿಕೊಳ್ಳುವ ಬದಲು, ಅಲ್ಲೇ ಆ ತರಗೆಲೆಗಳ ಮೇಲೆ ಆರ್ಥರ್ ಡಿಮ್ಸ್‌ಡೇಲನ ಕಾಲಬಳಿ ಬಿದ್ದು ಪ್ರಾಣಬಿಡುವುದು ಲೇಸೆನ್ನಿಸಿತು.

'ಓಹ್! ದಯವಿಟ್ಟು ನನ್ನನ್ನು ಕ್ಷಮಿಸಿಬಿಡಿ! ಎಲ್ಲ ವಿಷಯಗಳಲ್ಲಿಯೂ ನಾನು ಸತ್ಯವಂತೆಯಾಗಿ ಬಾಳಲು ಪ್ರಯತ್ನ ಮಾಡಿದ್ದೇನೆ! ನಿಮ್ಮ ಪ್ರಾಣಮಾನಗಳ ಪ್ರಶ್ನೆಗೆ ಸಂಬಂಧಿಸಿದ್ದುದನ್ನು ಬಿಟ್ಟು ಮಿಕ್ಕೆಲ್ಲ ವಿಷಯಗಳಲ್ಲೂ, ಎಂಥ ಕಷ್ಟ ಬಂದರೂ ಸತ್ಯವನ್ನೇ ಅಪ್ಪಿಹಿಡಿದಿದ್ದೆ! ಆಗ ನಾನೊಂದು ಮೋಸಕ್ಕೆ ಒಪ್ಪಿದ್ದೆ. ಸಾವಿನ ಭಯವಿದ್ದರೂ ಎಂದಿಗೂ ಸುಳ್ಳು ಒಳ್ಳೆಯದಲ್ಲ! ನಾನು ಹೇಳುವುದು ನಿಮಗೆ ಅರ್ಥವಾಗುತ್ತಿಲ್ಲವೇನು? ಆ ವೈದ್ಯ–ರೋಜರ್ ಚಿಲಿಂಗ್‌ವರ್ತ್ ಎಂಬ ಮುದುಕನಿದ್ದಾನಲ್ಲ–ಆತ ನನ್ನ ಪತಿಯಾಗಿದ್ದ!'

ಪಾದ್ರಿ ಕೋಪದಿಂದ ಒಂದುಗಳಿಗೆ ಅವಳನ್ನೇ ದುರುಗುಟ್ಟಿ ನೋಡಿದ. ಆ ಕೋಪಗೊಂಡ ಮುಖದಲ್ಲಿದ್ದ ಭಯಂಕರತೆಯನ್ನು ಹೆಸ್ಟರ್ ಹಿಂದೆಂದೂ ಎಲ್ಲೂ ನೋಡಿರಲಿಲ್ಲ. ಒಂದು ಕ್ಷಣ ಮಾತ್ರ ಅದು ಕಂಡದ್ದು. ನರಳುವಿಕೆಯಿಂದ ಅವನಿಗೆ ಆ ಕೋಪಕ್ಕೂ ತ್ರಾಣವಿರಲಿಲ್ಲ. ಹಾಗೆಯೇ ಕೆಳಕ್ಕೆ ಕುಸಿದು ಎರಡು ಕೈಗಳಲ್ಲಿಯೂ ಮುಖವನ್ನು ಮುಚ್ಚಿಕೊಂಡ.

'ಅಯ್ಯೋ ಅದು ನನಗೆ ಗೊತ್ತಿತ್ತು! ಅವನನ್ನು ಮೊದಲು ಬಾರಿಗೆ ನೋಡಿದಾಗಲಿಂದ ಆ ರಹಸ್ಯವನ್ನು ನನ್ನ ಹೃದಯ ಹೇಳುತ್ತಲೇ ಇತ್ತು. ಆದರೆ ನಾನೇಕೆ ಅರ್ಥಮಾಡಿಕೊಳ್ಳಲಿಲ್ಲ? ಓಹ್, ಇದು ಎಷ್ಟು ಭಯಂಕರವಾದುದೆಂದು ನಿನಗೆ ತಿಳಿಯದು ಹೆಸ್ಟರ್! ನನಗಾಗಿಯೇ ಹುಡುಕುತ್ತಿರುವ ಶತ್ರುವಿನ ಕಣ್ಣೆದುರಿಗೆ ಈ ನಾಚಿಕೆ! ಈ ಅಪಮಾನ! ಅಯ್ಯೋ! ಇದಕ್ಕೆಲ್ಲ ನೀನೇ ಕಾರಣ! ನಿನ್ನನ್ನು ಕ್ಷಮಿಸಲು ಸಾಧ್ಯವಿಲ್ಲ!' ದುಃಖದಿಂದ ಮೆಲ್ಲನೆ ಹೇಳಿಕೊಂಡ.

'ನೀವು ನನ್ನನ್ನು ಕ್ಷಮಿಸಲೇಬೇಕು! ದೇವರು ಶಿಕ್ಷೆ ಮಾಡಿಕೊಳ್ಳಲಿ! ನೀವು ಕ್ಷಮಿಸಿಬಿಡಿ!' ಬೇಡುತ್ತಾ ಅವನ ಕಾಲಬಳಿ ಬಿದ್ದಳು ಹೆಸ್ಟರ್.

ಸರ್‍ರನೆ ತನ್ನ ಎರಡು ಕೈಗಳಿಂದಲೂ ಅವನನ್ನು ಬಾಚಿ ತಬ್ಬಿಕೊಂಡು ತನ್ನೆದೆಯ ಮೇಲೆ ಅವನ ತಲೆಯನ್ನು ಒರಗಿಸಿಕೊಂಡಳು–

ಅವನ ಕೆನ್ನೆ ಆ ಕೆಂಪು ಅಕ್ಷರಕ್ಕೆ ಒರಗಿದ್ದರೂ ಚಿಂತಿಸದೆ, ಅವನು ದೂರ ಸರಿಯಲು ಸಾಧ್ಯವಿಲ್ಲದೆ ಸುಮ್ಮನೆಯಿದ್ದ. ಅವನ ಕೋಪದ ಮುಖವನ್ನು ನೋಡಬೇಕಾಗುತ್ತದೆಂದು ಹೆಸ್ಟರ್ ಕೂಡ ತನ್ನ ಹಿಡಿತ ವನ್ನು ಸಡಿಸಲಿಲ್ಲ. ಕಳೆದ ಏಳು ವರ್ಷಗಳಿಂದಲೂ ಪ್ರಪಂಚವೇ ಅವಳನ್ನು ಸಿಂಡರಿಸಿಕೊಂಡು ದಿಟ್ಟಿಸುತ್ತಿತ್ತು. ಆ ನೋವನ್ನೆಲ್ಲ ತಡೆದು ಕೊಂಡಿದ್ದಳು. ದೇವರೂ ಮುನಿದುಕೊಂಡಿದ್ದನಾದರೂ ಅವಳು ಸಾಯ ಲಿಲ್ಲ. ಆದರೆ ನಿತ್ರಾಣದಿಂದ ವಿವರ್ಣನಾಗಿ ದುಃಖಗೊಂಡಿದ್ದ ಈ ಪಾಪಿಯ ಮುಖ ಸಿಂಡರಿಸಿಕೊಂಡಿರುವುದನ್ನು ನೋಡಿ ಅವಳು ಇನ್ನೂ ಬದು ಕಿರಲು ಸಾಧ್ಯವಿರಲಿಲ್ಲ!

'ನನ್ನನ್ನು ಕ್ಷಮಿಸುವಿರಾ! ಕೋಪಿಸಿಕೊಳ್ಳುವುದಿಲ್ಲವೇ? ಕ್ಷಮಿಸು ತ್ತೀರಷ್ಟೆ?' ಎಂದು ಮತ್ತೆ ಮತ್ತೆ ಬೇಡತೊಡಗಿದಳು.

'ನಾನು ನಿನ್ನನ್ನು ಕ್ಷಮಿಸಿದ್ದೇನೆ ಹೆಸ್ಟರ್. ಭಗವಂತ ನಮ್ಮಿಬ್ಬ ರನ್ನೂ ಕ್ಷಮಿಸಲಿ! ನಾವೇನೂ ಮಹಾಪಾಪಿಗಳಲ್ಲ ಹೆಸ್ಟರ್. ಕಳಂಕ ಪೂರಿತನಾದ ಈ ಪಾದ್ರಿಗಿಂತ ಪಾಪಿ ಇನ್ನೊಬ್ಬನಿದ್ದಾನೆ. ಆ ಮುದುಕನ ಸೇಡು ನನ್ನ ಪಾಪಕ್ಕಿಂತ ಕೀಳಾದದ್ದು. ಅವನು ಮಾನವೀಯತೆ ಯನ್ನೇ ಕಳೆದುಕೊಂಡಿದ್ದಾನೆ. ಆದರೆ ನಾನು-ನೀನು ಹಾಗೆ ಮಾಡಿಲ್ಲ!' ಕೋಪವನ್ನು ಬಿಟ್ಟು ಸಂಕಟದಿಂದ ನುಡಿದ.

'ಇಲ್ಲ, ಇಲ್ಲ! ನಮ್ಮ ಪಾಪದಲ್ಲಿಯೂ ಆದರದೇ ಒಂದು ಪವಿತ್ರತೆ ಇತ್ತು. ನಾವೇ ಒಬ್ಬರಿಗೊಬ್ಬರು ಹೇಳಿಕೊಳ್ಳಲಿಲ್ಲವೇ! ನೀವು ಮರೆತುಬಿಟ್ಟಿರೇನು?' ಎಂದಳು.

'ಹುಶ್, ಅದನ್ನು ನಾನು ಮರೆತಿಲ್ಲ!' ಎನ್ನುತ್ತ ಆರ್ಥರ್ ಡಿಮ್ಸ್‌ಡೇಲ್ ನೆಲದಿಂದ ಮೇಲಕ್ಕೆದ್ದ.

ಒಬ್ಬರ ಕೈಯ್ಯೊಬ್ಬರು ಹಿಡಿದು ಮತ್ತೆ ಆ ಒಣಗಿದ ಮರದ ಮೇಲೆ ಕುಳಿತಳು. ಅವರಿಬ್ಬರ ದುಃಖ-ಕತೆಯನ್ನು ಹೇಳುತ್ತಿರುವಂತೆ ಅಕ್ಕಪಕ್ಕದ ಮರಗಳು ಕಿರುಗುಡುತ್ತಿದ್ದವು.

ಕಾಡಿನಿಂದ ಊರಿನೊಳಕ್ಕೆ ಹೋಗುವ ಆ ಕಾಲುದಾರಿ ಎಷ್ಟು ಮಂಕಾಗಿ ಕಾಣುತ್ತಿತ್ತು! ಹೆಸ್ಟರ್‌ಪ್ರೈನ್ ಮತ್ತೆ ತನ್ನ ಕಳಂಕವನ್ನು ಹೊತ್ತು ತಿರುಗಬೇಕು! ಪಾದ್ರಿ ತನ್ನನ್ನು ಅಣಕಿಸುತ್ತಿರುವ ಒಳ್ಳೆಯ ಹೆಸರಿನ ಮರೆಯಲ್ಲಿ ಮುಳುಗಿಕೊಳ್ಳಬೇಕು! ಅವರಿಬ್ಬರೂ ಹಾಗೆಯೇ ಕುಳಿತರು. ಈ ಕಾಡಿನ ಕತ್ತಲಿನಷ್ಟು ಆಪ್ಯಾಯಮಾನವಾಗಿ ಯಾವ

ಪ್ರಕಾಶಮಾನವಾದ ಬೆಳಕೂ ಇರಲಿಲ್ಲ. ಅವನೊಬ್ಬನೇ ನೋಡುತ್ತಿದ್ದುದರಿಂದ ಕೆಂಪು ಅಕ್ಷರ ಕಾಲುಜಾರಿದ ಹೆಣ್ಣಿನ ಹೃದಯವನ್ನು ಕೊರೆಯುತ್ತಿರಲಿಲ್ಲ! ಅವಳೊಬ್ಬಳೇ ನೋಡುತ್ತಿದ್ದುದರಿಂದ ಪಾಪಿಯಾಗಿದ್ದರೂ ಆ ಗಳಿಗೆಯಲ್ಲಿ ಸತ್ಯವಂತನಾಗಿದ್ದ!

ಇದ್ದಕ್ಕಿದ್ದಂತೆ ಅವನಿಗೆ ಏನೋ ಹೊಳೆಯಿತು.

'ಹೆಸ್ಟರ್, ಈಗ ಇನ್ನೊಂದು ಹೊಸ ಭಯ ಕಾದಿದೆ! ನೀನು ಈ ರಹಸ್ಯವನ್ನು ನನಗೆ ಹೇಳುತ್ತೀಯೆನ್ನುವುದು ರೋಜರ್ ಚಿಲಿಂಗ್ ವರ್ತ್‌ನಿಗೆ ಗೊತ್ತು. ಇನ್ನು ಮುಂದೆಯೂ ಅವನು ಈ ರಹಸ್ಯವನ್ನು ಕಾಪಾಡಿಕೊಂಡು ಬರುತ್ತಾನೇನು? ಅವನ ಸೇಡು ಇನ್ನಾವ ರೂಪ ತಾಳುತ್ತದೆಯೋ?' ಎಂದ.

'ಸ್ವಾಭಾವಿಕವಾಗಿಯೇ ರಹಸ್ಯವನ್ನು ಕಾಪಾಡಿಕೊಂಡು ಬರುವ ಅವನ ಸ್ವಭಾವ, ಈ ಸೇಡಿನ ಚಪಲದಿಂದ ಮತ್ತಷ್ಟು ಅದನ್ನು ಬೆಳೆಸಿಕೊಂಡು ಬಂದಿದೆ. ನನಗೇನೋ ಅವನು ರಹಸ್ಯವನ್ನು ಬಯಲು ಮಾಡಲಾರ ಎನ್ನಿಸುತ್ತದೆ. ಸೇಡು ತೀರಿಸಿಕೊಳ್ಳಲು ಬೇರೆ ಯಾವ ಮಾರ್ಗವನ್ನಾದರೂ ಅವನು ಹುಡುಕುವುದು ಖಂಡಿತ' ಎಂದಳು.

'ನನ್ನ ಶತ್ರು ಸೇವಿಸುತ್ತಿರುವ ಗಾಳಿಯನ್ನೇ ಸೇವಿಸುತ್ತಾ ನಾನು ಹೇಗೆ ಬದುಕಿರಲಿ? ಯೋಚಿಸು ಹೆಸ್ಟರ್. ನೀನು ನನಗಿಂತ ಗಟ್ಟಿಯಾಗಿದ್ದೀಯೆ, ಯೋಚಿಸಿ ಹೇಳು!' ಹೆದರಿಕೊಂಡು ಹೇಳುತ್ತಾ ತನ್ನ ಎದೆಯನ್ನು ಬಲವಾಗಿ ಅದುಮಿಕೊಂಡ. ಅದು ಅಭ್ಯಾಸವಾಗಿ ಹೋಗಿತ್ತು.

'ನೀವು ಇನ್ನೊಂದು ಕ್ಷಣವೂ ಅವನ ಜೊತೆಯಲ್ಲಿರಕೂಡದು. ನಿಮ್ಮ ಹೃದಯ ಅವನ ಕೆಟ್ಟದೃಷ್ಟಿಗೆ ಬೀಳಕೂಡದು!' ಎಂದು ಒತ್ತಿ ನುಡಿದಳು ಹೆಸ್ಟರ್.

'ಅದು ಸಾವಿಗಿಂತ ಕೇಡು. ಹೇಗೆ ಅದರಿಂದ ತಪ್ಪಿಸಿಕೊಳ್ಳುವುದು? ಯಾವ ದಾರಿಯಿದೆ? ನಾನು ಈ ತರಗೆಲೆಗಳ ಮೇಲೆಯೇ ಬಿದ್ದು ಪ್ರಾಣ ಬಿಡಲೇನು?' ಎಂದ ಪಾದ್ರಿ.

'ಅಯ್ಯೋ, ಎಷ್ಟು ಹೀನಸ್ಥಿತಿಗಿಳಿದುಬಿಟ್ಟಿದ್ದೀರಿ! ಯಾವ ಕಾರಣಕ್ಕೂ ಇಲ್ಲದೆ ಈ ಹೆದರಿಕೆಗಾಗಿ ಪ್ರಾಣಬಿಡುತ್ತೀರ?' ಕಣ್ಣೀರಿಡುತ್ತಾ ಕೇಳಿದಳು.

'ದೇವರು ಶಿಕ್ಷೆ ವಿಧಿಸಿಬಿಟ್ಟಿದ್ದಾನೆ. ಅವನೊಡನೆ ಹೆಣಗುವುದು

ನನ್ನಿಂದ ಸಾಧ್ಯವಿಲ್ಲ!'

'ನೀವು ಅದನ್ನು ಧೈರ್ಯದಿಂದ ಎದುರಿಸಿದರೆ, ದೇವರೂ ಕರುಣೆ ತೋರುತ್ತಾನೆ.'

'ನನಗಿಂತ ನೀನೇ ವಾಸಿ. ಏನು ಮಾಡಬೇಕೆಂದು ಹೇಳು.'

'ಈ ಪ್ರಪಂಚವೇನು ಸಣ್ಣದೇನು? ಈಗ ಸ್ವಲ್ಪ ಕಾಲದ ಹಿಂದೆ ಹೀಗೆಯೇ ಕಾಡಾಗಿದ್ದ ಆ ಪುಟ್ಟ ಊರಿನಲ್ಲಿಯೇ ಜಗತ್ತೆಲ್ಲ ಅಡಗಿದೆಯೆ? ಆ ಕಾಡಿನ ಕಾಲುದಾರಿ ಎಲ್ಲಿಗೆ ಹೋಗುತ್ತದೆಯೆಂದರೆ, ಊರಿನೊಳಕ್ಕೆ ಎನ್ನುತೀರಿ. ಆದರೆ ಅಷ್ಟೇ ಅಲ್ಲ, ಇನ್ನೂ ಮುಂದೆ ಹೋಗುತ್ತದೆ. ಕಡೆಗೆ ಈ ಬಿಳಿಮನುಷ್ಯ ಕಾಲೇ ಇಡದ ಸ್ಥಳವೊಂದು ಅರಣ್ಯಮಧ್ಯದಲ್ಲಿ ಸಿಕ್ಕುತ್ತದೆ. ಅಲ್ಲಿ ನಾವು ಸ್ವತಂತ್ರರಾಗಿರಬಹುದು. ಸ್ವಲ್ಪ ದೂರ ಪ್ರಯಾಣಮಾಡಿದರೆ ಸಾಕು, ಈ ಎಲ್ಲ ಕಷ್ಟಗಳಿಂದ ಪಾರಾಗಿ ಸುಖವಾಗಿರಬಹುದು. ರೋಜರ್ ಚಿಲಿಂಗ್‌ವರ್ತ್‌ನ ದೃಷ್ಟಿಯಿಂದ ನಿಮ್ಮ ಹೃದಯವನ್ನು ಮರೆಯಾಗಿಡುವಷ್ಟು ಸ್ಥಳ ಸಿಕ್ಕುವುದಿಲ್ಲವೆ ಈ ಎಣೆಯಿಲ್ಲದ ಕಾಡುಗಳಲ್ಲಿ?' ಅವನನ್ನೇ ನೋಡುತ್ತಾ ಹೇಳಿದಳು ಹೆಸ್ಟರ್‌ಪ್ರೈನ್.

'ಹೌದು, ಆದರೆ ಕೆಳಗೆ ಬಿದ್ದಿರುವ ಎಲೆಗಳ ಅಡಿಯಲ್ಲಿ ಮಾತ್ರ ಅದು ಸಾಧ್ಯ ಹೆಸ್ಟರ್!'

'ಹಾಗಾದರೆ ವಿಶಾಲವಾದ ಸಾಗರವಿದೆ. ನಿಮ್ಮನ್ನು ಇಲ್ಲಿಗೆ ಕರೆತಂದ ಸಾಗರವೇ, ಇಷ್ಟಪಟ್ಟಲ್ಲಿ ಪುನಃ ಹಿಂದಕ್ಕೆ ಕರೆದುಕೊಂಡು ಹೋಗುತ್ತದೆ. ನಮ್ಮ ತಾಯ್ನಾಡಿನ ಒಂದು ಸಣ್ಣ ಹಳ್ಳಿಯಲ್ಲೋ, ಲಂಡನ್ನಿನಂಥಾ ದೊಡ್ಡ ಪಟ್ಟಣದಲ್ಲೋ—ಅಥವಾ ಜರ್ಮನಿ, ಫ್ರಾನ್ಸ್, ಇಟಲಿ—ಎಲ್ಲಾದರೂ ಒಂದು ಕಡೆ ಅವನಿಂದ ಮರೆಯಾಗಿರಬಹುದು. ಈ ಕಠಿಣ ಹೃದಯಿಗಳಾದ ಜನರನ್ನೂ, ಅವರ ಮಾತುಗಳನ್ನು ಕಟ್ಟಿಕೊಂಡು ನಿಮಗೇನಾಗಬೇಕು? ಈಗಾಗಲೇ ಬೇಕಾದಷ್ಟು ಕಾಲ ನಿಮ್ಮನ್ನು ಸೆರೆಯಲ್ಲಿಟ್ಟಿದ್ದಾರೆ!' ಎಂದಳು.

'ಅದು ಸಾಧ್ಯವಿಲ್ಲ. ನನಗೆ ಹೋಗುವಷ್ಟು ಚೈತನ್ಯವಿಲ್ಲ. ಹೀನ ಸ್ಥಿತಿಯಲ್ಲಿರುವ ಪಾಪಿಯಾದ ನಾನು ದೇವರು ನನ್ನನ್ನು ಇಟ್ಟಿರುವ ಕಡೆಯೇ ಕಾಲ ಕಳೆಯುವ ಯೋಚನೆ ಮಾಡಿದ್ದೆ. ನನ್ನ ಆತ್ಮಪತನವಾಗಿದ್ದರೂ ಸಹ ಮಿಕ್ಕ ಆತ್ಮಗಳಿಗಾಗಿ ನನ್ನ ಕೈಲಾದದ್ದನ್ನು ಮಾಡುತ್ತೇನೆ! ಕೊನೆಯದಾಗಿ ನನಗೆ ದೊರೆಯುವುದು ಸಾವು ಮತ್ತು ಅಪಖ್ಯಾತಿ

ಯಾದರೂ ನಾನು ಕರ್ತವ್ಯವಿಮುಖನಾಗಲಾರೆ;' ಕನಸು ಕಾಣುತ್ತಿರುವವನಂತೆ ಹೇಳಿದ ಪಾದ್ರಿ.

'ಈ ಏಳುವರ್ಷಗಳ ದುಃಖದಲ್ಲಿ ಬೆಂದು ನಶಿಸಿಹೋಗಿದ್ದೀರಿ. ಅವನ್ನೆಲ್ಲಾ ಮ[illegible]ತುಬಿಡಿ. ನಾನು ನಿಮ್ಮ ಮಾರ್ಗದಲ್ಲಿ ಅಡ್ಡ ಬರುವುದಿಲ್ಲ. ಇದನ್ನೆಲ್ಲಾ ಮರೆತು ಹೊರಟು ಹೋಗುತ್ತಿರಿ. ಮತ್ತೆ ಹೊಸ ಬಾಳನ್ನು ಮೊದಲುಮಾಡಿ! ಇದೊಂದರಿಂದಲೇ ಇಷ್ಟೊಂದು ಎದೆಗುಂದಿಬಿಟ್ಟರೆ ಹೇಗೆ? ಪ್ರಯತ್ನದಿಂದ ಯಶಸ್ಸು ಗಳಿಸುವುದಕ್ಕೆ ಇನ್ನೂ ಬೇಕಾದಷ್ಟು ಕಾಲವಿದೆ. ನಿಮ್ಮಿಂದ ಇನ್ನೂ ಬೇಕಾದಷ್ಟು ಸತ್ಕಾರ್ಯಗಳಾಗಬೇಕಾಗಿವೆ! ನಿಮಗೆ ಇಷ್ಟವಿದ್ದಲ್ಲಿ ರೆಡ್ ಇಂಡಿಯನ್ನರಲ್ಲಿ ಪ್ರಚಾರಕರಾಗಿ. ಅಥವಾ ಸುಸಂಸ್ಕೃತರೊಡನೆ ಕಲೆತು ವಿದ್ವಾಂಸರಾಗಿ ಶೋಭಿಸಿ! ಭೋಧಿಸಿ! ಬರೆಯಿರಿ! ಸಾಯುವುದೊಂದನ್ನುಳಿದು ಏನು ಬೇಕಾದರೂ ಮಾಡಿ. ನಿಮ್ಮ ಹೆಸರನ್ನು ಬದಲಾಯಿಸಿಕೊಳ್ಳಿ. ನನ್ನ ಮಾತನ್ನು ಕೇಳಿ ಇಲ್ಲಿಂದ ಮೊದಲು ಹೊರಟುಹೋಗಿ!' ಅವನನ್ನು ಹುರಿದುಂಬಿಸುತ್ತಾ ಹೇಳಿದಳು ಹೆಸ್ಟರ್.

ಒಂದುಕ್ಷಣ ಅವನ ಕಣ್ಣಲ್ಲಿ ಬೆಳಕು ಮೂಡಿ ಮಾಯವಾಯಿತು.

'ಓ ಹೆಸ್ಟರ್! ಕಾಲಲ್ಲಿ ತ್ರಾಣವಿಲ್ಲದವನಿಗೆ ಓಡಲು ಹೇಳುತ್ತಿದ್ದೀಯೆ! ನಾನು ಇಲ್ಲೇ ಸಾಯಬೇಕು! ಹೊರಗಿನ ಪ್ರಪಂಚದಲ್ಲಿ ಒಬ್ಬಂಟಿಗನಾಗಿ ಹೊಸದಾಗಿ ಜೀವನ ಪ್ರಾರಂಭಿಸುವಷ್ಟು ತ್ರಾಣವಾಗಲಿ, ಎದೆಗಾರಿಕೆಯಾಗಲೀ ನನ್ನಲ್ಲಿ ಉಳಿದಿಲ್ಲ' ಎಂದ.

ಮತ್ತೇ ಹೇಳಿದ:

'ಒಬ್ಬನ ಕೈಲೇ ಆಗುವುದಿಲ್ಲ ಹೆಸ್ಟರ್!'

'ನೀವು ಒಬ್ಬರೇ ಹೋಗಬೇಕಾಗಿಲ್ಲ!' ಮೆಲ್ಲನೆ ನುಡಿದಳು ಹೆಸ್ಟರ್.

ಅಲ್ಲಿಗೆ ಎಲ್ಲ ವಿಶದವಾಯಿತು!

೧೮

ಆರ್ಥರ್ ಡಿಮ್ಸ್‌ಡೇಲ್ ಹೆಸ್ಟರ್‌ಳನ್ನೇ ಆಶಾಪೂರ್ಣವಾಗಿ ನೋಡುತ್ತಿದ್ದ. ಅವನ ಕಣ್ಣುಗಳು ಆನಂದದಿಂದ ತುಂಬಿ ತುಳುಕುತ್ತಿದ್ದವು. ತಾನು ಅವ್ಯಕ್ತವಾಗಿ ಸೂಚಿಸುತ್ತಿದ್ದುದನ್ನೇ ಅವಳು ಧೈರ್ಯವಾಗಿ ಹೇಳಿದುದನ್ನು ಕಂಡು ಅವನಿಗೆ ಆಶ್ಚರ್ಯವೂ ಭಯವೂ ಉಂಟಾಗಿತ್ತು.

ಸಮಾಜ ತನಗೆ ಹಾಕಿದ್ದ ಬಹಿಷ್ಕಾರದಿಂದ ಅವಳಲ್ಲಿ ಆ ಧೈರ್ಯ ಬೆಳೆದು ಬಂದಿತ್ತು. ಅದು ಪಾದ್ರಿಗೆ ಹೊಸ ವಿಷಯ. ಕಾಡಿನಲ್ಲೇ ಜೀವಿಸಿರುವ ರೆಡ್‌ಇಂಡಿಯನ್ ಒಬ್ಬ, ಚರ್ಚಿನ ಹಿರಿಯರನ್ನು ಕಂಡರೆ ಹೇಗೆ ಮರ್ಯಾದೆ ತೋರುವುದಿಲ್ಲವೋ, ನ್ಯಾಯಸ್ಥಾನ, ಗಲ್ಲು, ಬೆಂಕಿ ಯಾವುದಕ್ಕೂ ಹೆದರುವುದಿಲ್ಲವೋ, ಹಾಗೆಯೇ ಹೆಸ್ಟರ್ ಕೂಡ ಆಗಿದ್ದಳು. ಬೇರೆ ಹೆಂಗಸರು ಕಾಲಿಡಲು ಹೆದರುತ್ತಿದ್ದ ಸ್ಥಳಗಳಲ್ಲೆಲ್ಲಾ ತಾನು ನುಗ್ಗಲು ಅಪ್ಪಣೆಯ ಚೀಟಿಯಂತಿತ್ತು ಆ ಕೆಂಪು ಅಕ್ಷರ. ನಾಚಿಕೆ, ಅಪಮಾನ, ಏಕಾಂತ!–ಇವೇ ಅವಳ ಗುರುಗಳಾಗಿದ್ದವು. ಅವು ಕಷ್ಟ ತರವಾಗಿದ್ದರೂ, ಅವಳನ್ನು ಬಲಪಡಿಸಿದ್ದವು. ಪಾದ್ರಿಗೆ ಈ ಅನುಭವ ಗಳೊಂದೂ ಇರಲಿಲ್ಲ-

ಏಳು ವರ್ಷಗಳಿಂದ ಬಹಿಷ್ಕೃತಳಾಗಿ ಕಳಂಕವನ್ನು ಹೊತ್ತಿದ್ದುದು ಈ ಕ್ಷಣಕ್ಕಾಗಿ ಅವಳು ತಯಾರಾಗುತ್ತಿದ್ದಂತೆ ಕಾಣುತ್ತಿತ್ತು. ಆದರೆ ಆರ್ಥರ್ ಡಿಮ್ಸ್‌ಡೇಲ್! ಅವನು ಮತ್ತೆ ಕಾಲು ಜಾರಿದರೆ, ಅವನ ಅಪರಾಧ ಅಷ್ಟು ದೊಡ್ಡದಲ್ಲವೆಂದು ತೋರಿಸುವ ಬಗೆಯಾದರೂ ಹೇಗೆ? ಅವನು ಯಾತನೆ ಪಡುತ್ತಿರುವುದೊಂದನ್ನು ಬಿಟ್ಟರೆ ಯಾವುದೂ ಇರಲಿಲ್ಲ.

ಪಾದ್ರಿಯ ಮನಸ್ಸಿನಲ್ಲಿ ದೊಡ್ಡ ಗೊಂದಲವೆದ್ದಿತ್ತು. ಕಡೆಯದಾಗಿ ಓಡಿಹೋಗಲು ನಿರ್ಧರಿಸಿದ—ಆದರೆ ಒಂಟಿಯಾಗಲ್ಲ.

'ಈ ಏಳು ವರ್ಷಗಳಲ್ಲಿ ನನಗೆ ಒಂದು ಕ್ಷಣವಾದರೂ ಶಾಂತಿ ದೊರೆ ತಿದ್ದಲ್ಲಿ, ಭಗವಂತನ ಕರುಣೆಗಾಗಿ ಎಲ್ಲವನ್ನೂ ಸಹಿಸಬಲ್ಲೆ. ಈಗ ನನ್ನ ಅಂತ್ಯ ನಿರ್ಧಾರವಾಗಿದೆ. ಅಪರಾಧಿಯನ್ನು ಗಲ್ಲಿಗೇರಿಸುವ ಮೊದಲು ಅವನಿಗೆ ದೊರೆಯುವಂತಹ ಸಮಾಧಾನ ನನಗೂ ದೊರೆಯುವಾಗ ನಾನೇಕೆ ಅದನ್ನು ಸಾರ್ಥಕಪಡಿಸಿಕೊಳ್ಳಬಾರದು? ಹೆಸ್ಟರ್ ಹೇಳಿದಂತೆ ಇದೇ ನನ್ನ ಜೀವನಕ್ಕೆ ಒಳ್ಳೆಯ ಮಾರ್ಗವಾಗಿರುವ ಪಕ್ಷದಲ್ಲಿ, ಅದನ್ನು ಅನುಸರಿಸುವುದರಿಂದ ನನಗೇನೂ ನಷ್ಟವಿಲ್ಲ. ಅವಳ ಸಾಮೀಪ್ಯವಿಲ್ಲದೆ ಇನ್ನು ಕಾಲಕಳೆಯುವುದು ನನ್ನಿಂದ ಅಸಾಧ್ಯ. ಓ ಭಗವಂತ ನನ್ನನ್ನು ಕ್ಷಮಿಸಲಾರೆಯಾ!' ಪಾದ್ರಿ ತನ್ನಲ್ಲೇ ಹೇಳಿಕೊಂಡ.

'ಹೊರಡಲು ಒಪ್ಪಿಗೆ ತಾನೆ!' ಇಬ್ಬರ ಕಣ್ಣೂ ಸಂಧಿಸಿದಾಗ ಕೇಳಿದಳು ಹೆಸ್ಟರ್.

ಈ ಒಂದು ನಿರ್ಧಾರಕ್ಕೆ ಬಂದುದರಿಂದ ಗೊಂದಲದಲ್ಲಿದ್ದ ಅವನ ಹೃದಯಕ್ಕೆ ಕೊಂಚ ಸಮಾಧಾನವಾಯಿತು. ಕ್ರಿಶ್ಚಿಯನ್ನರಾಗಲೀ,

ಕಾನೂನಾಗಲೀ ಇಲ್ಲದ ಕಡೆಗೆ ಹೋಗುವುದು—ಸೆರೆಮನೆಯಿಂದ ತಪ್ಪಿಸಿಕೊಂಡು. ಓಡಿಹೋದಾಗ ಖೈದಿಗೆ ಆಗುವ ಆನಂದದಷ್ಟು—ಉತ್ಸಾಹದಾಯಕವಾಗಿತ್ತು. ಆ ಆನಂದದಲ್ಲಿ ಅವನ ದೈವಭಕ್ತಿಯೂ ವ್ಯಕ್ತವಾಗುತ್ತಿತ್ತು.

'ನನ್ನಲ್ಲಿನ್ನೂ ಸಂತೋಷ ಎನ್ನುವುದಿದೆಯೆ? ಅದರ ಹುಟ್ಟೇ ಅಡಗಿಹೋಗಿತ್ತೆಂದು ಭಾವಿಸಿದ್ದೆ. ಓ, ಹೆಸ್ಟರ್ ನೀನು ನನ್ನ ಭಾಗದ ದೇವತೆ! ಖಾಯಿಲೆಯಿಂದ, ಪಾಪದಿಂದ ಬಳಲಿ ಕೆಳಗೆ ಬಿದ್ದಿದ್ದ ನನ್ನನ್ನು ಮತ್ತೊಮ್ಮೆ ಕರುಣಾಮಯನಾದ ಭಗವಂತ ಸೇವೆಯನ್ನು ಮಾಡುವಂತೆ ಮಾಡಿದೆ! ಈಗಾಗಲೇ ನನ್ನ ಜೀವನ ಕೊಂಚ ಉತ್ತಮಗೊಂಡಿದೆ! ಇದೇಕೆ ನಮಗೆ ಮೊದಲೇ ತಿಳಿಯಲಿಲ್ಲ?' ಎಂದ.

'ಆಗಿದ್ದು ಆಗಿಹೋಯಿತು. ಅದನ್ನು ಯೋಚಿಸುವುದು ಬೇಡ. ಸುಮ್ಮನೆ ಅದನ್ನು ಏಕೆ ಮನಸ್ಸಿಗೆ ಹಚ್ಚಿಕೊಳ್ಳಬೇಕು? ಈ ಚಿಹ್ನೆಯನ್ನು ಕಳಚಿ ಅದು ಇಲ್ಲಿ ಇರಲೇ ಇಲ್ಲವೆಂಬಂತೆ ಮಾಡುತ್ತೇನೆ, ನೋಡಿ!' ಎಂದಳು ಹೆಸ್ಟರ್ ಪ್ರೈನ್.

ಮಾತನಾಡುತ್ತಿರುವಂತೆಯೇ ಹೆಸ್ಟರ್ ತನ್ನೆದೆಯ ಮೇಲಿದ್ದ ಕೆಂಪು ಅಕ್ಷರವನ್ನು ಕಳೆಚಿ, ಅಲ್ಲಿದ್ದ ತರಗೆಲೆಗಳ ಮೇಲೆ ದೂರ ಬಿಸಾಡಿದಳು. ಆ ವಿಚಿತ್ರ ಚಿಹ್ನೆ ಝರಿಯ ದಡದ ಬಳಿ ಬಿತ್ತು. ಇನ್ನೊಂದು ಕೈಯಗಲ ಹೆಚ್ಚು ಹೋಗಿದ್ದರೆ ಅನೇಕ ಕಥೆಗಳೊಂದಿಗೆ ಈ ದುಃಖ ಕತೆಯೂ ಸೇರಿ ತೇಲಿಹೋಗುತ್ತಿತ್ತು. ಕಳೆದುಹೋದ ಒಡವೆಯಂತೆ ಅದು ಮಿರ ಮಿರನೆ ಹೊಳೆಯುತ್ತಾ ಅಲ್ಲಿ ಬಿದ್ದಿತ್ತು. ದೌರ್ಭಾಗ್ಯದಿಂದ ಯಾರಾದರೂ ಅದನ್ನು ತೆಗೆದುಕೊಂಡಿದ್ದ ಪಕ್ಷದಲ್ಲಿ ಅವರಿಗೆ ಎಲ್ಲ ವಿಧವಾದ ಕಷ್ಟಗಳೂ ಸಂಕಟಗಳೂ ಉಂಟಾಗಬಹುದಾಗಿತ್ತು.

ಆ ಕಳಂಕ ಚಿಹ್ನೆಯ ಭಾರ ತಪ್ಪಿದ ಕೂಡಲೇ, ಅವಳು ದೀರ್ಘವಾಗಿ ಉಸಿರೆಳೆದುಕೊಂಡಳು. ಆದರಿಂದ ಅವಳ ಮನಸ್ಸು ಎಷ್ಟೋ ಹಗುರವಾಯಿತು. ಅಬ್ಬ, ಎಷ್ಟು ಸಮಾಧಾನ! ಈ ಸ್ವಾತಂತ್ರ್ಯ ದೊರೆಯುವವರೆಗೂ ಅದರ ಭಾರ ಅವಳಿಗೆ ತಿಳಿದಿರಲಿಲ್ಲ! ಮತ್ತೆ ಧರಿಸಿದ್ದ ಟೋಪಿಯನ್ನು ತೆಗೆದುಹಾಕಿದಳು. ಹೊಳೆಯುತ್ತಿರುವ ದಟ್ಟವಾದ ಕಪ್ಪನೆಯ ಕೂದಲು ಅವಳ ಭುಜಗಳ ಮೇಲೆ ಹರಡಿಕೊಂಡಿತು. ಅವಳ ಹೃದಯುದಲ್ಲಿನ ಮಂದಹಾಸ ಮುಖದಲ್ಲಿ ಸೂಸುತ್ತಿತ್ತು. ವಿವರ್ಣವಾಗಿದ್ದ ಕೆನ್ನೆಗಳಲ್ಲಿ ಬಣ್ಣವೇರುತ್ತಿತ್ತು. ಈ ಒಂದು ಕ್ಷಣದಲ್ಲಿ, ಅವಳ ಯೌವ್ವನ,

ಸೌಂದರ್ಯ ಎಲ್ಲ ಜ್ಞಾಪಕ ಬಂದು, ಏನೋ ಒಂದು ವಿಧವಾದ ಸೌಖ್ಯ ದೊರೆತಿತ್ತು. ಇವರ ಹೃದಯದಲ್ಲಿರುವ ಕತ್ತಲೆ ಮಾಯವಾಗುತ್ತಿರುವುದನ್ನು ಸ್ವಾಗತಿಸುವುದಕ್ಕಾಗೆಂಬಂತೆ ಇದ್ದಕ್ಕಿದ್ದಂತೆ ಅಲ್ಲೆಲ್ಲ ಬಿಸಿಲು ಹರಡಿತು. ಪ್ರತಿಯೊಂದು ವಸ್ತುವೂ ಪ್ರಕಾಶಮಾನವಾಗಿ ಕಾಣಿಸತೊಡಗಿತು.

ಹೆಸ್ಟರ್ ಆನಂದದಿಂದ ಅವನ ಕಡೆ ನೋಡಿದಳು.

'ನಮ್ಮ ಪುಟ್ಟ ಪರ್ಲ್‌ಳ ಪರಿಚಯಮಾಡಿಕೊಳ್ಳಬೇಕು ನೀವು! ನೀವು ಅವಳನ್ನು ನೋಡಿದ್ದೀರಿ ಗೊತ್ತು. ಆದರೆ ಈಗ ನಿಮ್ಮ ದೃಷ್ಟಿಯೇ ಬದಲಾಯಿಸಿರುತ್ತದೆ. ಅವಳೊಂದು ವಿಚಿತ್ರವಾದ ಮಗು! ನನಗೆ ಅರ್ಥವೇ ಆಗುವುದಿಲ್ಲ! ನನ್ನಂತೆ ನೀವೂ ಆವಳನ್ನು ತುಂಬಾ ಪ್ರೀತಿಸುತ್ತೀರಿ. ಅವಳನ್ನು ಹೇಗೆ ನಡೆಸಿಕೊಳ್ಳಬೇಕೆನ್ನುವುದನ್ನು ಹೇಳಿಕೊಡುವಿರಂತೆ' ಎಂದಳು.

'ಅವಳಿಗೆ ನನ್ನ ಪರಿಚಯಮಾಡಿಕೊಳ್ಳಲು ಸಂತೋಷವಾಗುತ್ತದೆ ಎನ್ನುತ್ತೀಯ? ನಾನೇನೋ ತುಂಬ ವರ್ಷಗಳಿಂದ ಮಕ್ಕಳೆಂದರೆ ಹಿಂದೆಗೆಯುತ್ತೇನೆ. ಅದೇಕೋ ನನ್ನನ್ನು ಕಂಡರೆ ನಂಬಿಕೆ ತೋರುವುದಿಲ್ಲ ಮಕ್ಕಳು ನನ್ನಲ್ಲಿ ಸಲಿಗೆಯಿಂದಿರುವುದಕ್ಕೆ ಹಿಂಜರಿಯುತ್ತಾರೆ. ಪರ್ಲ್‌ಳನ್ನು ಕಂಡರೂ ನನಗೆ ಭಯ!' ಎಂದ.

'ಅಯ್ಯೋ ಪಾಪ. ನೀವಿಬ್ಬರೂ ಪರಸ್ಪರ ಪ್ರೀತಿಸುತ್ತೀರಿ, ನನಗೆ ಗೊತ್ತು. ಇಲ್ಲಿಯೇ ಇದ್ದಾಳೆ. ಕೂಗುತ್ತೇನೆ ತಾಳಿ. ಪರ್ಲ್!.... ಪರ್ಲ್!....'

'ಅಲ್ಲಿ ನೋಡು. ತೊರೆಯ ಆಚೆ ದಡದಲ್ಲಿ ಬಿಸಿಲಲ್ಲಿ ನಿಂತಿದ್ದಾಳೆ. ಹಾಗಾದರೆ ಮಗು ನನ್ನನ್ನು ಪ್ರೀತಿಸುತ್ತದೆ ಎನ್ನುತ್ತೀಯ?' ಎಂದ.

ಹೆಸ್ಟರ್ ನಗುತ್ತಾ, ಮತ್ತೆ ಮಗುವನ್ನು ಕೂಗಿದಳು. ತಾಯಿಯ ದನಿಯನ್ನು ಕೇಳಿ, ಪರ್ಲ್ ನಿಧಾನವಾಗಿ ಬಂದಳು.

ತನ್ನ ತಾಯಿ ಪಾದ್ರಿಯೊಂದಿಗೆ ಮಾತನಾಡುತ್ತ ಕುಳಿತ್ತದ್ದಷ್ಟು ಕಾಲವನ್ನೂ ಪರ್ಲ್ ಬೇಸರವಿಲ್ಲದೆ ಕಳೆದಿದ್ದಳು. ಆ ದಟ್ಟವಾದ ಅರಣ್ಯ ಮನಸ್ಸಿನಲ್ಲಿ ಹುಳುಕಿಟ್ಟುಕೊಂಡು ಅಥವಾ ತೊಂದರೆಗೀಡಾಗಿ ಬಂದವರಿಗೆ ಮಾತ್ರ ಕಳಾಹೀನವಾಗಿ ಕಾಣುತ್ತಿತ್ತು. ಆದರೆ ಅದೇ ಅರಣ್ಯ ಆ ಪುಟ್ಟ ಮಗುವಿಗೆ ಆಟದ ಸಂಗಾತಿಯಾಗಿತ್ತು. ಮಂಕಾಗಿದ್ದರೂ ಅವಳನ್ನು ಸ್ವಾಗತಿಸಲು ಅದು ನಗುವನ್ನು ಸೂಸುತ್ತಿತ್ತು. ಅವಳಿಗೆ ಕಾಡಿನ ಕೆಂಪು

ಹಣ್ಣುಗಳನ್ನು ನೀಡಿತು. ಪರ್ಲ್ ಇದನ್ನೆಲ್ಲಾ ಆರಿಸಿಕೊಂಡು ಅವುಗಳ ರುಚಿಯಿಂದ ಸಂತುಷ್ಟಳಾದಳು. ಹಿಂದೆ ಹತ್ತು ಮರಿಗಳನ್ನಿಟ್ಟುಕೊಂಡು ಬಂದ ಒಂದು ಕಾಡುಕೋಳಿ ಮೊದಲು ಅವಳನ್ನು ಹೆದರಿಸುವಂತೆ ಮೇಲೆ ನುಗ್ಗಿದರೂ ತಕ್ಷಣ ತನ್ನ ತಪ್ಪಿಗಾಗಿ ವ್ಯಸನಪಟ್ಟು,:ಹೆದರದಿರುವಂತೆ ತನ್ನ ಮರಿಗಳಿಗೆಲ್ಲಾ ಹೇಳಿತು. ತುಂಬ ಕೆಳಗಡೆಯಿದ್ದ ಕೊಂಬೆಯೊಂದರ ಮೇಲೆ ಕುಳಿತಿದ್ದ ಪಾರಿವಾಳವೊಂದು, ಪರ್ಲ್ ಆ ಕೊಂಬೆಯ ಕೆಳಗೆ ಬರುವ ವರೆಗೂ ಸುಮ್ಮನಿದ್ದು ಅವಳು ಹೆದರಿಕೊಳ್ಳುವಷ್ಟು ಜೋರಾಗಿ ಅವಳನ್ನು ಸ್ವಾಗತಿಸಿತು. ಒಂದು ಅಳಿಲು ಬಹಳ ಎತ್ತರದಲ್ಲಿ ಕುಳಿತು ಕೋಪ ದಿಂದಲೋ ಅಥವಾ ಉಲ್ಲಾಸದಿಂದಲೋ ಕಿಚಿಗುಟ್ಟುತ್ತಿತ್ತು–ಏಕೆಂದರೆ ಅಳಿಲು ಬಹಳ ವಿಚಿತ್ರವಾದ ಪ್ರಾಣಿ, ಅದರ ಭಾವವನ್ನು ಅರ್ಥ ಮಾಡಿ ಕೊಳ್ಳುವುದು ಕಷ್ಟ. ಕಿಚಗುಟ್ಟುತ್ತಿದ್ದ ಅಳಿಲು ಮಗುವಿನ ತಲೆಯ ಮೇಲೆ ಒಂದು ಕಾಯನ್ನು ಬೀಳಿಸಿತು. ಅದು ಹಿಂದಿನ ವರ್ಷದ ಕಾಯಿ ಇರಬೇಕು, ಅಳಿಲು ತನ್ನ ಚೂಪಾದ ಹಲ್ಲುಗಳಿಂದ ಅದನ್ನೆಲ್ಲಾ ಕೊರೆದು ಬಿಟ್ಟಿತ್ತು. ನಿದ್ರಿಸುತ್ತಿದ್ದ ಒಂದು ನರಿ ತರೆಗೆಲೆಗಳ ಮೇಲೆ ಪರ್ಲ್ ನಡೆ ದಾಡುತ್ತಿರುವ ಶಬ್ದವನ್ನು ಕೇಳಿ ಎಚ್ಚರಗೊಂಡು ಪಲಾಯನ ಮಾಡು ವುದೋ ಅಥವಾ ಪುನಃ ಅಲ್ಲೇ ಮಲಗಿ ನಿದ್ದೆ ಮಾಡುವುದೋ ಎನ್ನುವಂತೆ ಸಂಶಯದಿಂದ ಪರ್ಲ್ ಕಡೆ ನೋಡಿತು. ತೋಳವೊಂದು ಬಂದು ಪರ್ಲ್‌ಳ ಬಟ್ಟೆ ಮೂಸುನೋಡಿ, ಅವಳ ಕೈಲಿ ತಲೆತಟ್ಟಿಸಿಕೊಂಡು ಅಲ್ಲಿಂದ ಹೊರಟು ಹೋಯಿತಂತೆ. ನಿಜವಾಗಿ ಹೇಳುವುದಾದರೆ ಪಳಗದ ಈ ಮಗುವಿನ ಗುಣಗಳನ್ನರಿತ ಆರಣ್ಯ, ಇತರ ವನ್ಯಮೃಗಗಳಂತೆ ಅವಳೂ ತನಗೆ ಸಂಬಂಧಿಸಿದವಳಂತೆ ಪರ್ಲ್‌ಳನ್ನು ಸ್ವಾಗತಿಸಿತ್ತು.

ತನ್ನ ಮನೆಯಲ್ಲಾಗಲೀ ಅಥವಾ ಊರಿನ ರಸ್ತೆಗಳಲ್ಲಾಗಲೀ ನಡೆದುಕೊಳ್ಳುವುದಕ್ಕಿಂತ ನಯವಾಗಿ ಪರ್ಲ್ ಈ ಕಾಡಿನಲ್ಲಿ ನಡೆದು ಕೊಂಡಿದ್ದಳು. ಹೂವುಗಳಿಗೂ ಅದು ಗೊತ್ತಾಗಿರಬೇಕು. ಅವಳು ಪಕ್ಕದಲ್ಲಿ ಹೋಗುತ್ತಿದ್ದಾಗ ಮೆಲ್ಲನೆ ಪಿಸುಗುಟ್ಟುತ್ತಿದ್ದವು–'ಓ ಮುದ್ದು ಮಗುವೆ ನನ್ನನ್ನು ಮುಡಿದುಕೊಂಡು ಸಿಂಗರಿಸಿಕೊ!'–ಎಂದು ಅವು ಗಳನ್ನು ಸಂತೋಷಪಡಿಸಲು ಅವಳು ಅವನ್ನೆಲ್ಲಾ ಕಿತ್ತುಕೊಂಡು ಅಲ್ಲಿ ಬೆಳೆದಿದ್ದ ಬಳ್ಳಿಗಳಿಂದ ಅವನ್ನು ಕಟ್ಟಿ ತಲೆಯ ಮೇಲೂ ಮತ್ತು ತನ್ನ ಪುಟ್ಟ ನಡುವಿನ ಸುತ್ತಲೂ ಧರಿಸಿಕೊಂಡು, ಒಂದು ಪುಟ್ಟ ಜಲಕನ್ಯೆ ಯಂತೆ ಕಾಣುತ್ತಿದ್ದಳು. ತನ್ನ ತಾಯಿ ಕೂಗುವ ಕಾಲಕ್ಕೆ ಸರಿಯಾಗಿ

ಪರ್ಲ್ ಈ ರೀತಿ ಅಲಂಕರಿಸಿಕೊಂಡಿದ್ದಳು. ಹಾಗೆಯೇ ನಿಧಾನವಾಗಿ ಬರತೊಡಗಿದಳು.

ಆ ಪಾದ್ರಿಯನ್ನು ಕಂಡದ್ದರಿಂದ ಅವಳು ನಿಧಾನವಾಗಿ ಬರ ತೊಡಗಿದ್ದಳು.

೧೯

ಪಾದ್ರಿ ಪರ್ಲ್‌ಳನ್ನೇ ನೋಡುತ್ತಾ ಕುಳಿತಿರುವಾಗ, 'ನೀವು ಖಂಡಿತ ವಾಗಿಯೂ ಅವಳನ್ನು ಪ್ರೀತಿಸುತ್ತೀರಿ. ಅವಳು ತುಂಬ ಸುಂದರವಾ ಗಿದ್ದಾಳಲ್ಲವೇ ? ಎಷ್ಟು ಬುದ್ಧಿವಂತೆ ನೋಡಿ! ಎಷ್ಟು ಚೆನ್ನಾಗಿ ಆ ಹೂವು ಕಟ್ಟಿಕೊಂಡು ಅಲಂಕರಿಸಿಕೊಂಡಿದ್ದಾಳೆ! ಮುತ್ತು, ರತ್ನ ಮತ್ತು ವಜ್ರ ಗಳನ್ನು ಅವಳು ಕಾಡಿನಲ್ಲಿ ಆರಿಸಿಕೊಂಡಿದ್ದರೂ ಅವಳಿಗೆ ಇಷ್ಟು ಚೆನ್ನಾಗಿ ಒಪ್ಪುತ್ತಿರಲಿಲ್ಲ. ತುಂಬ ಬುದ್ಧಿವಂತೆಯಾದ ಮಗು! ಅವಳ ಹಣೆ ಯಾರ ಹಾಗಿದೆಯೆಂದು ನನಗೆ ಗೊತ್ತು!' ಎಂದಳು ಹೆಸ್ಟರ್.

'ನಿನ್ನ ಜೊತೆಯಲ್ಲಿಯೇ ಓಡಾಡುತ್ತಿರುವ ಈ ಮುದ್ದು ಮಗು ಎಷ್ಟು ಸಾರಿ ನನ್ನನ್ನು ಗಾಬರಿಪಡಿಸಿದೆಯೆಂಬುದುನ್ನು ಬಲ್ಲೆಯ ಹೆಸ್ಟರ್? ಓ, ಹೆಸ್ಟರ್ ಆ ಭಾವನೆಯಿಂದ ಎಷ್ಟು ಹೆದರುತ್ತಿದ್ದೆ ನಾನು. ಪ್ರಪಂಚಕ್ಕೇ ತಿಳಿಯುವಷ್ಟು ಮಟ್ಟಿಗೆ ಅವಳ ಮುಖ ನನ್ನ ಮುಖವನ್ನು ಹೋಲುತ್ತಿರು ವಂತೆ ನನಗೆ ಅನ್ನಿಸುತ್ತಿತ್ತು! ಆದರೆ ಹೆಚ್ಚಾಗಿ ನಿನ್ನನ್ನೇ ಹೋಲು ತ್ತಾಳೆ!' ಎಂದ ಡಿಮ್ಸ್‌ಡೇಲ್ ನಗುತ್ತಾ.

ಹೆಸ್ಟರ್ ನಸುನಗುತ್ತಾ 'ಇಲ್ಲ ಹೆಚ್ಚಾಗೇನೂ ಇಲ್ಲ! ಇನ್ನೊಂದು ಸ್ವಲ್ಪ ದಿನ ಸುಮ್ಮನಿರಿ, ಅವಳು ಯಾರ ಮಗಳೆಂಬುದು ನಿಮಗೇ ತಿಳಿಯು ತ್ತದೆ! ಆ ಕಾಡುಹೂಗಳಿಂದ ಸಿಂಗರಿಸಿಕೊಂಡಿರುವುದರಿಂದ ಎಷ್ಟು ಮುದ್ದಾಗಿ ಕಾಣುತ್ತಾಳೆ! ನಾವು ನಿಮ್ಮ ಇಂಗ್ಲೆಂಡಿನಲ್ಲಿ ಬಿಟ್ಟುಬಂದ ದೇವತೆಯೊಬ್ಬಳು ನಮ್ಮನ್ನು ಕಾಣಲು ಇಲ್ಲಿಗೆ ಬಂದಂತಿದೆ!' ಎಂದಳು.

ಪರ್ಲ್‌ಳನ್ನೇ ನೋಡುತ್ತಾ ಕುಳಿತಿರುವ ಅವರಿಬ್ಬರಿಗೂ ಹಿಂದೆಂದೂ ಆಗದಂತಹ ಹೊಸದೊಂದು ಅನುಭವವಾಗುತ್ತಿತ್ತು. ತಮ್ಮಿಬ್ಬರನ್ನೂ ಒಂದುಮಾಡಿರುವ ಗಂಟು ಅಲ್ಲಿ ಕಾಣುತ್ತಿತ್ತು. ಅವರಿಬ್ಬರ ರಹಸ್ಯವನ್ನು ಪ್ರಪಂಚಕ್ಕೆ ಬಯಲು ಮಾಡುವ ಜೀವಂತ ಚಿಹ್ನೆಯಾಗಿದ್ದಳು ಅವಳು. ಪರ್ಲ್ ಅವರಿಬ್ಬರ ಸಂಬಂಧದ ಪ್ರತೀಕ. ಈವಿಧವಾದ ಯೋಚನೆಗಳೆಲ್ಲ ಅವರಿಬ್ಬರ ತಲೆಯಲ್ಲಿ ಸುಳಿಯತೊಡಗಿ ಮಗು ಸಮೀಪಿಸಿದಂತೆಲ್ಲ ಅದನ್ನು

ಕಂಡು ಅವ್ಯಕ್ತವಾದ ಹೆದರಿಕೆಯಾಗುತ್ತಿತ್ತು.

'ನೀವು ಅವಳನ್ನು ಮಾತನಾಡಿಸಲು ಆತುರ ತೋರಿಸಬೇಡಿ. ಅವಳೊಂದು ವಿಚಿತ್ರವಾದ ತುಂಟಮಗು. ಏನು ಎತ್ತ ಎಂದು ಅರಿಯದಿದ್ದಾಗ ಭಾವೋದ್ರೇಕವಾದಾಗ ಅವಳಿಗೆ ಕಂಡರೆ ಆಗುವುದಿಲ್ಲ. ಆದರೂ ಅವಳಲ್ಲಿ ಪ್ರೀತಿವಿಶ್ವಾಸಗಳಿವೆ! ನನ್ನನ್ನು ಹೇಗೆ ಪ್ರೀತಿಸುತ್ತಾಳೆಯೋ, ನಿಮ್ಮನ್ನೂ ಹಾಗೆಯೇ ಪ್ರೀತಿಸುತ್ತಾಳೆ!' ಎಂದು ಹೆಸ್ಟರ್ ಪಿಸುಗುಟ್ಟಿದಳು.

'ಅವಳನ್ನು ಸಂಧಿಸಲು ನನ್ನ ಹೃದಯ ತವಕ ಪಡುತ್ತಿದ್ದರೂ ಎಷ್ಟು ಹೆದರುತ್ತಿದೆ ಎನ್ನುವುದು ನಿನಗೆ ತಿಳಿಯುವುದಿಲ್ಲ! ನಿಜವಾಗಿಯೂ, ನಾನು ಆಗಲೇ ಹೇಳಿದಂತೆ ಮಕ್ಕಳಿಗೆ ನನ್ನಲ್ಲಿ ಬೇಗ ಸಲಿಗೆ ಬೆಳೆಯುವುದಿಲ್ಲ. ನನ್ನ ತೊಡೆಯೇರುವುದಾಗಲೀ, ಮಾತನಾಡುವುದಾಗಲೀ ಅಥವಾ ನನ್ನ ನಗುವಿಗೆ ಪ್ರತಿನಗು ಕೊಡುವುದಾಗಲೀ ಒಂದೂ ಮಾಡುವುದಿಲ್ಲ. ಸುಮ್ಮನೆ ದೂರನಿಂತು ನನ್ನನ್ನು ವಿಚಿತ್ರವಾಗಿ ನೋಡುತ್ತಾರೆ. ಎಳೆಯ ಮಕ್ಕಳು ಕೂಡ ನಾನು ಎತ್ತಿಕೊಂಡಾಗ ಗಟ್ಟಿಯಾಗಿ ಅತ್ತುಬಿಡುತ್ತವೆ. ಆದರೂ ಪರ್ಲ್ ಮಾತ್ರ ಈಗಾಗಲೇ ಎರಡುಬಾರಿ ನನ್ನೊಡನೆ ತುಂಬ ಒಳ್ಳೆಯವಳಾಗಿ ನಡೆದುಕೊಂಡಿದ್ದಾಳೆ. ಮೊದಲ ಬಾರಿ,–ಅದು ನಿನಗೇ ಗೊತ್ತು. ಕಡೆಯಬಾರಿ, ಆ ಗವರ್ನರರ ಮನೆಗೆ ನೀನು ಅವಳನ್ನು ಕರೆದುಕೊಂಡು ಹೋಗುತ್ತಿದ್ದಾಗ,' ಎಂದ ಪಾದ್ರಿ.

'ಆ ಮಗುವಿಗೋಸ್ಕರ ನನ್ನ ಪರವಾಗಿ ತುಂಬ ಧೈರ್ಯದಿಂದ ವಾದಿಸಿದಿರಿ! ಚೆನ್ನಾಗಿ ಜ್ಞಾಪಕವಿದೆ; ಪರ್ಲ್ ಕೂಡ ನೆನಪಿನಲ್ಲಿಟ್ಟುಕೊಳ್ಳುತ್ತಾಳೆ. ನೀವೇನೂ ಹೆದರಬೇಡಿ. ಮೊದಲು ಸ್ವಲ್ಪ ನಾಚಿಕೆಯಿಂದ ವಿಚಿತ್ರವಾಗಿ ಆಡಬಹುದು. ಆದರೆ ಬೇಗ ನಿಮ್ಮನ್ನು ಪ್ರೀತಿಸಲು ಕಲಿಯುತ್ತಾಳೆ!' ಎಂದಳು ಹೆಸ್ಟರ್.

ಈ ವೇಳೆಗೆ ತೊರೆಯ ಎದುರು ದಡವನ್ನು ಸಮೀಪಿಸಿದ್ದ ಪರ್ಲ್, ತನ್ನನ್ನೇ ಕಾಯುತ್ತ ಕುಳಿತಿದ್ದ ಇವರಿಬ್ಬರನ್ನೂ ಎವೆಯಿಕ್ಕದೆ ನೋಡುತ್ತಿದ್ದಳು. ಅವಳು ನಿಂತಿದ್ದ ಕಡೆ ಕೊಂಚ ನೀರು ನಿಂತು ಪುಟ್ಟ ಕೊಳದಂತಾಗಿತ್ತು. ಕೊಂಚವೂ ಚಲಿಸದೆ ನಿಂತಿದ್ದ ಆ ನೀರಿನಲ್ಲಿ ಪರ್ಲ್‌ಳ ಪ್ರತಿಬಿಂಬ ಕಾಣುತ್ತಿತ್ತು. ಹೂಗಳಿಂದ ಅಲಂಕರಿಸಿಕೊಂಡಿದ್ದ ಅವಳ ಸೌಂದರ್ಯವೆಲ್ಲ ಅದರಲ್ಲಿ ಕಾಣುತ್ತಿದ್ದರೂ, ಅವಳಿಗಿಂತ ಅವಳ ಪ್ರತಿಬಿಂಬ ಮತ್ತಷ್ಟು ಸುಂದರವಾಗಿತ್ತು. ಬಿಸಿಲಿನಲ್ಲಿ ನಿಂತಿದ್ದ ಅವಳು, ವನದ

ಕತ್ತಲಲ್ಲಿ ಕುಳಿತಿದ್ದ ಅವರಿಬ್ಬರನ್ನೂ ದಿಟ್ಟಿಸುತ್ತಿದ್ದ ಬಗೆ ತುಂಬ ವಿಚಿತ್ರ ವಾಗಿತ್ತು. ತಾಯನ್ನು ಅಗಲಿ ಆ ಮಗು ತನ್ನ ಅಲೆದಾಟದಲ್ಲಿ ಈ ಜಗತ್ತನ್ನೇ ತ್ಯಜಿಸಿ ಹೊರಟುಹೋಗಿ ಹಿಂದಿರುಗಲು ಸಾಧ್ಯವಾಗದೆ ಅಲ್ಲಿ ನಿಂತು ನೋಡುತ್ತಿರುವಳೆಂಬ ಏನೋ ಒಂದು ಅವ್ಯಕ್ತವಾದ ಭಾವನೆ ಹೆಸ್ಟರ್‌ಳ ಮನಸ್ಸಿಗೆ ಬಂತು.

ಆ ಭಾವನೆಯಲ್ಲಿ ಕೊಂಚಮಟ್ಟಿಗೆ ಸತ್ಯವೂ ಇತ್ತು. ತಾಯಿ ಮಕ್ಕಳು ಒಬ್ಬರನ್ನೊಬ್ಬರು ಅಗಲಿದ್ದರು. ಆದರೆ ಅದರ ತಪ್ಪೆಲ್ಲಾ ಪರ್ಲ್‌ಳ ದಲ್ಲ; ಅವಳ ತಾಯಿಯದು. ತಾನು ಅಲೆದಾಡಲು ಹೋದಾಗ ತನ್ನ ಸ್ಥಳವನ್ನು ಇನ್ನೊಂದು ವ್ಯಕ್ತಿ ಆಕ್ರಮಿಸಿತ್ತು. ತನಗಲ್ಲಿ ಜಾಗವಿಲ್ಲದಿರುವುದರಿಂದ, ತಾನೆಲ್ಲಿದ್ದೇನೆಂದು ಅರಿಯಲಾರದೆ ಹೋಗಿದ್ದಳು ಪರ್ಲ್.

'ನನಗೆ, ಈ ಝರಿ ಎರಡು ಲೋಕಗಳ ಮಧ್ಯದ ಎಲ್ಲೆ ಎಂಬ ವಿಚಿತ್ರ ಭಾವನೆಯುಂಟಾಗಿದೆಯಲ್ಲದೆ, ನೀನು ನಿನ್ನ ಪರ್ಲ್‌ಳನ್ನು ಮತ್ತೆ ಸಂಧಿಸಲಾರೆ ಎನ್ನಿಸುತ್ತಿದೆ. ಅಥವಾ ನಾವು ಚಿಕ್ಕಂದಿನಲ್ಲಿ ಕಲಿತಿರುವಂತೆ, ಝರಿಯನ್ನು ದಾಟಬಾರದೆಂಬ ಆಜ್ಞೆಗೆ ತಲೆಬಾಗಿರುವ ತುಂಟ ದೇವತೆಯಂತಿರಬೇಕು ಅವಳು. ನನಗೇನೊ ಈ ನಿಧಾನ ಕಂಡು ಗಾಬರಿಯಾಗಿದೆ. ಅವಳನ್ನು ಆತುರಪಡಿಸು' ಎಂದ ಗಾಬರಿಗೊಂಡ ಪಾದ್ರಿ.

ಹೆಸ್ಟರ್ ತನ್ನ ಎರಡು ಕೈಗಳನ್ನೂ ಚಾಚಿ, ಅವಳನ್ನು ಹುರಿದುಂಬಿಸುತ್ತಾ ಕರೆಯತೊಡಗಿದಳು, 'ಬಾ ಮಗು. ಎಷ್ಟು ನಿಧಾನ ನೀನು! ನೀನು ಹಿಂದೆಂದೂ ಇಷ್ಟು ನಿಧಾನವಾಗಿರಲಿಲ್ಲವಲ್ಲ? ಇಲ್ಲಿ ನನ್ನ ಸ್ನೇಹಿತರೊಬ್ಬರಿದ್ದಾರೆ. ಅವರು ನಿನಗೂ ಸ್ನೇಹಿತರಾಗಬೇಕು. ಇನ್ನು ಮೇಲೆ ನಿನ್ನ ತಾಯಿ ಒಬ್ಬಳೇ ತೋರುತ್ತಿರುವ ಎರಡರಷ್ಟು ಪ್ರೀತಿ ನಿನಗೆ ದೊರೆಯುತ್ತದೆ! ಝರಿಯನ್ನು ನೆಗೆದು ಇತ್ತ ಬಾ. ನೀನು ಪುಟ್ಟ ಜಿಂಕೆಯಂತೆ ಹಾರಬಲ್ಲೆಯಲ್ಲವೆ!' ಎಂದಳು.

ಪರ್ಲ್ ಇದಾವುದಕ್ಕೂ ಸಗ್ಗದೆ ಅಲ್ಲೇ ನಿಂತಿದ್ದಳು. ಇವರಿಬ್ಬರ ಸಂಬಂಧವೇನಿರಬಹುದು ಎಂಬಂತೆ, ಒಮ್ಮೆ ತಾಯಿಯನ್ನು, ಇನ್ನೊಮ್ಮೆ ಪಾದ್ರಿಯನ್ನ ದಿಟ್ಟಿಸಿ ನೋಡಿದಳು. ಮತ್ತೊಮ್ಮೆ ಇಬ್ಬರನ್ನೂ ಒಟ್ಟಿಗೆ ನೋಡಿದಳು. ಆ ಮಗುವಿನ ನೆಟ್ಟ ದೃಷ್ಟಿಯನ್ನು ಕಂಡು ಪಾದ್ರಿಯ ಕೈ ತಾನಾಗಿಯೇ ಎದೆಯ ಮೇಲೆ ಹೋಯಿತು. ಕಡೆಗೆ ಏನೋ ಅಧಿಕಾರವಿರುವವಳಂತೆ, ಪರ್ಲ್ ತನ್ನ ಕೈಚಾಚಿ ತನ್ನ ತಾಯಿಯ ಎದೆಯ ಕಡೆಗೆ ಬೆಟ್ಟುಮಾಡಿ ತೋರಿಸಿದಳು. ನೀರಿನಲ್ಲಿದ್ದ ಪ್ರತಿಬಿಂಬವೂ ಅವಳೆಡೆಗೆ

ಬೆಟ್ಟುಮಾಡಿ ತೋರಿಸುತ್ತಿತ್ತು.

'ವಿಚಿತ್ರ ಮಗುವೆ. ಏಕೆ ನನ್ನ ಬಳಿಗೆ ಬರವೊಲ್ಲೆ?' ಆಶ್ಚರ್ಯದಿಂದ ಕೇಳಿದಳು ಹೆಸ್ಟರ್.

ಪರ್ಲ್ ಇನ್ನೂ ಬೆಟ್ಟು ತೋರಿಸುತ್ತಲೇ ಇದ್ದಳು. ಅವಳ ಮುಖ ಸಿಂಡರಿಸಿಕೊಂಡಿತು. ತಾಯಿ ಮತ್ತೆ ಮತ್ತೆ ಅವಳನ್ನು ಕರೆಯುತ್ತಿದ್ದು ನಗುನಗುತ್ತಾ ತನ್ನನ್ನು ತಾಯಿ ಕರೆಯುತ್ತಿರುವುದರ ರೂಢಿಯಿಲ್ಲದ ಆ ಮಗು, ಮತ್ತಷ್ಟು ದರ್ಪದಿಂದ ಕಾಲನ್ನು ನೆಲಕ್ಕೆ ಅಪ್ಪಳಿಸಿ ನಿಂತಳು. ವಿಚಿತ್ರವಾಗಿದ್ದ ಅವಳ ಸುಂದರ ಪ್ರತಿಬಿಂಬವೂ, ಪರ್ಲಳ ಮನೋಭಾವನೆಯನ್ನು ಎತ್ತಿ ತೋರುವಂತೆ ಮುಖಸಿಂಡರಿಸಿ, ಕೈಚಾಚಿ, ದರ್ಪದಿಂದ ನೋಡುತ್ತಿತ್ತು.

'ಬೇಗ ಬಾ ಪರ್ಲ್; ಇಲ್ಲದಿದ್ದರೆ ನನಗೆ ಕೋಪ ಬರುತ್ತದೆ. ತುಂಟಿ! ಆ ತೊರೆಯನ್ನು ನೆಗೆದು ಇತ್ತ ಓಡಿಬಾ, ಇಲ್ಲದಿದ್ದರೆ ನಾನೇ ಅಲ್ಲಿಗೆ ಬರುತ್ತೇನೆ!' ಎಂದಳು ಹೆಸ್ಟರ್. ಮಗುವಿನ ಈ ವಿಚಿತ್ರ ನಡತೆ ಅವಳಿಗೆ ಹೊಸದಲ್ಲದಿದ್ದರೂ, ಏಕೋ ಹೆಸ್ಟರ್ ಕಾತುರಳಾಗಿದ್ದಳು.

ಅವಳ ಒಳ್ಳೆಯ ಮಾತಿಗಾಗಲೀ, ಬೆದರಿಕೆಗಾಗಲೀ ಸಗ್ಗದೆ, ಪರ್ಲ್ ಇದ್ದಕ್ಕಿದ್ದಂತೆಯೇ ರಪರಪನೆ ಕೈಕಾಲು ಬಡಿಯುತ್ತಾ ತನ್ನ ಕೋಪವನ್ನು ಪ್ರದರ್ಶಿಸತೊಡಗಿದಳು. ಅವಳ ಜೋರಾದ ಕಿರಿಚಾಟ ಅರಣ್ಯವೆಲ್ಲಾ ಮೊಳಗುತ್ತಿತ್ತು. ಪರ್ಲಳ ಕೋಪದ ಛಾಯೆಯಾಗಿದ್ದ ಆ ಪ್ರತಿಬಿಂಬ ಹೂಗಳಿಂದ ಸಿಂಗರಿಸಿಕೊಂಡು, ಕಾಲನ್ನು ಅಪ್ಪಳಿಸುತ್ತಾ ಕೈಕಾಲು ಬಡಿಯುತ್ತಿದ್ದರೂ, ಹೆಸ್ಟರ್‌ಳ ಎದೆಯ ಕಡೆಗೇ ಬೆಟ್ಟು ಮಾಡಿ ತೋರಿಸುತ್ತಿತ್ತು!

ಅದನ್ನು ಅರ್ಥಮಾಡಿಕೊಂಡ ಹೆಸ್ಟರ್‌ಳ ಮುಖ ಕಳೆಗುಂದಿತು. ಪಾದ್ರಿಗೆ ಪಿಸುಮಾತಿನಲ್ಲಿ, 'ಮಗುವಿನ ಮನಸ್ಸನ್ನು ಬಾಧಿಸುತ್ತಿರುವುದೇನೆಂದು ನನಗೆ ತಿಳಿಯಿತು. ತಾವು ಹೊಂದಿಕೊಂಡಿರುವ ವಸ್ತುಗಳಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಮಕ್ಕಳಿಗೆ ಹಿಡಿಸುವುದಿಲ್ಲ. ತಾನು ಯಾವಾಗಲೂ ಧರಿಸುತ್ತಿದ್ದುದನ್ನು ಅಲ್ಲಿ ಕಾಣದೆ ತೊದಲುತ್ತಿದ್ದಾಳೆ.' ಎಂದು ಹೇಳಿದಳು.

'ಅವಳನ್ನು ಸಮಾಧಾನಪಡಿಸಲು ಏನಾದರೂ ಮಾರ್ಗವಿದ್ದಲ್ಲಿ ದಯವಿಟ್ಟು ಅದನ್ನೂ ಮೊದಲು ಮಾಡು! ಆ ಮುದುಕಿ, ಮಿಸ್ಟ್ರೆಸ್ ಹಿಬ್ಬನ್ಸ್‌ಳನ್ನು ಬಿಟ್ಟರೆ, ಮಕ್ಕಳಲ್ಲೆಂದೂ ನಾನು ಇಂಥಾ ಕೋಪವನ್ನು

ನೋಡಿರಲಿಲ್ಲ. ಆ ಮುದಿ ಮಾಟಗಾತಿಯು ಸುಕ್ಕಿನಲ್ಲಿರುವಂತೆಯೇ ಈ ಮಗುವಿನ ಸೌಂದರ್ಯದಲ್ಲೂ ಮಾನವವರ್ಗಕ್ಕೆ ಸಲ್ಲದ ಒಂದು ಛಾಯೆಯಿದೆ. ನೀನು ನನ್ನನ್ನು ಪ್ರೀತಿಸುವುದೇ ಆದರೆ, ದಯವಿಟ್ಟು ಅವಳನ್ನು ಸಮಾಧಾನಮಾಡು!' ಎಂದ ಪಾದ್ರಿ.

ಹೆಸ್ಟರ್ ಮತ್ತೆ ಪರ್ಲ್ಳ ಕಡೆ ತಿರುಗಿದಳು. ಅವಳ ಮುಖ ಕೆಂಪ ಡರಿತ್ತು. ಪಾದ್ರಿಯ ಕಡೆಗೆ ಅರ್ಥಗರ್ಭಿತವಾಗಿ ನೋಡಿ, ದೊಡ್ಡದೊಂದು ನಿಟ್ಟುಸಿರಿಟ್ಟಳು. ಅವಳು ಪುನಃ ಮಾತನಾಡುವಷ್ಟರಲ್ಲಿಯೇ ಕೆಂಪೇರಿದ್ದ ಮುಖ ತಕ್ಷಣ ವಿವರ್ಣವಾಯಿತು.

'ಪರ್ಲ್, ನಿನ್ನ ಕಾಲ ಬಳಿ ನೋಡು! ಅಲ್ಲಿ—ನಿನ್ನ ಮುಂದೆ—ಝರಿಯ ಈ ಪಕ್ಕದಲ್ಲಿ!' ಸಂಕಟದಿಂದ ನುಡಿದಳು ಹೆಸ್ಟರ್.

ಪರ್ಲ್ ತನ್ನ ತಾಯಿ ತೋರಿಸಿದ ಕಡೆಗೆ ಕಣ್ಣು ಹೊರಳಿಸಿದಳು. ನೀರಿನ ಅಂಚಿನಲ್ಲಿ ಆ ಕೆಂಪು ಅಕ್ಷರ ಬಿದ್ದಿತ್ತು. ನೀರಿನಲ್ಲಿ ಅದರ ನಕ್ಕಿಯ ಕೆಲಸದ ಪ್ರತಿಬಿಂಬವಿತ್ತು.

'ಅದನ್ನು ಇಲ್ಲಿ ತೆಗೆದುಕೊಂಡು ಬಾ!' ಎಂದಳು ಹೆಸ್ಟರ್.

'ನೀನೇ ಬಂದು ತೆಗೆದುಕೊ!' ಎಂದು ಪರ್ಲ್ ಉತ್ತರವಿತ್ತಳು.

'ಇಂಥಾ ಮಗುವನ್ನು ನಾನೆಲ್ಲೂ ಕಾಣೆ! ಅವಳ ವಿಷಯ ನಾನು ಹೇಳಬೇಕಾದುದು ಬಹಳವಿದೆ. ಆದರೆ ನಿಜವಾಗಿಯೂ ಈ ಅಸಹ್ಯದ ಚಿಹ್ನೆಯ ವಿಷಯದಲ್ಲಿ ಅವಳ ಭಾವನೆ ಸರಿ. ನಾನು ಅದರ ಯಾತನೆಯನ್ನು ಇನ್ನೂ ಸ್ವಲ್ಪಕಾಲ ಅನುಭವಿಸಬೇಕು. ಇನ್ನೊಂದು ಕೊಂಚ ದಿನ—ನಾವು ಈ ಊರನ್ನು ತ್ಯಜಿಸುವವರೆಗೂ, ಅಷ್ಟೆ. ಆಮೇಲೆ ಇದೊಂದು ಕನಸು ಎಂದುಕೊಳ್ಳಬಹುದು. ಅದನ್ನು ಮುಚ್ಚಿಟ್ಟುಕೊಳ್ಳಲು ಈ ಅರಣ್ಯದಿಂದ ಸಾಧ್ಯವಿಲ್ಲ! ಸಮುದ್ರದ ಮಧ್ಯದಲ್ಲಿ ಇದನ್ನು ಎಸೆದುಬಿಡುತ್ತೇನೆ! ಅದು ನುಂಗಿಬಿಡುತ್ತದೆ!' ಪಾದ್ರಿಯನ್ನು ಕುರಿತು ಹೇಳಿದಳು ಹೆಸ್ಟರ್.

ಝರಿಯ ಪಕ್ಕಕ್ಕೆ ಬಂದು, ಕೆಂಪು ಅಕ್ಷರವನ್ನು ಎತ್ತಿಕೊಂಡು ಮತ್ತೊಮ್ಮೆ ತನ್ನ ಎದೆಯಮೇಲೆ ಧರಿಸಿಕೊಂಡಳು. ಅದನ್ನು ಧರಿಸುತ್ತಿದ್ದಂತೆಯೇ, ತಾನು ಸಮುದ್ರಕ್ಕೆಸೆಯಬೇಕೆಂದಿದ್ದ ಅದು ಎಂದಿಗೂ ತನ್ನನ್ನು ಬಿಟ್ಟು ಹೋಗಲಾರದೆಂಬ ಶಂಕೆ ಅವಳ ಮನಸ್ಸಿನಲ್ಲಿ ಮೂಡಿತು. ಅದನ್ನು ಬ್ರಹ್ಮಾಂಡ ದೂರ ಎಸೆದುಬಿಟ್ಟಳು!—ಒಂದು ಗಂಟೆಯ ಕಾಲ ಆರಾಮವಾಗಿ ಉಸಿರಾಡಿದ್ದಳು!—ಈಗ ಕೆಂಪಗೆ ಮಿರುಗುತ್ತಿರುವ ಆ

ಯಾತನೆ ಮತ್ತೆ ತನ್ನ ಹಳೆಯ ಸ್ಥಳ ಸೇರಿತ್ತು ! ಅದು ಯಾವಾಗಲೂ ಹಾಗೆಯೇ. ಮಾಡಿದ ಪಾಪ ಚಿಹ್ನೆಯಿರಲಿ, ಇಲ್ಲದಿರಲಿ, ಎಡಬಿಡದೆ ಅಂಟಿಕೊಂಡಿರುತ್ತದೆ. ಹೆಸ್ಟರ್ ತನ್ನ ಕರುಳುಗಳನ್ನೇ ಸೇರಿಸಿ ಮತ್ತೆ ಟೋಪಿಯ ಬಂಧನದಲ್ಲಿಟ್ಟಳು. ಮಾಯವಾಗುತ್ತಿರುವ ಬಿಸಿಲಿನಂತೆ, ಅವಳ ಸುತ್ತ ಮಂಕು ಕವಿಯಿತು.

ಇಷ್ಟು ಬದಲಾವಣೆಯಾದ ಕೂಡಲೇ, ಹೆಸ್ಟರ್ ಮಗಳಿಗಾಗಿ ತನ್ನ ಕೈ ಚಾಚಿದಳು.

'ಈಗಲಾದರೂ ನಿನ್ನ ತಾಯಿಯ ಗುರುತು ಸಿಕ್ಕುವುದೇ ಮಗು ! ತೊರೆಯನ್ನು ದಾಟಿಬಂದು, ಮತ್ತೊಮ್ಮೆ ಅಪಮಾನದ ಚಿಹ್ನೆಯನ್ನು ಹೊತ್ತು, ದುಃಖಿಸುತ್ತಿರುವ ನನ್ನನ್ನು ಈಗಲಾದರೂ ನಿನ್ನ ತಾಯಿಯೆಂದು ಒಪ್ಪಿಕೊಳ್ಳುತ್ತೀಯ ?' ದಂಡಿಸುತ್ತಿದ್ದರೂ, ದನಿಯನ್ನು ಅದುಮಿಟ್ಟು ಕೊಂಡು ಕೇಳಿದಳು.

'ಓಹೋ !....ಇದೀಗ ನೀನು ನಮ್ಮ ಅಮ್ಮ ! ನಾನು ನಿನ್ನ ಪುಟ್ಟ ಪರ್ಲ್ !' ಎನ್ನುತ್ತಾ ತೊರೆಯನ್ನು ಹಾರಿಬಂದು, ತನ್ನ ತಾಯನ್ನು ತಬ್ಬಿ ಹಿಡಿದಳು.

ತನ್ನ ತಾಯಿಯ ತಲೆಯನ್ನು ಬಗ್ಗಿಸಿ ಹಣೆಯಮೇಲೂ, ಕೆನ್ನೆಗಳ ಮೇಲೂ ಮುತ್ತಿಟ್ಟಳು. ಆದರೆ ತಾನು ಕೊಡುವ ಸುಖದ ಜೊತೆಗೆ ಯಾತನೆಯನ್ನೂ ಕೊಡುವಂತೆ ಪ್ರೇರಿತಳಾಗುತ್ತಿದ್ದಳೋ ಏನೋ—ಆ ಕೆಂಪು ಅಕ್ಷರಕ್ಕೂ ಮುತ್ತಿಟ್ಟಳು !

'ಅದು ಒಳ್ಳೆಯದಲ್ಲ. ನಿನ್ನ ಪ್ರೀತಿ ತೋರಿಸುವಾಗ ನೀನು ನನ್ನನ್ನು ಅಣಕಿಸುತ್ತೀಯ !' ಎಂದಳು ಹೆಸ್ಟರ್.

'ಆ ಪಾದ್ರಿ ಏಕೆ ಅಲ್ಲಿ ಕುಳಿತಿದ್ದಾನೆ ?' ಎಂದು ಪರ್ಲ್ ಕೇಳಿದಳು.

'ನಿನ್ನನ್ನು ಸ್ವಾಗತಿಸಲು ಕಾದಿದ್ದಾರೆ. ಬಾ, ಅತನ ಆಶೀರ್ವಾದ ವನ್ನು ಪಡೆದುಕೊ. ನಿನ್ನನ್ನು ಕಂಡರೆ ಅವರಿಗೆ ತುಂಬಾ ಪ್ರೀತಿ ಪರ್ಲ್. ನಿನ್ನ ಅಮ್ಮನನ್ನು ಕಂಡರೂ ಅಷ್ಟೆ. ನೀನು ಅವರನ್ನು ಪ್ರೀತಿಸುವುದಿಲ್ಲ ವೇನು ? ಬಾ, ಅವರು ನಿನ್ನನ್ನು ನೋಡಲು ಕಾತುರರಾಗಿದ್ದಾರೆ.'

'ನಮ್ಮನ್ನು ಪ್ರೀತಿಸುತ್ತಾನೇನು ? ಹಾಗಾದರೆ ನಾವು ಮೂವರೂ ಒಬ್ಬರ ಕೈ ಒಬ್ಬರು ಹಿಡಿದುಕೊಂಡು, ಊರಿನೊಳಕ್ಕೆ ಹೋಗಲು ಒಪ್ಪು ತ್ತಾನೆ ತಾನೆ ?' ತಾಯಿಯ ಮುಖವನ್ನೇ ನೋಡುತ್ತ ಕೇಳಿದಳು ಪರ್ಲ್.

'ಈಗ ಬೇಡ ಮಗು. ಸ್ವಲ್ಪ ದಿನ ಕಳೆದ ಮೇಲೆ ನಮ್ಮ ಕೈಹಿಡಿದು

ನಡೆಯುತ್ತಾರೆ. ನಮ್ಮದೇ ಒಂದು ಮನೆ ಮಾಡಿಕೊಂಡು, ಅಲ್ಲಿನ ಬೆಚ್ಚನೆಯ ಬೆಂಕಿಯ ಪಕ್ಕದಲ್ಲಿ ಅವರ ತೊಡೆಯಮೇಲೆ ನೀನು ಕುಳಿತುಕೊಳ್ಳುವಿಯಂತೆ. ಅವರು ನಿನ್ನನ್ನು ತುಂಬಾ ಪ್ರೀತಿಸುತ್ತಾ, ನಿನಗೆ ಅನೇಕ ವಿಷಯಗಳನ್ನು ಹೇಳಿಕೊಡುತ್ತಾರೆ. ನೀನೂ ಅವರನ್ನು ಪ್ರೀತಿಸುತ್ತೀಯ; ಅಲ್ಲವೇ ?'

'ಎದೆಯ ಮೇಲೆ ಯಾವಾಗಲೂ ಕೈಯಿಟ್ಟುಕೊಂಡೇ ಇರುತ್ತಾನೇನು ?' ಎಂದು ಪ್ರಶ್ನಿಸಿದಳು ಪರ್ಲ್.

'ಹುಚ್ಚಿ, ಎಂಥ ಪ್ರಶ್ನೆ ನೀನು ಕೇಳುವುದು! ಬಾ. ಅವರ ಆಶೀರ್ವಾದವನ್ನು ಬೇಡಿಕೊ !' ಎಂದಳು ಹೆಸ್ಟರ್.

ಮುದ್ದು ಮಾಡಿರುವ ಎಲ್ಲ ಮಕ್ಕಳಿಗೂ ಉಂಟಾಗುವಂತಹ ಅಸೂಯೆಯಿಂದಲೋ, ಅಥವಾ ಅವಳ ಸ್ವಭಾವ ವೈಚಿತ್ರ್ಯದಿಂದಲೋ, ಪರ್ಲ್ ಪಾದ್ರಿಯಲ್ಲಿ ಸ್ವಲ್ಪವೂ ವಿಶ್ವಾಸ ತೋರಲಿಲ್ಲ. ಹೆಸ್ಟರ್ ಬಲವಂತದಿಂದ ಅವಳನ್ನು ಪಾದ್ರಿಯ ಬಳಿಗೆ ಎಳೆದು ತರಬೇಕಾಯಿತು. ಪಾದ್ರಿಗೆ ಕೊಂಚ ವ್ಯಾಕುಲವಾದರೂ, ಒಂದು ಮುತ್ತು ಕೊಟ್ಟರೆ ಅವಳು ದಾರಿಗೆ ಬರಬಹುದೆಂದು ಭಾವಿಸಿ, ಬಗ್ಗಿ ಅವಳ ಹಣೆಯ ಮೇಲೆ ಮುತ್ತಿಟ್ಟ. ಪರ್ಲ್ ತನ್ನ ತಾಯಿಯ ಕೈ ಝಾಡಿಸಿ ಬಿಡಿಸಿಕೊಂಡು ತೊರೆಯ ಬಳಿಗೆ ಓಡಿ, ಬಗ್ಗಿಕೊಂಡು ತನ್ನ ಹಣೆಯನ್ನು ತೊಳೆಯತೊಡಗಿದಳು. ಆ ಚುಂಬನ ಕರಗಿ ಕರಗಿ ಹರಿಯುತ್ತಿರುವ ನೀರಿನೊಂದಿಗೆ ಸಂಪೂರ್ಣವಾಗಿ ಸೇರಿ ತೇಲಿ ಹೋಗುವವರೆಗೂ ತೊಳೆದಳು. ಅನಂತರ ಹೆಸ್ಟರ್ ಮತ್ತು ಪಾದ್ರಿ ಮಾತನಾಡುತ್ತಿರುವಾಗ ತಾನು ದೂರದಲ್ಲೇ ನೋಡುತ್ತ ನಿಂತಿದ್ದಳು. ಅವರಿಬ್ಬರೂ ಮುಂದಿನ ಹೊಸ ಬಾಳಿಗೆ ಅಣಿಮಾಡಿಕೊಳ್ಳಬೇಕಾದುದನ್ನು ಕುರಿತು ಚರ್ಚಿಸುತ್ತಿದ್ದರು.

ಇಲ್ಲಿಗೆ ಅವರಿಬ್ಬರ ಸಂದರ್ಶನ ಮುಗಿಯಿತು. ಅವರು ಅಲ್ಲಿಂದ ಹೊರಟುಹೋದಮೇಲೆ ಕಾಡಿನ ಭಾರಿ ಮರಗಳು ಯಾವ ಮರ್ತ್ಯನಿಗೂ ಅರ್ಥವಾಗದ ಭಾಷೆಯಲ್ಲಿ ಅಲ್ಲಿ ನಡೆದದ್ದನ್ನು ಕುರಿತು ತಮ್ಮ ತಮ್ಮಲ್ಲೇ ಪಿಸುಗುಟ್ಟಿಕೊಳ್ಳುತ್ತಿದ್ದುವು. ಆ ಸಪ್ಪಗಿರುವ ಝರಿ ತನ್ನ ಅನೇಕ ಕಥೆಗಳೊಂದಿಗೆ ಇದನ್ನೂ ಸೇರಿಕೊಂಡು ಬಳಬಳನೆ ಗೊಣಗುತ್ತಾ ಹರಿಯುತ್ತಿತ್ತು.

ಅಲ್ಲಿಂದ ಮೊದಲು ಹೊರಟವನು ಪಾದ್ರಿ. ತಾನು ನಡೆದು ಹೋಗುತ್ತಿರುವಾಗ ಆ ತಾಯಿಮಕ್ಕಳಿಬ್ಬರೂ ಹಾಗೆಯೇ ಕಾಡಿನ ಆ ಮಸುಕು ಬೆಳಕಿನಲ್ಲಿ ಮಾಯವಾಗಿಬಿಡುವರೇನೋ ಎನ್ನುವಂತೆ ಒಮ್ಮೆ ಹಿಂದಿರುಗಿ ನೋಡಿದ. ಇದೆಲ್ಲಾ ದಿಟವೆಂದು ನಂಬಲಿಕ್ಕಾಗದಷ್ಟು ಅವನು ಈಗಾಗಲೇ ಅನುಭವಿಸಿದ್ದ. ಆದರೆ ಬೂದಿಬಣ್ಣದ ವಸ್ತ್ರಗಳನ್ನು ಧರಿಸಿ ಹೆಸ್ಟರ್ ಆ ಒಣಗಿದ್ದ ಮರದ ಪಕ್ಕದಲ್ಲಿಯೇ ನಿಂತಿದ್ದಳು. ತಮ್ಮಿಬ್ಬರ ನಡುವೆ ಬಂದಿದ್ದ ಮೂರನೆಯವನು ಹೊರಟು ಹೋದ ಸಂತೋಷದಿಂದ ಪರ್ಲ್ ಕುಣಿಯುತ್ತಾ ತನ್ನ ತಾಯಿಯ ಪಕ್ಕಕ್ಕೆ ಸೇರಿದಳು. ಆದ್ದರಿಂದ ಪಾದ್ರಿ ಕನಸು ಕಾಣುತ್ತಿರಲಿಲ್ಲ !

ತನ್ನ ಮನಸ್ಸಿನಲ್ಲಿದ್ದ ಅವ್ಯಕ್ತಭಾವನೆಗಳ ಗೊಂದಲದಿಂದ ತಪ್ಪಿಸಿಕೊಳ್ಳಲು, ತಾವಿಬ್ಬರೂ ಇಲ್ಲಿಂದ ಹೊರಟು ಹೋಗಲು ತಕ್ಕ ಉಪಾಯವನ್ನು ಯೋಚಿಸತೊಡಗಿದ. ಅಮೇರಿಕ ಖಂಡದಲ್ಲಾಗಲಿ, ಯೂರೋಪಿನ ಸಣ್ಣ ಹಳ್ಳಿಗಳಲ್ಲಾಗಲೀ ವಾಸಿಸುವುದಕ್ಕಿಂತ ಜನಸಂದಣಿಯಿಂದ ತುಂಬಿರುವ ದೊಡ್ಡ ಪಟ್ಟಣಕ್ಕೆ ಸೇರಿದರೆ, ಅಲ್ಲಿ ಎಲ್ಲರಿಂದ ಮರೆಯಾಗಿ ಬಾಳಬಹುದೆಂಬ ಇತ್ಯರ್ಥಕ್ಕೆ ತಾವಿಬ್ಬರೂ ಬಂದಿದ್ದರು. ಕಾಡಿನ ಕಷ್ಟಜೀವನ ದೇಹಧಾರ್ಢ್ಯವನ್ನು ಕಳೆದುಕೊಂಡಿದ್ದ ಪಾದ್ರಿಗೆ ಒಗ್ಗುವಂತಿರಲಿಲ್ಲ. ಆದುದರಿಂದ ಅವನ ಗುಣ–ಸಂಸ್ಕೃತಿಗಳಿಗನುವಾಗಿದ್ದ ಪಟ್ಟಣವಾಸವೇ ಮೇಲೆನಿಸಿತು. ಅವರ ಈ ಕಾರ್ಯಸಾಧನೆಗೆ ಅನುಕೂಲವಾಗಿ ಬಂದರಿನಲ್ಲಿ ಒಂದು ಹಡಗೂ ಇತ್ತು. ಸ್ಪ್ಯಾನಿಷ್ ವೈನಿನಿಂದ ಬಂದಿದ್ದ ಈ ಹಡಗು ಇನ್ನು ಮೂರು ದಿನಗಳಲ್ಲಿಯೇ ಬ್ರಿಸ್ಟಲ್‌ಗೆ ಹೊರಡುವುದಿತ್ತು, ಹೆಸ್ಟರ್ ಪ್ರೈನ್‌ಳಿಗೆ ಆ ಹಡಗಿನ ಕ್ಯಾಪ್ಟನ್ನನ ಪರಿಚಯವಿತ್ತು. ಇಬ್ಬರು ದೊಡ್ಡವರನ್ನೂ ಒಂದು ಮಗುವನ್ನೂ ರಹಸ್ಯವಾಗಿ ಹಡಗಿನಲ್ಲಿ ಕರೆದುಕೊಂಡು ಹೋಗುವಂತೆ ಅಣಿಮಾಡಲು ಹೆಸ್ಟರ್‌ಳಿಗೆ ಅನುಕೂಲವಿತ್ತು.

ಹಡಗು ಹೊರಡುವವೇಳೆ ಎಷ್ಟೆಂದು ಪಾದ್ರಿ ತುಂಬ ಆಸಕ್ತಿಯಿಂದ್ದ ಹೆಸ್ಟರ್‌ಳನ್ನು ಕೇಳಿದ್ದ. ಇಂದಿಗೆ ನಾಲ್ಕನೆಯ ದಿನವೆಂದು ತಿಳಿಯಿತು. 'ಇದೀಗ ಅದೃಷ್ಟ ! ಎಂದುಕೊಂಡ ಪಾದ್ರಿ. ಅದೇಕೆ ಅದೃಷ್ಟ ಎಂದುಕೊಂಡನೆಂದರೆ, ಅಂದಿಗೆ ಮೂರನೆಯದಿನ ಅವನು ಚುನಾವಣಾ ಪ್ರಚಾರ ನಡೆಸಬೇಕಾಗಿತ್ತು. ಅದು ನ್ಯೂಇಂಗ್ಲೆಂಡಿನ ಪಾದ್ರಿಗಳಿಗೆ ದೊರೆಯುತ್ತಿದ

ಬಹು ದೊಡ್ಡ ಗೌರವವಾಗಿತ್ತು. ತನ್ನ ಅಧಿಕಾರವನ್ನು ಕೊನೆಗಾಣಿಸಲು ಅದಕ್ಕಿಂತಲೂ ಇನ್ನು ಸೂಕ್ತವಾದ ಸಮಯವಿರಲಿಲ್ಲ. 'ಕಡೆಯಪಕ್ಷ, ನಾನು ಎಂದೂ ಕರ್ತವ್ಯ ವಿಮುಖನಾಗಿರಲಿಲ್ಲವೆಂದು ಜನ ಅಂದುಕೊಳ್ಳು ತ್ತಾರೆ' ಎಂದುಕೊಂಡ. ಈ ಆತ್ಮ ಪರಿಶೀಲನೆ ಅವನಿಗೇ ಮೋಸ ಮಾಡಿ ದುದು ತುಂಬ ವಿಷಾದಕರವಾದ ವಿಷಯ. ಯಾವ ಮನುಷ್ಯನಾದರೂ ಸರಿಯೆ, ತುಂಬಕಾಲ ಹೊರಗೊಂದು ಒಳಗೊಂದು ರೀತಿಯಾಗಿ ನಡೆದು ಕೊಳ್ಳುತ್ತಿದ್ದರೆ, ತನ್ನ ನಿಜಸ್ವಭಾವ ಯಾವುದೆಂದು ಅವನಿಗೇ ಸಂದೇಹ ಬಂದುಬಿಡುತ್ತದೆ.

ಹೆಸ್ಟರ್‌ಳನ್ನು ಸಂಧಿಸಿದುದರಿಂದ ವಿಕಸಿತಗೊಂಡಿದ್ದ ಅವನ ಮನಸ್ಸು, ತುಂಬ ಚೈತನ್ಯ ಪಡೆದಿತ್ತು. ಊರಿನ ಕಡೆಗೆ ಸರಸರನೆ ನಡೆಯುತ್ತಿದ್ದ. ಆ ಕಾಲುದಾರಿಯಲ್ಲಿ ತಾನು ಬರುವಾಗ ಇದ್ದುದಕ್ಕಿಂತ ಹೆಚ್ಚು ಅಡಚಣೆ ಗಳಿರುವುದೆನ್ನಿಸಿತು. ಕೊಚ್ಚೆಯಿದ್ದ ಕಡೆಯಲ್ಲೆಲ್ಲಾ ನೆಗೆದು, ದಾರಿಗೆ ಅಡ್ಡವಾಗಿದ್ದ ಪೊದೆಗಳನ್ನು ಸರಿಸಿಕೊಂಡು ನುಗ್ಗಿ, ದಿಣ್ಣೆ ಹತ್ತಿ, ಇಳಿದು ಸರಸರನೆ ಹೋಗುತ್ತಿರುವುದನ್ನು ಕಂಡು ಅವನಿಗೇ ಆಶ್ಚರ್ಯವಾಯಿತು. ಎರಡುದಿನಗಳಿಗೆ ಮುಂಚೆ, ತಾನು ಅಲ್ಲಲ್ಲೇ ಸುಧಾರಿಸಿಕೊಳ್ಳುತ್ತಾ, ನಿತ್ರಾಣದಿಂದ ಎಷ್ಟು ನಿಧಾನವಾಗಿ ಅದೇ ರಸ್ತೆಯ ಮೇಲೆ ನಡೆಯುತ್ತಿದ್ದೆ ನೆಂಬುದು ಅವನಿಗೆ ನೆನಪಾಯಿತು. ಊರನ್ನು ಸಮೀಪಿಸಿದಂತೆಲ್ಲಾ ತನಗೆ ಚಿರಪರಿಚಿತವಾಗಿದ್ದ ವಸ್ತುಗಳಲ್ಲೆಲ್ಲಾ ಏನೋ ಬದಲಾಯಿಸಿರುವಂತೆ ಕಾಣಿಸುತ್ತಿತ್ತು. ಅವುಗಳನ್ನೆಲ್ಲಾ ಬಿಟ್ಟುಹೋಗಿ ಎಷ್ಟೋ ವರ್ಷಗಳು ಕಳೆದಂತಿತ್ತು. ಜನಗಳಲ್ಲೂ ಅದೇ ವ್ಯತ್ಯಾಸ ಕಾಣುತ್ತಿತ್ತು. ತಾನು ಕಂಡ ಮುದುಕರು ಚಿಕ್ಕವರಾಗಿರಲಿಲ್ಲ. ಅಥವಾ ಮತ್ತಷ್ಟು ಮುದುಕರಾಗಿರ ಲಿಲ್ಲ. ನಿನ್ನೆ ಕಂಕುಳಲ್ಲಿದ್ದ ಮಗು ಇಂದು ನಡೆಯುತ್ತಿರಲಿಲ್ಲ. ಆದರೂ ತಾನು ಸ್ವಲ್ಪ ಹೊತ್ತಿಗೆ ಮುಂಚೆ ನೋಡಿದ್ದ ಇವರಲ್ಲೆಲ್ಲ ಏನು ವ್ಯತ್ಯಾಸ ವಾಗಿರಬಹುದೆಂದು ಅವನಿಂದ ಹೇಳುವುದಕ್ಕಾಗುವುದಿಲ್ಲ. ಚರ್ಚಿನ ಒಳಕ್ಕೆ ಹೋಗುತ್ತಿರುವಾಗಲೂ ಅವನಿಗೆ ಅದೇ ಅನುಭವವಾಯಿತು. ಚಿರಪರಿಚಿತ ವಾಗಿದ್ದ ಚರ್ಚಿನದ್ವಾರ ಸಹ ವಿಚಿತ್ರವಾಗಿ ಕಾಣುತ್ತಿತ್ತು. ಅವನ ಮನಸ್ಸಿ ನಲ್ಲಿ ಒಮ್ಮೆಗೇ ಎರಡು ಭಾವನೆಗಳು ಮೂಡಿದವು. ಇದನ್ನು ಎಲ್ಲೋ ಕನಸಿನಲ್ಲಿ ಕಂಡಿರಬೇಕು, ಅಥವಾ ಈಗ ಕನಸುಕಾಣುತ್ತಿರಬೇಕು ಎಂದು ಕೊಂಡ.

ಎಲ್ಲ ಕಡೆಯಲ್ಲೂ ಇದೇ ಅನುಭವವಾಯಿತು. ಈ ಒಂದು ದಿನ

ಅವನಲ್ಲಿ ಅನೇಕವರ್ಷಗಳ ಪರಿವರ್ತನೆಯನ್ನುಂಟುಮಾಡಿತ್ತು. ಈ ಪರಿವರ್ತನೆಗೆ ಕಾರಣ ಅಂದು ಮಧ್ಯಾಹ್ನ ಅವರಿಬ್ಬರೂ ಇತ್ಯರ್ಥಕ್ಕೆ ಬಂದಿದ್ದ ನಿರ್ಧಾರ. ಊರೇನೋ ಅದೇ ಆದರೂ, ಹಿಂದಿರುಗಿ ಬಂದವನು ಅದೇ ಪಾದ್ರಿಯಾಗಿರಲಿಲ್ಲ. ಗೆಳೆಯರಾರಾದರೂ ಸಿಕ್ಕಿ ಮಾತನಾಡಿಸಿದ್ದಲ್ಲಿ,—'ನೀವು ಯಾರೆಂದು ಭಾವಿಸದ್ದರೋ ಆ ಮನುಷ್ಯನಲ್ಲ ನಾನು. ಕಾಡಿನಲ್ಲಿ ಝರಿಯ ಪಕ್ಕದಲ್ಲಿರುವ ಒಣಕಲು ಮರದ ಬಳಿಯಲ್ಲೇ ಅವನನ್ನು ಬಿಟ್ಟು ಬಂದೆ! ಗುಳಿಬಿದ್ದ ಕೆನ್ನೆ, ಸುಕ್ಕುಹಿಡಿದ ಹಣೆಯೊಂದಿಗೆ ಅವನ ಕೃಶವಾದ ದೇಹ ಅಲ್ಲಿ ಕಳಚಿಹಾಕಿದ ಬಟ್ಟೆಯಂತೆ ಬಿದ್ದಿರುವುದನ್ನು ಬೇಕಾದರೆ ಹೋಗಿ ನೋಡಿ!' ಎಂದು ಹೇಳಿಬಿಡುತ್ತಿದ್ದನೇನೋ. ಅವನ ಸ್ನೇಹಿತರೇನೋ, 'ನೀನೇ ಅವನು' ಎಂದು ಖಂಡಿತವಾಗಿ ಹೇಳಿಬಿಡುತ್ತಿದ್ದರು. ಆದರೆ ತಪ್ಪೆಲ್ಲ ಅವರದಾಗುತ್ತಿತ್ತು—ಅವನದಲ್ಲ.

ಮನೆ ಸೇರುವಷ್ಟರಲ್ಲಿಯೇ ಡಿಮ್ಸ್‌ಡೇಲನ ಮನಸ್ಸಿನಲ್ಲಿ ಆದ ಬದಲಾವಣೆಗಳಿಗೆ ಅನೇಕ ಸಾಕ್ಷ್ಯಗಳು ದೊರೆತವು. ಅವನು ಹೊಸ ಜನ್ಮವನ್ನೇ ತಳೆದುಬಂದಂತಿತ್ತು. ತನಗೇ ತಿಳಿಯದಂತೆ ಅವನಲ್ಲಿ ಯಾವುದೋ ವಿಚಿತ್ರವಾದ ಹೊಸಶಕ್ತಿ ಬಂದು ಸೇರಿಕೊಂಡು ಚೇಷ್ಟೆ ಮಾಡುವಂತೆ ತನ್ನನ್ನು ಪ್ರೇರಿಸುತ್ತಿತ್ತು. ಇದಕ್ಕೆ ನಿದರ್ಶನವೂ ಉಂಟು. ದಾರಿಯಲ್ಲಿ ಡಿಮ್ಸ್‌ಡೇಲ್ ಮತ್ತೊಬ್ಬ ವೃದ್ಧ ಪಾದ್ರಿಯನ್ನು ಸಂಧಿಸಿದ. ಅಧಿಕಾರದಲ್ಲೂ, ವಯಸ್ಸಿನಲ್ಲಿಯೂ ಮತ್ತು ಜ್ಞಾನದಲ್ಲೂ ಇವನಿಗಿಂತ ತುಂಬ ವೃದ್ಧನಾಗಿದ್ದ ಆತ. ಅದಕ್ಕೆ ತಕ್ಕಂತೆ ಎಲ್ಲರೂ ಅವನನ್ನು ತುಂಬ ಗೌರವದಿಂದ ಕಾಣುವುದು ಅವರ ಕರ್ತವ್ಯವಾಗಿತ್ತು. ಡಿಮ್ಸ್‌ಡೇಲ್ ಆತನೊಡನೆ ಮಾತನಾಡುತ್ತಿದ್ದ ಎರಡು ಮೂರು ಕ್ಷಣಗಳಲ್ಲಿ ತನ್ನ ಮನಸಿನಲ್ಲೇಳುತ್ತಿದ್ದ ಅಸಂಬದ್ಧ ನುಡಿಗಳನ್ನು ಬಹಳ ಕಷ್ಟದಿಂದ ತಡೆದು ಬಾಯಿ ಬಿಗಿಹಿಡಿದಿದ್ದ. ನಾಲಗೆ ಎಲ್ಲಿ ಹಿಡಿತ ತಪ್ಪಿ, ಏನು ನುಡಿದುಬಿಡುತ್ತದೆಯೊ ಎಂದು ಗಾಬರಿಯಿಂದ ಅವನ ಮುಖ ಕಳೆಗುಂದಿಹೋಯಿತು. ತಾನೇನಾದರೂ ಹಾಗೆ ನುಡಿದಲ್ಲಿ ಆ ಮುದಿ ಪಾದ್ರಿ ಬಿಟ್ಟಬಾಯಿ ಬಿಟ್ಟಂತೆ ಪೆದ್ದುಹಿಡಿದು ಹೇಗೆ ನಿಲ್ಲಬಹುದೆಂದು ಯೋಚಿಸಿಕೊಂಡು ಅವನಿಗೆ ತುಂಬ ನಗುವೂ ಬಂತು.

ಇನ್ನೊಂದು ಬಾರಿ ಹೀಗೆಯೇ ಆಯಿತು. ಪಾದ್ರಿ ಬೀದಿಯಲ್ಲಿ ಸರಸರನೆ ನಡೆದುಹೋಗುತ್ತಿರುವಾಗ ತಮ್ಮ ಚರ್ಚಿನಲ್ಲೆಲ್ಲಾ ತುಂಬ ವಯಸಾಗಿದ್ದ ಒಬ್ಬ ವೃದ್ಧೆಯನ್ನು ಸಂಧಿಸಿದ. ಒಬ್ಬಂಟಿಗಳಾಗಿದ್ದ,

ವಿಧವೆಯಾದ ಆ ಮುದುಕಿ, ತುಂಬ ದೈವಭಕ್ತಳು. ಅವಳಿಗೆ ತುಂಬ ಕಿವುಡು. ಆದರೂ ಕ್ರೈಸ್ತವೇದದ ಒಂದೆರಡು ತತ್ತ್ವಗಳನ್ನು ಬಹಳ ಜಾಗರೂಕಳಾಗಿ ಆ ಪಾದ್ರಿಯ ಬಾಯಿಂದ ಕೇಳಿದರೆ ಅವಳಿಗೆ ಬಹಳ ತೃಪ್ತಿ. ಪ್ರತಿಸಲವೂ ಅವಳ ಕಿವಿಯ ಹತ್ತಿರ ಗಟ್ಟಿಯಾಗಿ ಒಂದೆರಡು ತತ್ತ್ವಗಳನ್ನು ಹೇಳಿ ಅವಳೊಡನೆ ಮಾತನಾಡುತ್ತಿದ್ದ ಪಾದ್ರಿ. ಆದರೆ ಈ ಬಾರಿ ಮಾತ್ರ ಅವಳ ಕಿವಿಯಬಳಿ ಬಾಯಿತಂದಾಗ ಅವನಿಗೆ ಒಂದು ತತ್ತ್ವವೂ ಜ್ಞಾಪಕ ಬರಲಿಲ್ಲ. ಆತ್ಮದ ಅಮರತೆಯನ್ನು ಕುರಿತು ಏನೇನೋ ಹೇಳಿದ. ತನ್ನ ಮಾತಿನಲ್ಲಿ ಹುರುಳಿಲ್ಲದಿರುವುದು ಅವನಿಗೂ ತಿಳಿದು ಅವನು ಹೇಳುತ್ತಿದ್ದುದನ್ನು ಕೇಳಿ, ವಿಷ ನುಂಗಿದವಳಂತೆ ಆ ಮುದುಕಿ ಅಲ್ಲೇ ಸತ್ತು ಬೀಳಬೇಕಾಗಿತ್ತು. ತಾನು ಆಗ ಏನೇನು ಹೇಳಿದನೋ, ಅನಂತರ ಪಾದ್ರಿಗೆ ಅದರ ನೆನಪೇ ಆಗಲಿಲ್ಲ. ಅವನ ಅದೃಷ್ಟದಿಂದ ಅವನು ಹೇಳಿದುದೆಲ್ಲ ಅಸಂಗತವಾಗಿದ್ದು, ಅವಳಿಗೆ ಅರ್ಥವಾಗದೆ ಇದ್ದಿರಬಹುದು; ಅಥವ ಭಗವಂತ ತನ್ನದೇ ಆದ ರೀತಿಯಲ್ಲಿ ಅದನ್ನು ತರ್ಜುಮೆ ಮಾಡಿದನೆಂದು ಕಾಣುತ್ತದೆ. ಪಾದ್ರಿ ಅಲ್ಲಿಂದ ಹೊರಟುಹೋದಮೇಲೆ ಹಿಂದಿರುಗಿ ನೋಡಿದಾಗ ದೈವಭಕ್ತಿಯಿಂದ ತುಂಬಿದ್ದ ಅವಳ ಸುಕ್ಕು ಮುಖದಲ್ಲಿ ಕೃತಜ್ಞತೆ ಎದ್ದು ಕಾಣುತ್ತಿತ್ತು.

ಆ ಮುದುಕಿಯನ್ನು ಬಿಟ್ಟು ಮುಂದೆಹೊರಟ ಮೇಲೆ, ದಾರಿಯಲ್ಲಿ ಚರ್ಚಿಗೆ ಸೇರಿದ ಇನ್ನೊಬ್ಬಯುವತಿ ಸಿಕ್ಕಿದಳು. ಚರ್ಚಿಗೆ ಸೇರಿದ್ದವರಲ್ಲೆಲ್ಲಾ ಆಕೆಯೇ ಬಹಳ ಚಿಕ್ಕವಳು. ಡಿಮ್ಸ್‌ಡೇಲ್ ಮಧ್ಯವೇದಿಕೆಯ ಮೇಲೆ ನಿಂತಿದ್ದ ಮಾರನೆಯ ದಿನ ಸಬ್ಬತ್ತಿನ ಭಾಷಣದಲ್ಲಿ ಈ ಪ್ರಾಪಂಚಿಕ ಸುಖಗಳೆಲ್ಲ ಕ್ಷಣಿಕ, ಮತ್ತೇ ಅಶಾಶ್ವತ ಎಂಬುದಾಗಿ ದೊಡ್ಡ ಭಾಷಣ ಮಾಡಿದ್ದ. ಆ ಭಾಷಣಕ್ಕೆ ಮಾರು ಹೋಗಿ ಆ ಯುವತಿಯೂ ಚರ್ಚಿಗೆ ಸೇರಿಬಿಟ್ಟಿದ್ದಳು. ದೇವಲೋಕದಲ್ಲಿ ಅರಳಿದ ಪುಷ್ಪದಂತೆ ಅಳುವ ಸುಂದರವಾಗಿ, ಪವಿತ್ರವಾಗಿದ್ದಳು. ತನ್ನ ಮೂರ್ತಿಯನ್ನೇ ಅವಳು ತನ್ನ ಹೃದಯ ಮಂದಿರದೊಳಗಿಟ್ಟುಕೊಂಡು ಭಕ್ತಿಯಿಂದ ಪೂಜಿಸುತ್ತಿರುವುದು ಡಿಮ್ಸ್‌ಡೇಲನಿಗೂ ತಿಳಿದಿತ್ತು. ಅದೇಕೋ ಸೈತಾನನೇ ಅವಳನ್ನು ತಾಯಿಯ ಜೊತೆ ತಪ್ಪಿಸಿ ಈ ಹುಚ್ಚುತಿರುಗಿರುವ ಪಾದ್ರಿಯ ಮಾರ್ಗಕ್ಕೆದುರಾಗಿ ಕರೆತಂದನೆಂದು ಕಾಣುತ್ತದೆ. ಅವಳು ಹತ್ತಿರ ಬರುತ್ತಿರುವಂತೆ ಅವನ ಕಿವಿಯಲ್ಲಿ ಪಿಶಾಚಿ ಪಿಸುಗುಟ್ಟ ತೊಡಗಿತು—ಒಂದು ಸಣ್ಣ ವಿಷ ಬೀಜವನ್ನು ಅವಳ ಕೋಮಲವಾದ ಎದೆಯೊಳಕ್ಕೆ ಹಾಕಿ ಬಿಟ್ಟರೆ, ಅದು

ಬೇಗನೆ ಕಪ್ಪು ಗಿಡವಾಗಿ ಬೆಳೆದು ಕಪ್ಪು ಫಲಗಳನ್ನು ಬಿಡುತ್ತದೆ ಎಂದು. ಅವಳ ಮೇಲೆ ಈ ಪಾದ್ರಿಯ ಪ್ರಭಾವ ಅಷ್ಟಿತ್ತು. ಮುಗ್ಧಳಾಗಿದ್ದ ಅವಳು ಅವನನ್ನೇ ನಂಬಿದ್ದಳು. ತನ್ನ ಒಂದು ವಕ್ರನೋಟದಿಂದ ಅವಳ ಮುಗ್ಧತೆಯನ್ನೆಲ್ಲಾ ಹಾಳುಮಾಡಿ ಬಿಡೋಣ ಎನ್ನಿಸಿತು ಪಾದ್ರಿಗೆ. ಆದರೆ ತುಂಬ ಹೆಣಗಾಡಿ ಆ ಭಾವನೆಯನ್ನು ತಡೆಹಿಡಿದ.

'ತನ್ನ ಒರಟುತನವನ್ನು ಕಂಡು ಅವಳು ಏನು ಬೇಕಾದರೂ ತಿಳಿದುಕೊಳ್ಳಲಿಎಂದುಕೊಂಡು ಮುಖಕ್ಕೆ ತನ್ನಅಂಗಿಯನ್ನು ಮರೆಮಾಡಿಕೊಂಡು, ಅವಳನ್ನು ಗುರುತು ಸಹ ಹಿಡಿಯದೆ ಸರಸರನೆ ಮುಂದೆ ನಡೆದ. ದೋಷರಹಿತವಾಗಿದ್ದರೂ ಸಹ ಅವಳು ತನ್ನ ಮನಸ್ಸನ್ನೆಲ್ಲಾ ಶೋಧಿಸಿಕೊಂಡಳು. ಇಲ್ಲದ ತಪ್ಪುಗಳನ್ನೆಲ್ಲಾ ಕಲ್ಪಿಸಿಕೊಂಡಳು. ಮಾರನೆಯ ದಿನ ಪ್ರಾತಃಕಾಲದ ವೇಳೆಗೆ ಅತ್ತು ಅತ್ತು ಅವಳ ಕಣ್ಣುಗುಡ್ಡೆಗಳೆರಡೂ ಊದಿಬಿಟ್ಟಿದ್ದವು.

ಹೇಗೋ ಕಷ್ಟಪಟ್ಟು ಈ ದುರ್ಭಾವನೆಯನ್ನು ಜಯಿಸಿಕೊಂಡು ಮುಂದೆ ಹೋಗುತ್ತಿರುವಷ್ಟರಲ್ಲಿಯೇ, ಮತ್ತಷ್ಟು ಕೀಳಾದ ಮತ್ತು ಘೋರವಾದ ಯೋಚನೆಯೊಂದು–ಅದನ್ನು ಹೇಳಲೂ ನಮಗೆ ನಾಚಿಕೆಯಾಗುತ್ತದೆ—ಸುಳಿಯಿತು ಅವನ ತಲೆಯಲ್ಲಿ. ಅಲ್ಲಿ ಆಟವಾಡುತ್ತ ಗುಂಪು ಕಟ್ಟಿಕೊಂಡು ನಿಂತಿದ್ದ ಪ್ಯೂರಿಟನ್ನರ ಮಕ್ಕಳಿಗೆ ಕೆಲವು ಕೆಟ್ಟಮಾತುಗಳನ್ನು ಬೋಧಿಸೋಣ ಎನ್ನಿಸಿತು. ಇನ್ನೇನು ಮಾತನಾಡುವುದರಲ್ಲಿಯೂ ಇದ್ದ. ಆದರೆ ಅದು ತನ್ನ ಯೋಗ್ಯತೆಗೆ ತಕ್ಕದಲ್ಲವೆಂದುಕೊಂಡು ಮುಂದೆ ಹೆಜ್ಜೆಯಿಡುತ್ತಿರುವಂತೆಯೇ ಕುಡಿತದಿಂದ ಅಮಲೇರಿದ, ಸ್ಪ್ಯಾನಿಷ್‌ಮೈನಿನಿಂದ ಬಂದಿದ್ದ ನಾವಿಕ ಎದುರಿಗೆ ಸಿಕ್ಕಿದ. ತನ್ನ ಮನೋವಿಕಾರಗಳನ್ನೆಲ್ಲ ಬಹಳ ಪ್ರಯಾಸದಿಂದ ಅಡಗಿಸಿಟ್ಟುಕೊಂಡಿದ್ದ ಡಿಮ್ಸ್‌ಡೇಲ್, ಕಡೆಯ ಪಕ್ಷ ಆ ಕುಡುಕನ ಕೈಕುಲುಕಬೇಕೆನಿಸಿತು. ಕೀಳು ಮಟ್ಟದ ನಾವಿಕರಂತೆ ಅವನೊಡನೆ ಸ್ವಲ್ಪ ಅಶ್ಲೀಲ ಹಾಸ್ಯಗಳನ್ನಾಡಿ, ಕಡೆಗೆ ಬಿರುನುಡಿಗಳನ್ನಾಡಿ ಚೆನ್ನಾಗಿ ಬೈದಾಡಬೇಕೆನ್ನಿಸಿತು! ಒಳ್ಳೆಯ ಸ್ವಭಾವಕ್ಕಿಂತ ಮಿಗಿಲಾಗಿ ಅವನ ಸ್ಥಾನಮಾನಗಳ ಗೌರವವೇ ಅವನನ್ನು ಈ ಗೊಂದಲದಿಂದ ತಪ್ಪಿಸಿತೆಂದು ಹೇಳಬಹುದು.

'ನನ್ನ ಬೆನ್ನು ಬಿದ್ದ ಈ ದುರ್ಭಾವನೆಗಳಿಂದ ನನ್ನನ್ನು ಪೀಡಿಸುತ್ತಿರುವುದು ಏನು? ನನಗೇನು ಹುಚ್ಚೆ? ಅಥವಾ ಭೂತಹಿಡಿದಿದೆಯೆ? ಕಾಡಿನಲ್ಲಿ ಅವನೊಡನೆ ಒಪ್ಪಂದ ಮಾಡಿಕೊಂಡು ನನ್ನರಕ್ತದಿಂದ ಸಹಿಮಾಡಿ

ದ್ದೇನೆಯೆ ? ತುಂಬ ಕೀಳು ಕಲ್ಪನೆಗಳನ್ನೆಲ್ಲ ನನ್ನ ತಲೆಯಲ್ಲಿ ತುಂಬಿ, ದುಷ್ಕಾರ್ಯಗಳನ್ನು ಮಾಡುವಂತೆ ಆ ಕರಾರನ್ನು ಕಾರ್ಯಗತಮಾಡಲು ನನ್ನನ್ನು ಹೀಗೆ ಪೀಡಿಸುತ್ತಿದ್ದಾನೆಯೆ ? ' ಎಂದು ರಸ್ತೆಯಲ್ಲಿ ನಿಂತು ಹಣೆ ಚಚ್ಚಿಕೊಳ್ಳುತ್ತಾ ತನ್ನಲ್ಲೇ ಹೇಳಿಕೊಂಡ ಪಾದ್ರಿ.

ಅವನು ಹೀಗೆ ಹಣೆ ಚಚ್ಚಿಕೊಳ್ಳುತ್ತಾ ನಿಂತಿರುವ ಸಮಯಕ್ಕೆ ಸರಿಯಾಗಿ, ಮುದಿಮಾಟಗಾರ್ತಿ ಮಿಸ್ಟ್ರೆಸ್ ಹಿಬ್ಬನ್ಸ್ ಹಾದು ಹೋಗುತ್ತಿದ್ದಳು. ತಲೆಯಮೇಲೆ ಎತ್ತರವಾದ ಟೋಪಿಧರಿಸಿ, ಬೆಲೆಬಾಳುವ ಮಕಮಲ್ಲಿನ ಗೌನನ್ನು ಧರಿಸಿದ್ದಳು. ಅವಳ ಕುತ್ತಿಗೆಯ ಪಟ್ಟಿಗೆ ಹಳದಿ ಬಣ್ಣದ ಗಂಜಿಹಾಕಿತ್ತು. ಈ ರಹಸ್ಯವನ್ನು ಆಕೆಯ ಆಪ್ತ ಗೆಳತಿ ಆನ್‌ಟರ್‍ನರ್ ಹೇಳಿಕೊಟ್ಟಿದ್ದಳು. ಆನ್‌ಟರ್‍ನರ್‌ಳನ್ನು ಸರ್ ಥಾಮಸ್ ಓವರ್‌ಬರಿಯವರ ಕೊಲೆಗಾಗಿ ಗಲ್ಲಿಗೇರಿಸಿದ್ದರಂತೆ. ಆ ಮಾಟಗಾರ್ತಿ ಪಾದ್ರಿಯ ಮನಸ್ಸನ್ನು ತಿಳಿದವಳಂತೆ ಅರ್ಥಗರ್ಭಿತವಾಗಿ ನಕ್ಕಳು. ಎಂದೂ ಪಾದ್ರಿಗಳ ಕೂಡ ಮಾತನಾಡದಿದ್ದವಳು, ಇಂದು ಈ ಪಾದ್ರಿಯ ಜೊತೆಗೆ ಮಾತಿಗಾರಂಭಿಸಿದಳು.

' ಏನು ರೆವರೆಂಡ್‌ರವರೇ ಕಾಡಿಕೊಳಕ್ಕೆ ಹೋಗಿ ಬಂದಿದ್ದಂತೆ ಕಾಣುತ್ತದೆ. ಮುಂದಿನ ಸಲ, ನೀವು ದಯವಿಟ್ಟು ಒಂದು ಮಾತು ಹೇಳಿದರೆ ಸಾಕು, ನಾನು ಖಂಡಿತವಾಗಿಯೂ ಹೆಮ್ಮೆಯಿಂದ ನಿಮ್ಮೊಂದಿಗೆ ಬರುತ್ತೇನೆ. ನಾನು ಸುಮ್ಮನೆ ಒಂದುಮಾತು ಹೇಳಿದರೆಸಾಕು, ಹೊಸಬರು ಯಾರು ಹೋದರೂ ಆ ಮಾಟಗಾರ, ತುಂಬ ಆದರದಿಂದ ಸ್ವಾಗತಿಸುತ್ತಾನೆ ! ' ಎಂದಳು.

ಪಾದ್ರಿ ಆಕೆಯ ಪದವಿಗೆ ತಕ್ಕ ಮರ್ಯಾದೆಯಿಂದ ಹೇಳಿದ— 'ನಿಮ್ಮ ಮಾತು ಕೇಳಿ ನನಗೇಕೋ ಗಾಬರಿಯಾಗುತ್ತಿದೆ ! ನಾನು ಯಾವ ಮಾಟಗಾರನನ್ನು ಸಂದರ್ಶಿಸುವುದಕ್ಕಾಗಿಯೂ ಕಾಡಿಗೆ ಹೋಗಿರಲಿಲ್ಲ. ಇನ್ನು ಮುಂದೆಯೂ ಹೋಗಿ ಅವನನ್ನು ಪರಿಚಯ ಮಾಡಿಕೊಂಡುಬರುವ ಅಭಿಲಾಷೆಯಿಲ್ಲ. ಅಲ್ಲಿ ನನ್ನ ಗೆಳೆಯ ಈಲಿಯಟ್ ಎಂಬ ಪ್ರಚಾರಕನಿದ್ದಾನೆ. ಅವನು ಅನೇಕ ಆತ್ಮಗಳನ್ನು ಕ್ರಿಶ್ಚಿಯನ್ ಮತಕ್ಕೆ ಪರಿವರ್ತಿಸಿದ ಸಂತೋಷದಲ್ಲಿ ನಾನೂ ಭಾಗಿಯಾಗಿ ಹೋಗಿದ್ದೆ.'

' ಹಹ್ಹಹ್ಹ, ಸರಿ, ಸರಿ, ಬೆಳಗಿನವೇಳೆ ನಾವು ಹೀಗೆಯೇ ಮಾತನಾಡಬೇಕು ! ನೀವು ಬಹಳ ಹಳಬರಂತೆಯೇ ಮಾತನಾಡುತ್ತೀರಿ ! ಆದರೆ ಮಧ್ಯರಾತ್ರಿ, ಕಾಡಿನಲ್ಲಿ ನಾವು ಬೇರೆ ಮಾತಾಡೋಣ ! ' ಎಂದು

ತಲೆದೂಗುತ್ತಾ, ಹೇಳಿದಳು.

ತಮ್ಮಿಬ್ಬರಿಗೂ ರಹಸ್ಯವಾದ ಅಪ್ತಸ್ನೇಹವಿರುವಂತೆ ಅವನ ಕಡೆ ಆಗಾಗ ತಿರುಗಿ ನೋಡಿ ನಗುತ್ತಾ, ಹೊರಟು ಹೋದಳು.

'ಜನರಾಡಿಕೊಳ್ಳುವುದು ವಾಸ್ತವವೇ ಆದರೆ, ಈ ಮುದಿಗೂಬೆಯು ಗುರುವಾದ ಪಿಶಾಚಿಗೆ ನಾನು ಗುಲಾಮನಾಗಿಬಿಟ್ಟಿದ್ದೇನೆಯೆ?' ಎಂದುಕೊಂಡ ಪಾದ್ರಿ.

ನತದೃಷ್ಟ ಪಾದ್ರಿ! ಅವನ ಸ್ಥಿತಿ ಹೆಚ್ಚು ಕಡಮೆ ಹಾಗೆಯೇ ಆಗಿತ್ತು! ಸೌಖ್ಯದ ಕನಸು ಕಂಡು, ಮಹಾಪಾಪವೆಂದು ತಿಳಿದಿದ್ದರೂ, ಮನಃಪೂರ್ವಕವಾಗಿ ಅದಕ್ಕೆ ತಲೆಬಾಗಿದ್ದ. ಆ ಮನಸ್ಸಿನ ತುಂಬ ಹರಡಿಕೊಂಡಿದ್ದ ಪಾಪದ ವಿಷ, ಒಳ್ಳೆಯ ಭಾವನೆಗಳನ್ನೆಲ್ಲಾ ತುಳಿದು, ಕೆಟ್ಟ ಭಾವನೆಗಳನ್ನೆಲ್ಲಾ ಎತ್ತಿಹಿಡಿದಿತ್ತು. ಸಹಜವಾದ ಕಡೆಗೆ ಅವನ ಮನಸ್ಸು ಹೊರಳಿರುವುದು ಅವನು ಮಿಸ್ಟ್ರೆಸ್ ಹಿಬ್ಬನ್ಸ್ಳನ್ನು ಸಂಧಿಸಿದ್ದೇ ಸಾಕ್ಷಿ.

ಈ ವೇಳೆಗೆ ಮಸಣದ ಪಕ್ಕದಲ್ಲಿದ್ದ ತನ್ನ ಮನೆಯ ಬಳಿಗೆ ಬಂದಿದ್ದ. ಸರಸರನೆ ಮೆಟ್ಟಲುಹತ್ತಿ ತನ್ನ ಕೋಣೆ ಸೇರಿಕೊಂಡ. ಕ್ಷಣಕ್ಷಣಕ್ಕೂ ಬಲಗೊಳ್ಳುತ್ತಿದ್ದ ತನ್ನ ಮನೋವಿಕಾರಗಳನ್ನು ಬೀದಿಯಲ್ಲಿ ಪ್ರದರ್ಶಿಸಿ ಬಿಡುತ್ತೇನೇನೋ ಎಂದು ಹೆದರಿದ್ದ ಪಾದ್ರಿಗೆ, ಈ ಆಸರೆ ದೊರೆತದ್ದು ತುಂಬ ಸಂತೋಷವಾಯಿತು. ಕೋಣೆಯೊಳಕ್ಕೆ ಕಾಲಿಟ್ಟಕೂಡಲೇ, ಅಲ್ಲಿದ್ದ ಪುಸ್ತಕಗಳು, ಕಿಟಕಿಗಳು, ಅಗ್ಗಿಷ್ಟಿಕೆ, ಎಲ್ಲವೂ ಹಿಂದಿನಂತೆ ವಿಚಿತ್ರವಾಗಿ ಕಾಣತೊಡಗಿದವು. ಇಲ್ಲೇ ಅವನು ಬರವಣಿಗೆ ಮತ್ತು ವ್ಯಾಸಂಗಗಳನ್ನು ಮಾಡಿದ್ದ; ಇಲ್ಲೇ ಉಪವಾಸ-ಜಾಗರಣೆಗಳಿಂದ ಅರೆ ಜೀವವಾಗಿದ್ದ; ಇಲ್ಲೇ ಸಾವಿರಾರು ಯಾತನೆಗಳನ್ನು ಅನುಭವಿಸಿ ಪ್ರಾರ್ಥಿಸಲು ಪ್ರಯತ್ನ ಪಟ್ಟಿದ್ದ! ಮೋಸೆಸ್ ಮತ್ತು ಇತರ ಮಹಾತ್ಮರ ವಾಕ್ಯಗಳಿಂದಲೂ ಮತ್ತು ಭಗವಂತನ ವಾಣಿಯಿಂದಲೂ ತುಂಬಿರುವ ಹೀಬ್ರ್ಯೂ ಭಾಷೆಯ ಬೈಬಲ್ ಅಲ್ಲಿತ್ತು! ಮೇಜಿನ ಮೇಲೆ ಎರಡು ದಿನಗಳ ಹಿಂದೆ ಬರೆಯುತ್ತಿರುವಾಗ ವಿಚಾರಲಹರಿ ನಿಂತು ಹೋಗಿ ಅರ್ಧ ವಾಕ್ಯಕ್ಕೇ ನಿಂತುಹೋಗಿದ್ದ ಲೇಖಣಿಯು ವಚನವಿತ್ತು. ಅದು ತನ್ನ ಕೆಲಸವೆಂಬುದೂ ಅವನಿಗೆ ತಿಳಿದಿತ್ತು. ಆದರೆ ಈಗ ಆ ವ್ಯಕ್ತಿತ್ವ ಹೊರಟು ಹೋಗಿತ್ತು. ಕಾಡಿನಿಂದ ಹಿಂದಿರುಗಿದ ವ್ಯಕ್ತಿಯೇ ಬೇರೆಯವನು; ಬುದ್ಧಿವಂತ; ತನಗೆ ಮೊದಲು ನಿಲುಕದೆ ಇದ್ದ ರಹಸ್ಯಗಳನ್ನು ಅರಿತವನು!

ಅವನು ಈ ಯೋಚನಾ ತರಂಗದಲ್ಲಿ ಮುಳುಗಿರುವಾಗ ಬಾಗಿಲು

ತಟ್ಟಿದ ಶಬ್ದವಾಯಿತು. 'ಒಳಗೆ ಬನ್ನಿ!' ಎಂದ. ರೋಜರ್ ಚಿಲಿಂಗ್‌ವರ್ತ್ ಒಳಕ್ಕೆ ಬಂದ. ಪಾದ್ರಿ ವಿವರ್ಣನಾಗಿ ಒಂದು ಕೈಯನ್ನು ಬೈಬಲ್ಲಿನ ಮೇಲೂ, ಮತ್ತೊಂದನ್ನು ತನ್ನ ಎದೆಯ ಮೇಲೂ ಇಟ್ಟು ಮೌನವಾಗಿ ನಿಂತುಬಿಟ್ಟ.

'ಸುಸ್ವಾಗತ ಸ್ವಾಮಿ. ಇಲಿಯಟ್‌ರವರು ಹೇಗಿದ್ದಾರೆ? ಕಾಡಿನಲ್ಲಿ ಅಲೆದಾಡಿದ್ದು ನಿಮ್ಮ ಮೈಗಾಗಲಿಲ್ಲವೆಂದು ಕಾಣುತ್ತದೆ. ಕಳೆಗುಂದಿ ಹೋಗಿದ್ದೀರಿ. ನಿಮ್ಮ ಚುನಾವಣಾ ಪ್ರಚಾರಕ್ಕಾಗಿ, ನಿಮಗೆ ತಕ್ಕಷ್ಟು ಶಕ್ತಿಕೊಡಲು ನನ್ನ ಚಿಕಿತ್ಸೆಯೇ ಸಾಕಷ್ಟೆ?' ಎಂದ ವೈದ್ಯ.

'ಅದೇನೂ ಅವಶ್ಯಕವಿಲ್ಲವೆಂದು ಕಾಣುತ್ತದೆ. ಇಷ್ಟುದಿನ ಇಲ್ಲಿಯೇ ಸೆರೆಯಾಗಿದ್ದ ನನಗೆ, ಈ ಪ್ರಯಾಣದಿಂದಲೂ, ಆ ಪ್ರಚಾರಕರ ಸಂದರ್ಶನೆ ದಿಂದಲೂ, ಸ್ವಚ್ಛವಾದ ಗಾಳಿಯ ಸೇವನೆಯಿಂದಲೂ ಒಳ್ಳೆಯದೇ ಆಗಿದೆ. ಸ್ನೇಹಪೂರ್ಣವಾಗಿ ನೀವು ಕೊಡುತ್ತಿರುವ ಔಷಧಿಗಳೊಂದೂ ಇನ್ನು ಮೇಲೆ ನನಗೆ ಅವಶ್ಯವಿಲ್ಲ ವೈದ್ಯರೆ,' ಎಂದು ಉತ್ತರ ಕೊಟ್ಟ ಡಿಮ್ಸ್‌ಡೇಲ್.

ವೈದ್ಯ, ರೋಗಿಯನ್ನು ವೀಕ್ಷಿಸುವಂತೆ, ಪಾದ್ರಿಯನ್ನೇ ನೋಡುತ್ತಿದ್ದ ರೋಜರ್ ಚಿಲಿಂಗ್‌ವರ್ತ್. ಹೊರಗಡೆ ಆಟ ಕಟ್ಟುತ್ತಿದ್ದರೂ, ತಾನು ಹೆಸ್ಟರ್ ಪ್ರೈನ್‌ಳನ್ನು ಸಂಧಿಸಿದುದು ರೋಜರ್ ಚಿಲಿಂಗ್‌ವರ್ತ್‌ನಿಗೆ ತಿಳಿದು ಹೋಗಿರಬಹುದೆಂದೆನಿಸುತ್ತಿತ್ತು ಪಾದ್ರಿಗೆ. ಇಂದಿನಿಂದ ಪಾದ್ರಿ ತನ್ನ ಗೆಳೆಯನಲ್ಲ, ಶತ್ರು ಎಂದು ವೈದ್ಯನಿಗೂ ಗೊತ್ತಾಗಿರಬೇಕು. ಆದರೂ ಏನೂ ಮಾತನಾಡದೆ, ತನ್ನ ಕೊಂಕುದಾರಿಯಲ್ಲೇ ರಹಸ್ಯದೆಡೆಗೆ ತೆವಳ ತೊಡಗಿದ.

'ಈ ದಿನ ರಾತ್ರಿ ನನ್ನ ಅಲ್ಪ ಚಿಕಿತ್ಸೆಯನ್ನು ಹೊಂದಿದ್ದರೆ ಒಳ್ಳೆಯ ದಲ್ಲವೆ? ನಿಜವಾಗಿಯೂ ಸ್ವಾಮಿ ಈ ಭಾಷಣಕ್ಕಾಗಿ ನಾವು ನಿಮ್ಮನ್ನು ಶಕ್ತಿ ವಂತರನ್ನಾಗಿ ಮಾಡಲೇಬೇಕು. ಜನರೆಲ್ಲ ನಿಮ್ಮಿಂದ ಬಹಳ ನಿರೀಕ್ಷಿಸು ತ್ತಿದ್ದಾರೆ. ಏಕೆಂದರೆ ಮುಂದಿನವರ್ಷ ನೀವು ಇರುತ್ತೀರೋ ಇಲ್ಲವೋ ಎಂಬ ಸಂದೇಹ ಮೂಡಿದೆ' ಎಂದ ವೈದ್ಯ.

'ಹೌದು ಬೇರೆ ಪ್ರಪಂಚಕ್ಕೆ ಹೊರಟುಹೋಗುತ್ತೇನೆ. ಇದಕ್ಕಿಂತ ಅದು ಉತ್ತಮವಾಗಿರುವಂತೆ ಭಗವಂತನು ಕರುಣಿಸಲಿ. ನಿಜವಾಗಿಯೂ ಈ ಜನರೊಡನೆ ಇನ್ನೂ ಒಂದು ವರ್ಷ ಹೆಣಗಲಾರೆ! ಆದರೆ ನನ್ನ ಈಗಿನ ದೇಹಸ್ಥಿತಿಯನ್ನು ನೋಡಿದರೆ, ನಿಮ್ಮ ಔಷಧಿ ನನಗೆ ಬೇಕಾಗಿಲ್ಲ' ಎಂದು

ಭಕ್ತಿಪೂರ್ವಕವಾಗಿ ನುಡಿದ ಪಾದ್ರಿ.

'ಇದನ್ನು ಕೇಳಿ ನನಗೆ ಬಹಳ ಸಂತೋಷವಾಗುತ್ತಿದೆ. ಇಷ್ಟುದಿನ ನಾನು ಕೊಟ್ಟ ಔಷಧಿಗಳು ಈಗ ಕೆಲಸಮಾಡಲು ತೊಡಗಿವೆಯೆಂದು ಕಾಣುತ್ತದೆ. ನಿಮಗೆ ಗುಣವಾಗಿಬಿಟ್ಟರೆ ನಾನೆಷ್ಟೋ ಸುಖಿಯಾಗುತ್ತೇನೆ; ನ್ಯೂಇಂಗ್ಲೆಂಡಿನ ಕೃತಜ್ಞತೆಗೆ ಪಾತ್ರನಾಗುತ್ತೇನೆ!' ಎಂದ ವೈದ್ಯ.

'ಇಷ್ಟು ಜಾಗರೂಕರಾಗಿ, ಎಚ್ಚರಿಕೆಯಿಂದ ನನ್ನನ್ನು ನೋಡಿ ಕೊಂಡಿದ್ದಕ್ಕೆ ನಿಮಗೆ ನನ್ನ ಹೃತ್ಪೂರ್ವಕ ವಂದನೆಗಳು. ಈ ನಿಮ್ಮ ಸತ್ಕಾರ್ಯದ ಸಾಲವನ್ನು ಪ್ರಾರ್ಥನೆಗಳಿಂದ ತೀರಿಸುತ್ತೇನೆ' ಎಂದ ಡಿಮ್ಸ್‌ಡೇಲ್ ನಗುತ್ತಾ.

'ಯೋಗ್ಯನಾದ ಮನುಷ್ಯನ ಪ್ರಾರ್ಥನೆ ಚಿನ್ನಕ್ಕೆ ಸಮಾನ.' ಎಂದು ಹೇಳುತ್ತಾ ರೋಜರ್ ಚಿಲಿಂಗ್‌ವರ್ತ್ ಅಲ್ಲಿಂದ ಹೊರಟ.

ಡಿಮ್ಸ್‌ಡೇಲ್ ಮನೆಯ ಸೇವಕನನ್ನು ಕರೆದು, ಊಟ ತರುವಂತೆ ಹೇಳಿದ. ತೃಪ್ತಿಯಾಗುವಂತೆ ಊಟಮಾಡಿದ. ಅನಂತರ ಅರ್ಧ ಬರೆದಿದ್ದ ವಚನದ ಪುಟಗಳನ್ನು ಬೆಂಕಿಗೆ ಹಾಕಿ, ಮತ್ತೆ ಹೊಸದಾಗಿ ಬರೆಯಲು ಪ್ರಾರಂಭಿಸಿದ. ವಿಚಾರಲಹರಿ ತಾನಾಗಿಯೇ ಹರಿಯುತ್ತಿತ್ತು. ತನಗೆ ಬಂದ ಸ್ಫೂರ್ತಿಯನ್ನು ಕಂಡು ಅವನೇ ಅಚ್ಚರಿಗೊಂಡ. ಆದರೆ ಈ ಮಹತ್ತರವಾದ ನುಡಿಗಳನ್ನು ದೇವರೇ ಪಾಪಿಯಾದ ತನ್ನ ಬಾಯಿಂದ ನುಡಿಸಬೇಕೆಂದುಕೊಂಡ. ರಾತ್ರಿ ಬೇಗನೆ ಕಳೆಯಿತು. ಬೆಳಕೂ ಹರಿಯಿತು. ತೆರೆಯನ್ನು ಓರೆಮಾಡಿ ಹೊರಗೆ ನೋಡಿದ. ಕೋಣೆಯೊಳಕ್ಕೆ ನುಗ್ಗಿದ ಸೂರ್ಯನ ಹೊಂಬೆಳಕು ಪಾದ್ರಿಯ ಹೊಳೆಯುತ್ತಿರುವ ಕಣ್ಣುಗಳ ಮೇಲೆ ಬಿದ್ದಿತ್ತು. ಕೈಯ್ಯಲ್ಲಿನ್ನೂ ಲೇಖಣಿ ಹಿಡಿದಿದ್ದ; ಲೆಖ್ಖವಿಲ್ಲದಷ್ಟು ಬರವಣಿಗೆ ಅವನ ಹಿಂದೆ ಇತ್ತು.

## ೨೧

ಚುನಾವಣೆಯ ದಿನ ಬೆಳಗ್ಗೆ ಹೆಸ್ಟರ್‌ಪ್ರೈನ್ ಮತ್ತು ಪರ್ಲ್ ಇಬ್ಬರೂ ಪೇಟೆಗೆ ಬಂದರು. ಈಗಾಗಲೇ ಅಲ್ಲಿ ಜನಸಂದಣಿ ತುಂಬಿಹೋಗಿತ್ತು. ಅವರಲ್ಲಿ ಕೆಲವರೆಲ್ಲಾ ಜಿಂಕೆಚರ್ಮ ಹೊದ್ದು ಬಂದಿದ್ದರು. ಅವರು ಈ ಪ್ರಾಂತದ ರಾಜಧಾನಿಯ ಸುತ್ತಮುತ್ತಲು ಇದ್ದ ಕಾಡು ಜನರು.

ಇಂದು ಎಲ್ಲರಿಗೂ ರಜೆ. ಈ ಏಳು ವರ್ಷಗಳಲ್ಲಿ ನಡೆದ ಮಿಕ್ಕೆಲ್ಲ ಸಮಾರಂಭಗಳಂತೆಯೇ, ಇದಕ್ಕೂ ಹೆಸ್ಟರ್ ತನ್ನ ಒರಟಾದ ಬೂದಿ

ಬಣ್ಣದ ಉಡುಪನ್ನೇ ಧರಿಸಿಕೊಂಡು ಬಂದಿದ್ದಳು. ಆದರ ಬಣ್ಣಕ್ಕಿಂತ ಮಿಗಿಲಾಗಿ ಆ ಬಟ್ಟೆಯಲ್ಲಿ ಏನೋ ಒಂದು ವೈಚಿತ್ರ್ಯವಿತ್ತು. ಅವಳು ಕಣ್ಣೆದುರಿಗಿದ್ದರೂ, ಸ್ಪಷ್ಟವಾಗಿ ತಿಳಿಯುತ್ತಲೇ ಇರಲಿಲ್ಲ. ಆದರೆ ಆ ಕೆಂಪು ಅಕ್ಷರ ತನ್ನದೇ ಆದ ಬೆಳಕಿನಲ್ಲಿ ಅವಳನ್ನು ಎಲ್ಲರಿಗೂ ಕಾಣಿಸುವಂತೆ ಮಾಡುತ್ತಿತ್ತು. ಚಿರಪರಿಚಿತವಾಗಿದ್ದ ಅವಳ ಮುಖದಲ್ಲಿ ಎಂದಿನಂತೆ ಮಂಜಿನ ಹಾಗೆ ಕೊರೆಯುತ್ತಿರುವ ಮೌನ ಎದ್ದು ಕಾಣುತ್ತಿತ್ತು. ಅದು ಮುಖವಾಡದಂತಿತ್ತು ಅಥವಾ ಶವದ ಮುಖದ ಮೇಲಿನ ಮೌನದಂತಿತ್ತು; ಏಕೆಂದರೆ ಎಲ್ಲರ ದಯೆಯನ್ನು ಕಳೆದುಕೊಂಡಿದ್ದ ಹೆಸ್ಟರ್ ಜಗತ್ತಿನ ಪಾಲಿಗೆ ಶವವೇ ಆಗಿದ್ದಳು. ಆದರೂ ಅವಳು ಮಿಕ್ಕವರೊಂದಿಗೆ ಬೆರೆಯುತ್ತಿರುವಂತೆ ಕಾಣುತಿತ್ತು.

ಈ ದಿನ ಅವಳ ಮುಖದಲ್ಲಿ ಏನೋ ಒಂದು ವಿಧವಾದ ಹೊಸ ಕಳೆ ಕಾಣುತ್ತಿತ್ತು. ಅದನ್ನು ಕಂಡುಹಿಡಿಯಲು ಬಹಳ ಜಾಗರೂಕತೆಯಿಂದ ಪರೀಕ್ಷಿಸಿ ನೋಡಬೇಕಾಗಿತ್ತು. ಏಳು ವರ್ಷಗಳ ಕಾಲ ಎಲ್ಲರ ನೋಟದ ಬೆಂಕಿಯಲ್ಲಿ ಬೆಂದು, ನೊಂದು ಪಶ್ಚಾತ್ತಾಪಪಡುತ್ತಾ ಅದನ್ನು ಪ್ರಾಯಶ್ಚಿತ್ತದಂತೆ ಅನುಭವಿಸುತ್ತಿದ್ದ ಆ ನೋಟವನ್ನು ಇಂದು ತಾನಾಗಿಯೇ ಧೈರ್ಯದಿಂದ ಎದುರಿಸಿದಳು ಆ ನೋಟ ತಾನು ಇಷ್ಟು ದಿನ ಅನುಭವಿಸಿದ್ದ ಯಾತನೆಯಿಂದ ಬಿಡುಗಡೆ ಹೊಂದಿ ಜಯಭೇರಿ ಹೊಡೆಯುವಂತೆ ಕಾಣುತ್ತಿತ್ತು. 'ಈ ಕೆಂಪು ಅಕ್ಷರವನ್ನೂ, ಅದನ್ನು ಧರಿಸಿರುವವಳನ್ನೂ ಕಡೆಯಬಾರಿ ನೋಡಿಬಿಡಿ. ಇನ್ನೊಂದು ಸ್ವಲ್ಪ ಕಾಲದಲ್ಲೇ ಅವಳು ನಿಮ್ಮ ಕೈಯಿಂದ ತಪ್ಪಿಸಿಕೊಳ್ಳುತ್ತಾಳೆ! ಅವಳ ಎದೆಯ ಮೇಲೆ ಉರಿಯುತ್ತಿರುವ ಈ ಕಳಂಕದ ಬೆಂಕಿಯನ್ನು ಇನ್ನು ಕೆಲವು ಗಂಟೆಗಳಲ್ಲೇ ಸಾಗರವು ನುಂಗಿ ತನ್ನ ಹೊಟ್ಟೆಯಲ್ಲಡಗಿಸಿಕೊಂಡು ಬಿಡುತ್ತದೆ!'—ಬದುಕಿರುವವರೆಗೂ ಹೀಗೆಯೇ ಇರುತ್ತಾಳೆಂದು ಭಾವಿಸಿದ್ದ ಅವರಿಗೆಲ್ಲಾ ಅವಳು ಕೂಗಿ ಹೇಳುತ್ತಿರುವಂತಿತ್ತು. ಅಥವಾ ಇಷ್ಟು ದಿನ ಅನುಭವಿಸುತ್ತಿದ್ದ ಯಾತನೆಯಿಂದ ಬಿಡುಗಡೆ ಹೊಂದಲು ಅವಳಿಗೇ ವ್ಯಥೆಯಾಯಿತೋ! ಮಾನವ ಸ್ವಭಾವವೇ ವಿಚಿತ್ರವಾದುದು!

ಪರ್ಲ್‌ಳನ್ನು ಮಾತ್ರ ತುಂಬ ಅಂದವಾಗಿ ಅಲಂಕರಿಸಿದ್ದಳು. ಈ ಪ್ರಕಾಶಮಾನವಾಗಿದ್ದ ಬೆಳಕಿನಮರಿ, ಜನ್ಮತಾಳಿದ್ದು ಮಂಕಾದ ಆ ಬೂದಿ ಬಣ್ಣದ ಆಕೃತಿಯಿಂದಲೇ, ಎಂದು ಸಂದೇಹವುಂಟಾಗುತ್ತಿತ್ತು. ಪರ್ಲ್‌ಳ ಉಡುಪು ಅವಳ ಸ್ವಭಾವಕ್ಕೆ ಒಪ್ಪುವಂತಿತ್ತು. ಚಿಟ್ಟೆಯ ರೆಕ್ಕೆಯ ಮೇಲಿನ

ನಾನಾ ವರ್ಣಗಳಂತೆ, ಹೂವಿನ ದಳದ ಬಣ್ಣದಂತೆ, ಪರ್ಲ್‌ಳ ಸ್ವಭಾವವೇ ಅವಳ ಉಡುಪಿನಲ್ಲೂ ಮೂಡಿಬಂದಿತ್ತು. ಮುಂದೆ ನಡೆಯುವುದನ್ನು ಸೂಚಿಸುವಂತೆ ಪರ್ಲ್ ವಿಚಿತ್ರವಾಗಿ ಆಡುತ್ತಿದ್ದಳು. ಹೆಸ್ಟರ್‌ಳ ತಲೆಯಲ್ಲಿದ್ದ ಭಾವೋದ್ರೇಕಗಳನ್ನು ಇವಳು ಪ್ರಕಟಿಸುವಂತಿತ್ತು.

ಇದರ ಪರಿಣಾಮವಾಗಿ, ತನ್ನ ತಾಯಿಯ ಪಕ್ಕದಲ್ಲಿ ನಡೆದುಬರುವ ಬದಲು, ಹಕ್ಕಿಯಂತೆ ಹಾರಿ, ಕುಪ್ಪಳಿಸಿಕೊಂಡು ಬರುತ್ತಿದ್ದಳು ಪರ್ಲ್. ಒಮ್ಮೊಮ್ಮೆ ಕಿರುಚುತ್ತಲೂ ಇದ್ದಳು. ಪೇಟೆಯನ್ನು ಸೇರಿದ ಕೂಡಲೇ ಆ ಗುಜುಗುಂಪಲನ್ನು ಕಂಡು ಅವಳು ಮತ್ತಷ್ಟು ವಿಚಿತ್ರವಾಗಿ ಆಡತೊಡಗಿದಳು.

'ಏನಮ್ಮ ಇದು ? ಕೆಲಸ ಬಿಟ್ಟು ಜನವೆಲ್ಲ ಏಕೆ ಬಂದಿದ್ದಾರೆ ಇಲ್ಲಿ? ಇಂದು ಪ್ರಪಂಚವೆಲ್ಲ ಆಟವಾಡುವ ದಿನವೆ ? ಅಲ್ಲಿ ನೋಡು ಕಮ್ಮಾರ ! ಮಸಿಮುಚ್ಚಿದ ಮುಖತೊಳೆದು, ಚೊಕ್ಕಟವಾದ ಬಟ್ಟೆ ಧರಿಸಿ ನಲಿದಾಡುತ್ತಿದ್ದಾನೆ ! ಅದೋ ಸೆರೆಮನೆಯ ಅಧಿಕಾರಿ ಮಾಸ್ಟರ್ ಬ್ರಾಕೆಟ್ ನನ್ನನ್ನೇ ನೋಡಿ ತಲೆಕುಣಿಸಿ ನಗುತ್ತಿದ್ದಾನೆ. ಅದೇಕಮ್ಮಾ ಹಾಗೆ ಮಾಡುತ್ತಿದ್ದಾನೆ?' ಎಂದಳು ಪರ್ಲ್.

'ನೀನು ಪುಟ್ಟಮಗುವಾಗಿದ್ದಾಗಿನಿಂದ ಅವರಿಗೆ ಗೊತ್ತು ಮಗು' ಎಂದಳು ಹೆಸ್ಟರ್.

'ಆ ವಕ್ರವಾದ ಮುದುಕ ನನ್ನ ನೋಡಿ ನಗಕೂಡದು. ಇನ್ನೂ ಬೇಕಾದರೆ ನಿನ್ನ ನೋಡಿ ನಗಲಿ. ನೀನು ಬೂದಿ ಬಣ್ಣದ ಉಡುಪಿನ ಮೇಲೆ ಕೆಂಪು ಅಕ್ಷರ ಧರಿಸಿದ್ದೀಯೆ. ಆದರೆ ನೋಡಮ್ಮ ಎಷ್ಟೊಂದು ಜನ ಹೊಸಬರು ! ಇಂಡಿಯನ್ನರೂ, ನಾವಿಕರೂ ಎಲ್ಲರೂ ಇದ್ದಾರೆ. ಅವರೆಲ್ಲ ಇಲ್ಲಿಗೆ ಏಕೆ ಬಂದಿದ್ದಾರೆ ?'

'ಅವರೆಲ್ಲ ಮೆರವಣಿಗೆಯನ್ನು ನೋಡಲು ಬಂದಿದ್ದಾರೆ. ಗವರ್ನರರೂ, ನ್ಯಾಯಾಧಿಪತಿಗಳೂ, ಪಾದ್ರಿಗಳೂ, ಮೊದಲಾಗಿ ಎಲ್ಲ ದೊಡ್ಡ ಮನುಷ್ಯರೂ ಮೆರವಣಿಗೆಯಲ್ಲಿ ಹೋಗುತ್ತಾರೆ. ಮುಂದುಗಡೆ ಸಿಪಾಯಿಗಳು ವಾದ್ಯ ಬಾರಿಸಿಕೊಂಡು ಹೋಗುತ್ತಾರೆ' ಎಂದಳು ಹೆಸ್ಟರ್.

'ಆ ಪಾದ್ರಿಯೂ ಅದರಲ್ಲಿರುತ್ತಾನೇನು? ಅಂದು ಕಾಡಿನಲ್ಲಿ ಝರಿಯ ಪಕ್ಕದಲ್ಲಿದ್ದಾಗ ನನ್ನ ನೋಡಿ ಎರಡು ಕೈಯನ್ನೂ ಚಾಚಿದನಲ್ಲ, ಹಾಗೇ ಮಾಡುತ್ತಾನೇನು ಇವತ್ತು ?' ಎಂದು ಪರ್ಲ್ ಕೇಳಿದಳು.

'ಅವರೂ ಅದರಲ್ಲಿರುತ್ತಾರೆ. ಆದರೆ ಇವತ್ತು ಅವರೂ ನಿನ್ನನ್ನು

ಮಾತನಾಡಿಸುವುದಿಲ್ಲ ; ನೀನೂ ಮಾತನಾಡಿಸಕೂಡದು ' ಎಂದು ಉತ್ತರ ಕೊಟ್ಟಳು ಹೆಸ್ಟರ್.

' ಎಷ್ಟು ವಿಚಿತ್ರವಾದ, ವ್ಯಸನಾಕ್ರಾಂತನಾದ ಮನುಷ್ಯ ಅವನು ! ರಾತ್ರಿಯ ಹೊತ್ತು ನಮ್ಮಿಬ್ಬರನ್ನೂ ಕರೆದು, ಕೈಹಿಡಿದುಕೊಂಡು ಆ ದಿನ ದಂತೆ ವಧ್ಯವೇದಿಕೆಯ ಮೇಲೆ ನಿಂತುಕೊಳ್ಳುತ್ತಾನೆ ! ಕಾಡಿನಲ್ಲಿ ಒಣಗಿದ ಮರದ ಮೇಲೆ ಕುಳಿತು ಯಾರಿಗೂ ಕಾಣದಂತೆ ಮತ್ತು ಕೇಳಿಸದಂತೆ ನಿನ್ನೊಂದಿಗೆ ಮಾತನಾಡುತ್ತಿದ್ದ. ಆ ಪುಟ್ಟ ತೊರೆ ತೊಳೆಯಲಾರದಂತೆ ನನ್ನ ಹಣೆಯನ್ನು ಚುಂಬಿಸುತ್ತಾನೆ ! ಆದರೆ ಇಲ್ಲಿ, ಈ ಬಿಸಿಲಿನಲ್ಲಿ, ಇಷ್ಟೊಂದು ಜನರ ನಡುವೆ ಅವನಿಗೂ ನಮ್ಮ ಪರಿಚಯವಿಲ್ಲ, ನಮಗೂ ಅವನ ಪರಿಚಯವಿಲ್ಲ ! ವಿಚಿತ್ರ ಮನುಷ್ಯ ! ಯಾವಾಗಲೂ ಎದೆಯ ಮೇಲೇ ಕೈಯಿಟ್ಟುಕೊಂಡಿರುತ್ತಾನೆ !' ತನ್ನಲ್ಲೇ ಮಾತನಾಡಿಕೊಳ್ಳು ವಂತೆ ಹೇಳಿದಳು ಪರ್ಲ್.

' ಸುಮ್ಮನಿರು ಪರ್ಲ್ ! ಇದೆಲ್ಲ ನಿನಗೆ ಅರ್ಥವಾಗುವುದಿಲ್ಲ. ಪಾದ್ರಿ ಯನ್ನು ಸದ್ಯಕ್ಕೆ ಮರೆತು, ಸುತ್ತಮುತ್ತ ಜನರೆಲ್ಲ ಎಷ್ಟು ಉಲ್ಲಾಸದಿಂದ್ದಾ ರೆಂಬುದನ್ನು ನೋಡು. ಸಂತೋಷದಿಂದಿ ನಲಿಯುವುದಕ್ಕಾಗಿ ಮಕ್ಕಳೆಲ್ಲ ಶಾಲೆ ಬಿಟ್ಟು ಬಂದಿದ್ದಾರೆ ; ದೊಡ್ಡವರೆಲ್ಲಾ ತಮ್ಮ ಹೊಲಗಳನ್ನೂ, ವೃತ್ತಿ ಗಳನ್ನೂ ಬಿಟ್ಟು ಬಂದಿದ್ದಾರೆ. ಇಂದಿನಿಂದ ಒಬ್ಬ ಹೊಸಮನುಷ್ಯ ಅವರ ನ್ನೆಲ್ಲ ಆಳುತ್ತಾನೆ. ಆದ್ದರಿಂದ ಎಲ್ಲರೂ ಬರುವ ವರ್ಷವೆಲ್ಲಾ ಸೌಖ್ಯ ಲಭಿ ಸುತ್ತದೆಂಬ ಆಸೆಯಿಂದ ಉಲ್ಲಾಸಗೊಂಡಿದ್ದಾರೆ' ಎಂದಳು ಹೆಸ್ಟರ್.

ಹೆಸ್ಟರ್ ಹೇಳಿದಂತೆ ಸಂತೋಷದ ನಿರೀಕ್ಷಣೆಯಿಂದ ಅವರೆಲ್ಲರ ಮುಖಗಳೂ ಗೆಲುವಾಗಿದ್ದವು. ಈ ಸಂತೋಷದ ದಿನಗಳಲ್ಲಿ— ಈಗಿದ್ದಂತೆ ಅದು ಎರಡು ಶತಮಾನಗಳ ಕಾಲ ನಡೆಯಿತು–ಆ ಸುಧಾರಕರು ಮಾನವ ನಿಂದ ಸಾಧ್ಯವಾದಷ್ಟೆಲ್ಲಾ ವಿನೋದದಿಂದ ತುಂಬಿ ನಲಿಯುತ್ತಿದ್ದರು. ಆ ಒಂದು ದಿನ ಇದ್ದ ಕಟ್ಟುನಿಟ್ಟುಗಳನೆಲ್ಲಾ ಬಿಟ್ಟು ಸಂತೋಷದಿಂದಿದ್ದರು.

ಆಗಿನ ಕಾಲದ ಜನರ ಮನೋಭಾವನೆ ಕೊಂಚ ಮಟ್ಟಿನ ಸೋಂಕಿ ನಿಂದ ಕೂಡಿತ್ತೆಂದರೆ ನಾವು ಉತ್ಪ್ರೇಕ್ಷೆ ಮಾಡಿದಂತಾಗುವುದೋ ಏನೋ. ಇಂದು ಬಾಸ್ಟನ್ನಿನ ಮಾರುಕಟ್ಟೆಯಲ್ಲಿ ಸೇರಿದ್ದ ಜನ ಸಮೂಹ ಪ್ಯೂರಿ ಟನ್ನರ ಮಂಕು ಸ್ವಭಾವವನ್ನು ಪಡೆದುಕೊಂಡಿರಲಿಲ್ಲ. ಅವರ ಪೂರ್ವಜ ರೆಲ್ಲ ಇಂಗ್ಲೆಂಡಿನ ಎಲಿಜಬೆತ್ ರಾಣಿಯ ಭವ್ಯ ರಾಜ್ಯಭಾರದ ಕಾಲದಲ್ಲಿ ಪ್ರಜೆಗಳಾಗಿದ್ದವರು. ಆಕೆಯ ರಾಜ್ಯಭಾರದಲ್ಲಿ ದೇಶವೆಲ್ಲ ಸುಖ ಸಂತೋ

ಷಗಳಿಂದ ನಲಿಯುತ್ತಿತ್ತು. ಈಗಿನ ನ್ಯೂ ಇಂಗ್ಲೆಂಡಿನ ಪ್ರಜೆಗಳೂ ತಮ್ಮ ಪೂರ್ವಜರನ್ನೇ ಅನುಸರಿಸಿದ್ದರೆ, ಪ್ರತಿಯೊಂದು ಸಮಾರಂಭಕ್ಕೂ ಔತಣ ಮಾಡಿ ದೊಡ್ಡದಾಗಿ ಮೆರವಣಿಗೆ ಮಾಡುತ್ತಿದ್ದರೋ ಏನೋ. ಇಂತಹ ಗಂಭೀರವಾದ ಸಮಾರಂಭದಲ್ಲೂ ಕಳೆ ಕಟ್ಟುವಂತೆ ಕೊಂಚ ಉಲ್ಲಾಸ ಪೂರಿತವಾದ ನೋಟಗಳನ್ನು ಸೇರಿಸಿದ್ದರೂ ಅದೇನೂ ತಪ್ಪಾಗುತ್ತಿರಲಿಲ್ಲ. ಆ ನಾಡಿನ ಆಡಳಿತದ ವರ್ಷ ಆರಂಭವಾಗುವ ಆ ದಿನ ಈ ಉಲ್ಲಾಸದ ನೆರಳೂ ಕೊಂಚ ಸುಳಿದಿತ್ತು. ಲಂಡನ್ನಿನಲ್ಲಿ ಕಿರೀಟ ಧಾರಣ ಮಹೋತ್ಸ ವದ ವೈಭವಕ್ಕೆ ಸಮನಾಗಿಲ್ಲದಿದ್ದರೂ ಕಡೆಯ ಪಕ್ಷ ಲಾರ್ಡ್ ಮೇಯರರ ಸಮಾರಂಭದಲ್ಲಿ ಪೂರ್ವಜರು ಆಚರಿಸುತ್ತಿದ್ದ ಗತಕಾಲದ ವೈಭವದ ಸಂಪ್ರ ದಾಯ ಈಗ ಮೂಡಿ ಬಂದಿತ್ತು. ಅಧಿಕಾರಿಗಳು, ಪಾದ್ರಿಗಳು ಮತ್ತು ಸೈನಿಕರು—ಪ್ರತಿಯೊಬ್ಬರೂ ಸಂಪ್ರದಾಯಕ್ಕನುಗುಣವಾಗಿ ವಸ್ತ್ರ ಧರಿಸಿ ಕೊಂಡು ಓಡಾಡುವುದು ತಮ್ಮ ಕರ್ತವ್ಯವೆಂದು ಭಾವಿಸಿದ್ದರು. ಹೊಸ ದಾಗಿ ರಚಿತವಾದ ಆ ಸರ್ಕಾರದ ಗಂಭೀರತೆಯನ್ನು ಹೆಚ್ಚಿಸಲು ಇವರೆಲ್ಲರೂ ನಾಡಿನ ಜನತೆಯೆದುರಿಗೆ ಮೆರವಣಿಗೆಯಲ್ಲಿ ನಡೆದು ಬರುತ್ತಿದ್ದರು.

ಕಠಿಣವಾದ ಮತದ ಕಟ್ಟಳೆಗಳಿಗೂ ತಮ್ಮ ಕೆಲಸ ಕಾರ್ಯಗಳಿಗೂ ಮಿಕ್ಕ ಸಂದರ್ಭಗಳಲ್ಲಿ ಹೆಚ್ಚು ವ್ಯತ್ಯಾಸಕಾಣದಿದ್ದ ಆ ಜನ ಅಂದು ಅವ ನ್ನೆಲ್ಲ ಕೊಂಚ ಮರೆಯಬಹುದಾಗಿತ್ತು. ಎಲಿಜಬೆತ್‌ರಾಣಿಯ ಅಥವಾ ಜೇಮ್ಸ್ ದೊರೆಯ ಕಾಲದಲ್ಲಿ ಇಂಗ್ಲೆಂಡಿನಲ್ಲಿದ್ದಂತೆ ಇಲ್ಲಿ ಉತ್ಸವದ ಅಂಗ ವಾಗಿ ನಾಟಕವಾಗಲೀ, ಲಾವಣಿ ಹಾಡುವವರಾಗಲೀ, ಕೋತಿಕುಣಿಸು ವವರಾಗಲೀ ಅಥವಾ ಮಾಂತ್ರಿಕರಾಗಲೀ ಇರಲಿಲ್ಲ. ಈ ವಿಧವಾದ ವಿನೋದಗಳೆಲ್ಲಾ ನೂರಾರು ವರ್ಷ ಹಳೆಯುವಾದರೂ ಇಂದಿಗೂ ಜನತೆಗೆ ಉಲ್ಲಾಸಕೊಡುವಂಥವು. ಇವೆಲ್ಲ ಕಾನೂನಿಗೆ ವಿರುದ್ಧವಾಗಿದ್ದಂತೆಯೇ, ಕಾನೂನು ಬದ್ಧರಾಗಿದ್ದ ಆ ಜನರಿಗೆ ಸರಿಬರುತ್ತಿರಲಿಲ್ಲ. ಆದರೂ ಆ ಜನ ತೆಯ ಮುಖ ಗಂಭೀರವಾಗಿದ್ದರೂ ಪ್ರಫುಲ್ಲವಾಗಿತ್ತು. ವಿನೋದಕ್ಕೂ ಇಲ್ಲೇನೂ ಕೊರತೆಯಿರಲಿಲ್ಲ. ಹಿಂದಿನ ಕಾಲದ ಇಂಗ್ಲೆಂಡಿನ ಹಳ್ಳಿಯ ಜಾತ್ರೆಗಳಂತೆಯೇ ಈ ಹೊಸ ನಾಡಿನಲ್ಲೂ ಅವನ್ನು ಬೆಳಸಿಕೊಂಡು ಬರು ವುದು ಒಳ್ಳೆಯದೆಂದು ಭಾವಿಸಿದ್ದರು. ಕಾರ್ನ್‌ವಾಲ್ ಮತ್ತು ಡಿವಾನ್ ಷೈರಿನಲ್ಲಿರುವಂತೆಯೇ ಈ ಮಾರುಕಟ್ಟೆಯ ಕೆಲವೆಡೆಗಳಲ್ಲಿ ವೈವಿಧ್ಯಪೂರಿತ ವಾದ ಕುಸ್ತಿ ಪಂದ್ಯಗಳಾಗುತ್ತಿದ್ದವು. ಮತ್ತೊಂದು ಮೂಲೆಯಲ್ಲಿ ದೊಣ್ಣೆ ವರಸೆಯಾಗುತ್ತಿತ್ತು. ಇವೆಲ್ಲಕ್ಕಿಂತ ಮಿಗಿಲಾಗಿ ಎಲ್ಲರನ್ನೂ ಆಕರ್ಷಿಸಿದ್ದು,

ವಧ್ಯವೇದಿಕೆಯ ಮೇಲೆ ಇಬ್ಬರು ಪ್ರವೀಣರು ಆಗತಾನೇ ಪ್ರದರ್ಶಿಸುತ್ತಿದ್ದ ಕತ್ತಿವರಸೆ. ಆದರೆ ಅಷ್ಟರಲ್ಲೆ ಜನರೆಲ್ಲ ನಿರಾಶರಾಗಬೇಕಾಯಿತು. ಏಕೆಂದರೆ ಕಾನೂನಿನ ದೃಷ್ಟಿಯಲ್ಲಿ ಪವಿತ್ರಸ್ಥಳವಾದ ಆ ವೇದಿಕೆಯ ಮೇಲೆ ಪ್ರದರ್ಶನ ನಡೆಯುತ್ತಿದ್ದರಿಂದ, ಊರಿನ ಹರಿಕಾರ ಬಂದು ತಡೆದುಬಿಟ್ಟ.

ಅಂದಿನವರು ಆಚರಿಸುತ್ತಿದ್ದ ರಜಾ ದಿನಗಳಿಗೂ ನಾವು ಆಚರಿಸುವುದಕ್ಕೂ ಅರ್ಥಾತ್ ಸಂಬಂಧವಿಲ್ಲವೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ನಾಡಿಗೆ ವಲಸೆಬಂದ ಹಿರಿಯರ ಸಂತತಿಯವರೆಲ್ಲ ಪ್ಯೂರಿಟನ್ನರಾದುದರಿಂದ ದೇಶದಾದ್ಯಂತ ಅವರ ಕಪ್ಪು ಹರಡಿಬಿಟ್ಟಿತು. ಇಷ್ಟು ವರ್ಷಗಳು ಕಳೆದಿದ್ದರೂ, ಇಂದಿಗೂ ಅದನ್ನು ಪೂರ್ಣವಾಗಿ ತೊಡೆದು ಹಾಕಲು ನಮಗೆ ಸಾಧ್ಯವಾಗಿಲ್ಲ. ಗತಕಾಲದ ಉಲ್ಲಾಸದ ಕಲೆಯನ್ನು ನಾವು ಮತ್ತೆ ಕಲಿಯಬೇಕಾಗಿದೆ.

ಮಾರುಕಟ್ಟೆಯಲ್ಲಿ ನೆರೆದಿದ್ದ ಜನಸಂದಣಿ ಮಬ್ಬಿನಿಂದ ಕೂಡಿದ್ದರೂ ಅಲ್ಲಲ್ಲೇ ಇದ್ದ ವರ್ಣ ವೈವಿಧ್ಯದಿಂದ ಕೊಂಚ ಜೀವಕಳೆ ಬಂದಿತ್ತು. ಒಂದು ಕಡೆ ರೆಡ್ ಇಂಡಿಯನ್ನರ ಗುಂಪೊಂದು ಸೇರಿತ್ತು. ವಿಚಿತ್ರವಾದ ಕಸೂತಿ ಕೆಲಸ ಮಾಡಿದ ಜಿಂಕೆ ಚರ್ಮಗಳನ್ನು ಹೊದ್ದು, ಬಣ್ಣ ಬಣ್ಣದ ಗರಿಗಳನ್ನು ಧರಿಸಿ, ಬಿಲ್ಲುಬಾಣಗಳನ್ನೂ, ಕಲ್ಲಿನ ಬರ್ಜಿಯನ್ನು ಹಿಡಿದು ನಿಂತಿದ್ದರು. ಅವರೆಲ್ಲರ ಮುಖಭಾವ ಪ್ಯೂರಿಟನ್ನರಿಗಿಂತ ಕೊಂಚ ಗಡುಸಾಗಿಯೇ ಇತ್ತು. ಇವರಿಗಿಂತ ಹೆಚ್ಚಾಗಿ ಗಮನ ಸೆಳೆಯುತ್ತಿದ್ದುದು ಸ್ಪ್ಯಾನಿಷ್ ಮೈನಿನಿಂದ ಬಂದಿದ್ದ ಹಡಗಿನ ನಾವಿಕರ ಗುಂಪು. ಅವರೆಲ್ಲ ಚುನಾವಣೆಯ ತಮಾಷೆಯನ್ನು ನೋಡಲು ಬಂದಿದ್ದರು. ಅವರಲ್ಲಿ ಪ್ರತಿಯೊಬ್ಬರೂ ಒರಟಾಗಿ ಕಾಣುತ್ತಿದ್ದರು. ಬಿಸಿಲಿನಿಂದ ಕಪ್ಪಾದ ಮುಖ, ನೀಳವಾದ ಗಡ್ಡ; ಅಗಲವಾದ ಷರಾಯಿಗಳು, ನಡುವಿಗೆ ಚಿನ್ನದಪಟ್ಟಿ ಧರಿಸಿದ್ದುದಲ್ಲದೆ ಅದಕ್ಕೆ ಸೇರಿದಂತೆ ಕತ್ತಿಯನ್ನೋ ಅಥವಾ ಉದ್ದನೆಯ ಚಾಕುವನ್ನೋ ಧರಿಸಿದ್ದರು. ಅವರ ಕಣ್ಣುಗಳು ಹೊಳೆಯುತ್ತಿದ್ದರೂ, ಅವುಗಳಲ್ಲಿ ಪ್ರಾಣಿ ಸಹಜವಾದ ಕ್ರೌರ್ಯವಿತ್ತು. ವಿವೇಚನೆಯಾಗಲೀ ಭಯವಾಗಲೀ ಇಲ್ಲದೆ ಕಾನೂನು ಉಲ್ಲಂಘಿಸುತ್ತಿದ್ದರು. ಹರಿಕಾರನ ಕಣ್ಣೆದುರಿಗೇ ಧೂಮಪಾನ ಮಾಡುವುದೂ ಅಲ್ಲದೆ ಜೇಬಿನಲ್ಲಿರುವ ಸೀಸೆಗಳಿಂದ ಮದ್ಯಪಾನವನ್ನೂ ಮಾಡುತ್ತಿದ್ದರು. ಆಗಿನ ಕಾನೂನು ತುಂಬ ಕಟ್ಟುನಿಟ್ಟಾಗಿತ್ತಾದರೂ ನಾವಿಕರಿಗೆ ಮಾತ್ರ, ಭೂಮಿಯ ಮೇಲೆಯೇ ಅಲ್ಲ, ಸಮುದ್ರದ ಮೇಲೆ ಸಹ ಇದಕ್ಕಿಂತ ಕೀಳಾಗಿ ನಡೆದುಕೊಳ್ಳುವಷ್ಟು ರಿಯಾಯಿತಿ

ಇತ್ತು. ಆಗಿನ ಕಾಲದ ಸಾಧಾರಣ ನಾವಿಕನೆಂದರೆ ನಮ್ಮ ಕಾಲದ ಕಡಲ್ಗಳ್ಳನಿಗೆ ಸಮ. ಅಂದು ಇಲ್ಲಿ ಸೇರಿದ್ದ ನಾವಿಕರ ಗುಂಪು ಮಾಡಿದಷ್ಟು ಹೀನಕೃತ್ಯಗಳನ್ನು ಇಂದಿನವರು ಮಾಡಿದ್ದರೆ, ನಮ್ಮ ನ್ಯಾಯಾಸ್ಥಾನದವರು ಅವರಿಗೆ ಮರಣದಂಡನೆ ವಿಧಿಸಿಬಿಡುತ್ತಿದ್ದರು.

ಆಗಿನ ಕಾಲದಲ್ಲಿ ನಾವಿಕರೊಂದಿಗೆ ಆಗಾಗ ಕಲೆತರೂ ಅದೇನು ಮಾನಕ್ಕೆ ಕಡಮೆಯೆನಿಸಿಕೊಳ್ಳುತ್ತಿರಲಿಲ್ಲ. ಕರಿಯ ಮೇಲಂಗಿಗಳನ್ನು ಧರಿಸಿ, ಎತ್ತರವಾದ ಟೋಪಿಗಳನ್ನು ಧರಿಸಿಕೊಳ್ಳುತ್ತಿದ್ದ ಪ್ಯೂರಿಟನ್ ಹಿರಿಯರು ಈ ನಾವಿಕರ ಒಡ್ಡಾಟವನ್ನು ನೋಡಿ ನಕ್ಕುಬಿಡುತ್ತಿದ್ದರು. ಅಂತೆಯೇ ಗಣ್ಯವ್ಯಕ್ತಿಯಾದ ರೋಜರ್ ಚಿಲಿಂಗ್‌ವರ್ತನು ಆ ನಾವಿಕರ ಸರದಾರನೊಂದಿಗೆ ಮಾತನಾಡುತ್ತ ಮಾರುಕಟ್ಟೆಯನ್ನು ಪ್ರವೇಶಿಸಿದ್ದು ಯಾರಿಗೂ ಯಾವ ವಿಧವಾದ ಆಶ್ಚರ್ಯವನ್ನೂ ಉಂಟುಮಾಡಲಿಲ್ಲ.

ಆ ನಾವಿಕರ ಸರದಾರ ಅಲ್ಲಿ ನೆರೆದಿದ್ದವರೆಲ್ಲರಿಗಿಂತ ಅಂದವಾಗಿ ಬಟ್ಟೆ ಧರಿಸಿದ್ದ. ಅವನ ಟೋಪಿಯ ಸುತ್ತಲು ಚಿನ್ನದ ಸರಪಳಿಯಿತ್ತು. ಅದರ ಮೇಲೆ ಒಂದು ಗರಿಯಿತ್ತು. ನಡುವಿನಲ್ಲಿ ಒಂದು ಕತ್ತಿಯನ್ನು ಧರಿಸಿದ್ದ. ಅವನ ಹಣೆಯ ಮೇಲೆ ಕತ್ತಿ ಏಟಿನ ಗುರುತಿತ್ತು. ಅವನು ಕೂದಲು ಬಾಚಿರುವುದನ್ನು ನೋಡಿದರೆ ಗುರುತನ್ನು ಮುಚ್ಚಿಕೊಳ್ಳುವುದಕ್ಕಿಂತ ಅದನ್ನು ಪ್ರದರ್ಶಿಸುವುದೇ ಅವನಿಗೆ ಇಷ್ಟವಾಗಿರುವುದೆನ್ನುವುದು ಕಂಡು ಬರುತ್ತಿತ್ತು. ಸಾಧಾರಣ ಪ್ರಜೆ ಯಾವನಾದರೂ ಈ ರೀತಿ ಮಾಡಿದ್ದರೆ ಅವನನ್ನು ನ್ಯಾಯಾಸ್ಥಾನದಲ್ಲಿ ನಿಲ್ಲಿಸುತ್ತಿದ್ದುದಲ್ಲದೆ ಸೆರೆಮನೆಯಲ್ಲಿ ಕೂಡುವುದೂ ಖಂಡಿತ. ಆದರೆ, ಮೀನಿಗೆ ಮಿರಗುತ್ತಿರುವ ರೆಕ್ಕೆಗಳಿರುವಂತೆ ಈ ನೌಕಾಧಿಕಾರಿಗಳಿಗೂ ಇವೆಲ್ಲ ಸ್ವಭಾವ ಸಹಜವಾಗಿತ್ತು.

ಬ್ರಿಸ್ಟಲ್ ಹಡಗಿನ ಆ ನೌಕಾಧಿಕಾರಿ ವೈದ್ಯನಿಂದ ಬೇರೆಯಾದ ಮೇಲೆ, ಮಾರುಕಟ್ಟೆಯಲ್ಲಿ ನಿಧಾನವಾಗಿ ಸುತ್ತಾಡುತ್ತಾ ಹೆಸ್ಟರ್ ಪ್ರೈನ್ ನಿಂತಿದ್ದ ಸ್ಥಳಕ್ಕೆ ಬಂದು ಅವಳನ್ನು ಗುರುತು ಹಿಡಿದುದಲ್ಲದೆ ಮಾತನಾಡಿಸುವುದಕ್ಕೂ ಹಿಂಜರಿಯಲಿಲ್ಲ. ಎಂದಿನಂತೆಯೇ ಅವಳ ಸುತ್ತ ಸ್ವಲ್ಪ ಜಾಗ ಖಾಲಿಯಿತ್ತು—ಒಂದು ಮಾಂತ್ರಿಕ ವೃತ್ತದ ಸುತ್ತ ನಿಂತಿರುವಂತೆ ಜನರೆಲ್ಲ ಒಬ್ಬರ ಪಕ್ಕ ಮತ್ತೊಬ್ಬರು ಕಿವಿಯುತ್ತಾ ದೂರದಲ್ಲೇ ನಿಂತಿದ್ದರು. ಈ ರೀತಿ ಒಬ್ಬಂಟಿಗಳಾಗಿರುವುದು ಆ ಕೆಂಪು ಅಕ್ಷರ ಧರಿಸಿದವಳ ದುರ್ವಿಧಿಯಾಗಿತ್ತು. ಅವಳು ಯಾರೊಂದಿಗೂ ಬೆರೆಯದಿದ್ದುದರ ಜೊತೆಗೆ ಅವಳ ಸಹಜೀವಿಗಳೂ ದೂರವಿರುತ್ತಿದ್ದುದೇ ಇದಕ್ಕೆ ಕಾರಣ. ಇದರಿಂದ ಒಂದು

ವಿಧದಲ್ಲಿ ಅನುಕೂಲವೇ ಆಯಿತು. ಹೆಸ್ಟರ್ ಪ್ರೈನ್ ಆ ನಾವಿಕರೊಂದಿಗೆ ಮಾತನಾಡುವುದು ಯಾರಿಗೂ ಕೇಳಿಸುವಂತಿರಲಿಲ್ಲ. ಹೆಸ್ಟರ್ ಪ್ರೈನ್‌ಳ ವಿಷಯದಲ್ಲಿ ಜನರ ಭಾವನೆಯೂ ಬಹಳ ಬದಲಾಗಿತ್ತು. ಊರಿನಲ್ಲೆಲ್ಲಾ ಮಹಾಸಂಭಾವಿತೆಯೆನಿಸಿಕೊಂಡ ಹೆಂಗಸು ಕೂಡ ಈ ರೀತಿ ಮಾತನಾಡಿ ಅಪಖ್ಯಾತಿಗೆ ಒಳಗಾಗದಿರಲು ಸಾಧ್ಯವಿರಲಿಲ್ಲ.

'ನಮ್ಮ ಹಡಗಿನಲ್ಲಿ ನೀವು ಹೇಳಿರುವುದಕ್ಕಿಂತ ಹೆಚ್ಚಾಗಿ ಇನ್ನೂ ಒಬ್ಬ ಪ್ರಯಾಣಿಕರಿಗೆ ನಾನು ಸ್ಥಳದ ಏರ್ಪಾಟು ಮಾಡಬೇಕಲ್ಲವೇ ತಾಯಿ! ಈ ಪ್ರವಾಸದಲ್ಲಿ ಯಾವ ರೋಗ ರುಜಿನಗಳ ಕಾಟವೂ ಇರುವುದಿಲ್ಲ! ನಮ್ಮ ಹಡಗಿನ ವೈದ್ಯರ ಜೊತೆಗೆ ಈ ಇನ್ನೊಬ್ಬ ವೈದ್ಯರೂ ಇರುವುದರಿಂದ ನಮಗೆ ಏನಾದರೂ ಭಯವಿದ್ದರೆ ಅದು ಔಷಧಿಯದೋ ಅಥವಾ ಮಾತ್ರೆಯದೋ ಮಾತ್ರ. ಏಕೆಂದರೆ ಸ್ಪ್ಯಾನಿಷ್ ಹಡಗಿನೊಂದಿಗೆ ನಾನು ವ್ಯಾಪಾರ ಮಾಡಿದಾಗ ತುಂಬ ಔಷಧಿಗಳನ್ನು ಕೊಂಡಿದ್ದೇನೆ' ಎಂದ ನೌಕಾಧಿಕಾರಿ.

'ಇನ್ನೂ ಒಬ್ಬರು ಪ್ರಯಾಣಿಕರೆ? ಹಾಗಂದರೆ?' ಎಂದಳು ಹೆಸ್ಟರ್ ಗಾಬರಿಯಿಂದ.

'ಏಕೆ, ನಿಮಗೆ ತಿಳಿಯದೇನು ? ರೋಜರ್ ಚಿಲಿಂಗ್‌ವರ್ತ್ ಎಂದು ಹೆಸರಿಟ್ಟುಕೊಂಡಿರುವನಲ್ಲಾ, ಆ ವೈದ್ಯ, ಅವನೂ ನಿಮ್ಮೊಂದಿಗೆ ಬರುತ್ತಾನಂತೆ? ಹೌದು, ನಿಮಗೆ ತಿಳಿದಿರಬೇಕಲ್ಲ; ಅವನೂ ನಿಮ್ಮ ಗುಂಪಿಗೆ ಸೇರಿದವನಂತೆ. ಈ ಪ್ಯೂರಿಟನ್ ಅಧಿಕಾರಿಗಳ ದಂಡನೆಗೆ ಹೆದರಿರುವನಲ್ಲ, ನೀವು ಹೇಳಿದಾತ—ಆತನಿಗೆ ಈ ವೈದ್ಯ ತುಂಬ ಸ್ನೇಹಿತನಂತೆ!' ಎಂದ ನೌಕಾಧಿಕಾರಿ.

'ಅವರಿಬ್ಬರಿಗೂ ಪರಸ್ಪರ ಪರಿಚಯವಿದೆಯೆನ್ನುವುದೇನೋ ನಿಜವೆ. ಬಹಳ ದಿನದಿಂದ ಇಬ್ಬರೂ ಒಂದೇ ಮನೆಯಲ್ಲಿಯೇ ಇದ್ದವರು' ಬಹಳ ಕಷ್ಟದಿಂದ ತಾಳ್ಮೆ ತಂದುಕೊಳ್ಳುತ್ತಾ ಹೇಳಿದಳು ಹೆಸ್ಟರ್.

ಅವರಿಬ್ಬರ ಸಂಭಾಷಣೆ ಅಲ್ಲಿಗೇ ಮುಕ್ತಾಯವಾಯಿತು. ಅದೇ ಕ್ಷಣದಲ್ಲಿ ಮಾರುಕಟ್ಟೆಯ ದೂರದ ಮೂಲೆಯಲ್ಲಿ ರೋಜರ್ ಚಿಲಿಂಗ್‌ವರ್ತ್ ಅವಳ ಕಡೆಯೇ ನೋಡುತ್ತಾ ಗಹನವಾಗಿ, ಗಾಬರಿಯನ್ನುಂಟು ಮಾಡುವಂತೆ ಅರ್ಥಗರ್ಭಿತವಾಗಿ ನಗುತ್ತಿರುವುದು ಕಾಣಿಸಿತು.

*

## ೨೨

ಹೆಸ್ಟರ್ ಪ್ರೈನ್ ತನ್ನ ಮನಸ್ಸನ್ನು ಸ್ಥಿಮಿತಕ್ಕೆ ತಂದುಕೊಂಡು ಈ ಹೊಸ ಸಮಸ್ಯೆಯನ್ನು ಎದುರಿಸುವುದು ಹೇಗೆಂದು ಯೋಚಿಸುವಷ್ಟರಲ್ಲಿಯೇ, ಪಕ್ಕದ ರಸ್ತೆಯಿಂದ ಸಮೀಪಿಸುತ್ತಿರುವ ಸೈನಿಕರ ವಾದ್ಯಸಂಗೀತ ಕೇಳಿಬರತೊಡಗಿತು. ನ್ಯಾಯಾಧಿಪತಿಗಳೂ, ಪ್ರಜೆಗಳೂ ಮೆರವಣಿಗೆಯಲ್ಲಿ ಮುಂದುವರಿಯುತ್ತಾ ಸಭಾಮಂದಿರದ ಕಡೆಗೆ ಬರುತ್ತಿರುವುದನ್ನು ಅದು ಸೂಚಿಸುತ್ತಿತ್ತು. ಸಂಪ್ರದಾಯಕ್ಕನುಗುಣವಾಗಿ ಚುನಾವಣೆಯ ದಿನ ರೆವರೆಂಡ್ ಡಿಮ್ಸ್‌ಡೇಲನು ಉಪದೇಶಮಾಡುವುದು ವಾಡಿಕೆಯಾಗಿತ್ತು.

ಸ್ವಲ್ಪ ಹೊತ್ತಿನಲ್ಲೇ ಮಾರುಕಟ್ಟೆಯ ಮೂಲೆಯನ್ನು ಸುತ್ತಿಕೊಂಡು ಮೆರವಣಿಗೆ ನಿಧಾನವಾಗಿ, ಗಂಭೀರವಾಗಿ ಮುಂದುವರಿಯುತ್ತಿರುವುದು ಕಾಣಿಸಿತು. ಮೊದಲು ವಾದ್ಯಸಮೂಹ ಬಂತು. ಆ ವಾದ್ಯ ಸಮೂಹದಲ್ಲಿ ನಾನಾ ವಿಧವಾದ ವಾದ್ಯಗಳಿದ್ದವು. ಒಂದೊಕ್ಕೊಂದು ಹೊಂದದಿದ್ದರೂ, ಆ ಡೋಲು, ತುತ್ತೂರಿ ಇವುಗಳಿಂದ ಈ ದೃಶ್ಯಕ್ಕೆ ಕಳೆಕಟ್ಟಿತ್ತು. ಇದನ್ನು ಕಂಡ ಪರ್ಲ್ ಮೊದಲು ಚಪ್ಪಾಳೆ ತಟ್ಟಿ ಕುಣಿದಾಡಿದಳು. ಆದರೆ ಮರುಕ್ಷಣದಲ್ಲೇ ಬೆಳಗಿನಿಂದ ತುಂಬಿ ತುಳುಕುತ್ತಿದ್ದ ಅವಳ ಉತ್ಸಾಹವೆಲ್ಲಾ ಮಾಯವಾಯಿತು. ಆ ನಾದದ ಅಲೆಗಳ ಮೇಲೆ ತೇಲಿಹೋಗುತ್ತಿರುವವಳಂತೆ ನಿಶ್ಶಬ್ದವಾಗಿ ದಿಟ್ಟಿಸುತ್ತಾ ನಿಂತಳು. ಮೆರವಣಿಗೆಯ ಗೌರವವನ್ನು ಹೆಚ್ಚಿಸಲು ಬಂದಿದ್ದ ಸೈನಿಕರ ಆಯುಧಗಳ ಹೊಳಪು ಅವಳನ್ನು ಮತ್ತೆ ಮೊದಲಿನ ಸ್ಥಿತಿಗೆ ಬರುವಂತೆ ಮಾಡಿದ್ದವು. ಅನಾದಿ ಕಾಲದಿಂದಲೂ ಈ ಸೈನ್ಯ ತನ್ನ ಘನತೆಯನ್ನು ಉಳಿಸಿಕೊಂಡು ಮುಂದುವರಿದಿದೆ ಆದರಲ್ಲಿ ಧನಾಭಿಲಾಷೆಯುಳ್ಳವರಾರೂ ಇರಲಿಲ್ಲ; ಎಲ್ಲರೂ ಗೌರವಸ್ಥರೇ. ಅವರೆಲ್ಲ ಕೇವಲ ಯುದ್ಧ ಕಲೆಯ ಆಸಕ್ತಿಯಿಂದ ಕೂಡಿದ್ದವರು. ಸೈನಿಕರ ನಡೆತೆಗೆ ಜನ ತೋರುತ್ತಿದ್ದ ಗೌರವಕ್ಕೆ ತಕ್ಕ ಭಾವ ಆ ದಳದ ಪ್ರತಿಯೊಬ್ಬನಲ್ಲೂ ಮೂಡಿತ್ತು. ಅವರಲ್ಲಿ ಅನೇಕರು ತಮ್ಮ ಘನತೆಗೆ ತಕ್ಕಂತೆ ಕದನಗಳಲ್ಲಿ ಯಶಸ್ಸು ಸಂಪಾದಿಸಿದ್ದರು. ಅವರು ಧರಿಸಿದ್ದ ಹೊಳೆಯುವ ಉಕ್ಕಿನ ಉಡುಪು, ಟೊಪ್ಪಿಗೆಯ ಮೇಲೆ ಧರಿಸಿದ್ದ ಲಾಸ್ಯವಾಡುವ ಗರಿ ಇವುಗಳು ಮನಸ್ಸಿನ ಮೇಲೆ ಉಂಟುಮಾಡುತ್ತಿದ್ದ ಪರಿಣಾಮಕ್ಕೆ ಇಂದಿನವು ಸಾಟಿಯಾಗಲಾರವು.

ಈ ಸೈನಿಕರ ಹಿಂದೆ ಬರುತಿದ್ದ ಗಣ್ಯವ್ಯಕ್ತಿಗಳ ಗುಂಪೂ ಅಷ್ಟೆ; ಗಮನವನ್ನು ಸೆಳೆಯುವಂಥದು. ಅವರ ನಡಗೆಯ ಗಾಂಭೀರ್ಯ ಸೈನಿಕರ ನಡಗೆಯನ್ನು ನಾಚಿಸುವಂತಿತ್ತು. ಆಗಿನ ಕಾಲದ ಜನ ಘನತೆಗೆ ಹೆಚ್ಚು ಗಮನವೀಯುತ್ತಿದ್ದರು. ರಾಜ, ರಾಜಪರಿವಾರಕ್ಕೆ ಸಂಬಂಧಿಸಿದ ದೊಡ್ಡ ಮನುಷ್ಯರು-ಇವರನ್ನೆಲ್ಲಾ ತ್ಯಜಿಸಿ ಈ ನಾಡಿನಲ್ಲಿ ನೆಲಸಿದ್ದ ಈ ಜನ, ವಯಸ್ಸು, ಅನುಭವ, ಜ್ಞಾನ ಮೊದಲಾದವುಗಳಿಗೆ ತುಂಬ ಮರ್ಯಾದೆ ತೋರುತ್ತಿದ್ದರು. ಆ ಪುರಾತನ ಕಾಲದಲ್ಲಿ ಆಡಳಿತ ವರ್ಗಕ್ಕೆ ಚುನಾಯಿತರಾಗಿದ್ದ ಬ್ರಾಡ್‌ಸ್ಟ್ರೀಟ್, ಡಡ್ಲಿ, ಬೆಲಿಂಗ್‌ಹ್ಯಾಮ್ ಮತ್ತು ಅವರ ಜೊತೆಯವರೆಲ್ಲಾ ಬುದ್ಧಿವಂತಿಕೆಗಿಂತ ಮಿಗಿಲಾಗಿ ತಮ್ಮ ಗಾಂಭೀರ್ಯಕ್ಕೆ ಹೆಸರಾಗಿದ್ದರು. ಅವರೆಲ್ಲ ಧೈರ್ಯವಂತರೂ ಸ್ವಾಭಿಮಾನಿಗಳೂ ಆಗಿದ್ದುದರಿಂದ ದೇಶಕ್ಕೆ ತೊಂದರೆಯುಂಟಾದಾಗ ಬಿರುಗಾಳಿಯನ್ನು ತಡೆಗಟ್ಟುವ ಪರ್ವತಶಿಖರಗಳಂತೆ ಅವುಗಳನ್ನು ಎದುರಿಸುತ್ತಿದ್ದರು. ದೃಢಕಾಯರಾಗಿ ಬೆಳೆದಿದ್ದ ಆ ನಾಡಿನ ಎಲ್ಲ ನ್ಯಾಯಾಧೀಶರುಗಳ ಮುಖದಲ್ಲಿಯೂ ಈ ನಡತೆ ಎದ್ದು ಕಾಣುತ್ತಿತ್ತು.

ನ್ಯಾಯಾಧೀಶರುಗಳ ಹಿಂದೆ ಅಂದು ಉಪದೇಶಮಾಡಬೇಕಾಗಿದ್ದ ಪಾದ್ರಿ ಬರುತ್ತಿದ್ದ. ಆಗಿನ ಕಾಲದಲ್ಲಿ ರಾಜಕೀಯಕ್ಕಿಂತ ಈ ಕಸುಬಿನಲ್ಲಿ ಹೆಚ್ಚು ಬುದ್ಧಿವಂತಿಕೆ ತೋರಬೇಕಾಗಿತ್ತು. :ರಾಜಕೀಯ ಕೂಡ ಚಾಣಕ್ಯನಾದ ಪಾದ್ರಿಯ ಹಿಡಿತದಲ್ಲಿತ್ತು.

ಡಿಮ್ಸ್‌ಡೇಲನನ್ನು ನೋಡಿದ ಜನರೆಲ್ಲ, ಅವನು ನ್ಯೂ ಇಂಗ್ಲೆಂಡಿಗೆ ಬಂದಂದಿನಿಂದ ಇಂದಿನಷ್ಟು ಉತ್ಸಾಹಶಾಲಿಯಾಗಿರುವುದನ್ನೂ, ಮೆರವಣಿಗೆಯ ಸಮಕ್ಕೆ ನಡೆದುಹೋಗುವುದನ್ನೂ ಕಂಡಿರಲಿಲ್ಲವೆಂದುಕೊಂಡರು. ಎಂದಿನಂತೆ ಅವನ ನಡೆಗೆ ಸಪ್ಪೆಯಾಗಿರಲಿಲ್ಲ; ಬೆನ್ನು ಬಾಗಿರಲಿಲ್ಲ; ಎದೆಯ ಮೇಲೆ ಕೈಯಿರಲಿಲ್ಲ. ಆದರೂ ಆ ಪಾದ್ರಿಯನ್ನು ಸರಿಯಾಗಿ ಗಮನಿಸಿದ ಪಕ್ಷದಲ್ಲಿ ಅವನ ಚೈತನ್ಯ ದೇಹಕ್ಕೆ ಸಂಬಂಧಿಸಿದುದಲ್ಲವೆಂಬುದು ತಿಳಿಯುತ್ತಿತ್ತು. ಅದು ಆಧ್ಯಾತ್ಮಿಕವಾಗಿ, ದೇವತೆಗಳು ದಯಪಾಲಿಸಿದ್ದಿರಬೇಕು. ದೀರ್ಘಕಾಲದ ಧ್ಯಾನದ ಚೈತನ್ಯವಿರಬೇಕು. ಅಥವಾ ಸೂಕ್ಷ್ಮವಾದ ಅವನ ಮನಸ್ಸು ಗಗನ ಮಂಡಲಕ್ಕೇರುತ್ತಿರುವ ವಾದ್ಯದಿಂದಾದ ಅಲೆಗಳ ಮೇಲೆ ತೇಲಿಹೋಗುತ್ತಿದ್ದಿರಬೇಕು. ಆದರೂ ಅರ್ಥಶೂನ್ಯವಾದ ಅವನ ಮುಖಲಕ್ಷಣವನ್ನು ನೋಡಿದರೆ ಅವನಿಗೆ ಈ ಸಂಗೀತ ನಿಜವಾಗಿಯೂ ಕೇಳಿಸುತ್ತಿರುವುದೇ ಎಂದು ಸಂದೇಹವಾಗುತ್ತಿತ್ತು. ಅವನ ದೇಹವೇನೋ

ಸರಸರನೆ ಮುಂದೆ ಮುಂದೆ ನಡೆದಿತ್ತು. ಆದರೆ ಅವನ ಮನಸ್ಸು? ಅದು ತನ್ನದೇ ಆದ ರಾಜ್ಯದಲ್ಲಿ ಚಟುವಟಿಕೆಯಿಂದ ವಿಹರಿಸುತ್ತಿತ್ತು. ಅವನಿಗೆ ತನ್ನ ಸುತ್ತಮುತ್ತಲೂ ನಡೆಯುತ್ತಿರುವ ಚಟುವಟಿಕೆ ಯಾವುದೂ ಕಾಣಿಸುತ್ತಿರಲಿಲ್ಲ, ಕೇಳಿಸುತ್ತಿರಲಿಲ್ಲ. ಮತ್ತೆ ಯಾವುದರ ಅರಿವೂ ಇರಲಿಲ್ಲ. ಆದರೂ ಅವನಲ್ಲಿದ್ದ ಉತ್ಸಾಹದ ಚೈತನ್ಯ ಅವನಿಗೆ ಅರಿವಾಗದಂತೆಯೇ ಆ ಕಂದಿ ಹೋದ ದೇಹಪಂಜರವನ್ನು ಹೊತ್ತು ಮುಂದೆ ಸಾಗಿತ್ತು. ಅಸಾಧಾರಣ ಬುದ್ಧಿಶಕ್ತಿಯುಳ್ಳ ಕೆಲವು ಮನುಷ್ಯರು ರೋಗಗ್ರಸ್ತರಾಗಿದ್ದರೂ ಸಹ ಎಂದಾದರೂ ಒಮ್ಮೆ ತಮ್ಮ ಅನೇಕ ದಿನಗಳ ಚೈತನ್ಯವನ್ನು ಒಂದುಗೂಡಿಸಿ ವಿಹರಿಸುವ ಶಕ್ತಿಯನ್ನು ಪಡೆದಿರುತ್ತಾರೆ. ಅದು ಮುಗಿದನಂತರ ಮತ್ತೆ ಜೀವಕಳೆಯಿಲ್ಲದವರಾಗುತ್ತಾರೆ.

ಅವನನ್ನೇ ಎವೆಯಿಕ್ಕದೆ ದಿಟ್ಟಿಸಿ ನೋಡುತ್ತಿದ್ದ ಹೆಸ್ಟರ್‌ಪ್ರೈನ್‌ಳಿಗೆ ಗಾಬರಿಯಾಯಿತು. ಅದು ಏಕೆಂಬ ಕಾರಣ ತಿಳಿಯದಿದ್ದರೂ ಆ ಪಾದ್ರಿ ತನ್ನ ಕೈಗೆಟಕದಂತೆ ಬೇರೆಯೇ ಒಂದು ಪ್ರಪಂಚದಲ್ಲಿ ಜೀವಿಸುತ್ತಿರುವಂತೆ ಅವಳಿಗನಿಸಿತು. ಅವನು ಒಮ್ಮೆಯಾದರೂ ತನ್ನನ್ನು ಗುರುತಿಸುತ್ತಾನೆಂದುಕೊಂಡಿದ್ದಳು. ಅಂದು ಕಾಡಿನಲ್ಲಿ ಝರಿಯ ಪಕ್ಕದಲ್ಲಿ ತಾವಿಬ್ಬರೂ ಒಬ್ಬರ ಕೈ ಮತ್ತೊಬ್ಬರು ಹಿಡಿದುಕೊಂಡು ಏಕಾಂತದಲ್ಲಿ ಮಾತನಾಡಿದುದೆಲ್ಲ ಅವಳಿಗೆ ನೆನಪಾಯಿತು. ಆಗ ಅವರಿಬ್ಬರೂ ಒಬ್ಬರನ್ನೊಬ್ಬರು ಎಷ್ಟು ಚೆನ್ನಾಗಿ ಅರಿತುಕೊಂಡಿದ್ದರು! ಆ ಮನುಷ್ಯ ಇವನೇ ಏನು? ಅವಳಿಗೆ ಗುರುತಿಸುವುದೇ ಕಷ್ಟವಾಯಿತು! ನಾದಸಮುದ್ರದಲ್ಲಿ ಮುಳುಗಿ ಮಿಕ್ಕ ಪಾದ್ರಿಗಳೊಂದಿಗೆ ಗಾಂಭೀರ್ಯದಿಂದ ನಡೆದುಹೋಗುತ್ತಿದ್ದ. ಈ ಪ್ರಪಂಚದಲ್ಲಿ ಅವನು ತನ್ನ ಕೈಗೆಟಕದಿದ್ದರೂ ಅವನ ಭಾವನೆಗಳಲ್ಲಿ ತನಗೆ ಸ್ಥಳವಿರಲಿಲ್ಲ! ಎಲ್ಲ ಬರಿಯ ಭ್ರಮೆಯಾಗಿದ್ದಿರಬಹುದೆಂಬ ಭಾವನೆಯಿಂದ ಅವಳ ಹೃದಯ ಕುಸಿಯಿತು. ತಾನು ಕಟ್ಟಿದ್ದ ಕನಸಿನಂತೆ ತನಗೂ ಆ ಪಾದ್ರಿಗೂ ಯಾವ ಬಾಂಧವ್ಯವೂ ಇರಲಿಲ್ಲ. ಆದರೆ ಹೆಸ್ಟರ್‌ಳ ಹೆಣ್ಣು ಹೃದಯ ಅವನನ್ನು ಮನ್ನಿಸುವುದಕ್ಕೆ ಸಿದ್ಧವಾಗಿರಲಿಲ್ಲ—ಅದೂ ತಮ್ಮ ಅದೃಷ್ಟ ಬದಲಾಗುವ ಕಾಲ ಸನ್ನಿಹಿತವಾಗುತ್ತಿರುವ ಸಮಯದಲ್ಲಿ ಅದು ಸಾಧ್ಯವೇ ಇರಲಿಲ್ಲ! ಅವನಿಗೇನೋ ತಮ್ಮಿಬ್ಬರ ಪ್ರಪಂಚದಿಂದ ದೂರವಾಗುವ ಶಕ್ತಿಯಿತ್ತು; ಆದರೆ ಅವಳು ಮಾತ್ರ ಕಗ್ಗತ್ತಲಲ್ಲಿ ತನ್ನ ಕೈಚಾಚಿ ಅವನನ್ನು ಕಾಣದೆ ತಡವರಿಸುತ್ತಿದ್ದಳು.

ಪರ್ಲ್‌ಳಿಗೂ ತನ್ನ ತಾಯಿಯ ಮನಸ್ಸಿನಲ್ಲುಂಟಾದ ಆವೇಗ ಅರ್ಥ

ವಾಗಿರಬೇಕು ; ಅಥವಾ ಪಾದ್ರಿಯ ಈ ವಿಚಿತ್ರವರ್ತನೆ ಅರಿವಾಗಿರಬೇಕು. ಮೆರವಣಿಗೆ ಹಾದುಹೋಗುವವರೆಗೂ ಅವಳ ಮನಸ್ಸು ಸ್ಥಿಮಿತವಿಲ್ಲದೆ ಹಾರಲು ಪ್ರಯತ್ನಪಡುತ್ತಿರುವ ಹಕ್ಕಿಯಂತೆ ಕುಪ್ಪಳಿಸುತ್ತಿತ್ತು. ಮೆರವಣಿಗೆ ಯೆಲ್ಲಾ ಹಾದುಹೋದ ಮೇಲೆ ಹೆಸ್ಟರ್‌ಳ ಮುಖವನ್ನು ನೋಡಿ,

' ಅಮ್ಮ, ಅಂದು ಝರಿಯ ಬಳಿ ನನ್ನನ್ನು ಮುದ್ದಿಸಿದನಲ್ಲ, ಆ ಪಾದ್ರಿ ಇವನೇ ?' ಎಂದು ಕೇಳಿದಳು.

' ಸುಮ್ಮನಿರು ಪರ್ಲ್ ! ಕಾಡಿನಲ್ಲಾದ ವಿಷಯಗಳನ್ನೆಲ್ಲಾ ನಾವು ಮಾರುಕಟ್ಟೆಯಲ್ಲಿ ಚರ್ಚಿಸಬಾರದು' ಎಂದು ಅವಳ ತಾಯಿ ಪಿಸುಗುಟ್ಟಿ ದಳು.

' ಅವನೇ ಹೌದೋ ಅಲ್ಲವೋ ಎಂದು ನನಗೆ ಅನುಮಾನವಾಯಿತು: ಏಕೆಂದರೆ ಅವನು ತುಂಬ ವಿಚಿತ್ರವಾಗಿ ಕಾಣುತ್ತಿದ್ದ. ಇಲ್ಲದಿದ್ದಲ್ಲಿ ಎಲ್ಲ ರೆದುರಿಗೆ ಅವನ ಬಳಿ ಓಡಿಹೋಗಿ ನನ್ನನ್ನು ಮುತ್ತಿಡುವಂತೆ ಕೇಳುತ್ತಿದ್ದೆ. ಆಗ ಆ ಪಾದ್ರಿ ಏನನ್ನುತ್ತಿದ್ದ ಅಮ್ಮ ? ತನ್ನ ಎದೆಯಮೇಲೆ ಕೈಯಿಟ್ಟು ಕೊಂಡ ನನ್ನನ್ನು ಗದರಿಸಿಕೊಳ್ಳುತ್ತಿದ್ದನೆಂದು ತೋರುತ್ತದೆ, ಅಲ್ಲವೇ ಅಮ್ಮಾ ?' ಎಂದಳು ಪರ್ಲ್.

' ಹಾಗೇನೂ ಇಲ್ಲ ಪರ್ಲ್. ಇದು ಮುತ್ತಿಡುವುದಕ್ಕೆ ಸಮಯವಲ್ಲ, ಮಾರುಕಟ್ಟೆಯ ಬಳಿ ಮುತ್ತಿಡಬಾರದು, ಎಂದು ಹೇಳುತ್ತಿದ್ದರು ಅಷ್ಟೆ. ಹೋಗಲಿ, ತುಂಟುಮಗುವೆ, ನೀನು ಹೋಗಿ ಅವರನ್ನು ಮಾತನಾಡಿಸ ಲಿಲ್ಲವಲ್ಲ !' ಎಂದಳು ಹೆಸ್ಟರ್.

ಡಿಮ್ಸ್‌ಡೇಲನ ವಿಷಯವಾಗಿ ಇನ್ನೊಂದು ಭಾವನೆಯನ್ನು ವ್ಯಕ್ತ ಪಡಿಸಿದವಳೆಂದರೆ ಮಿಸ್ಟ್ರೆಸ್ ಹಿಬ್ಬಿನ್ಸ್. ಆಕೆಯ ಸ್ವಭಾವ ಕೊಂಚ ಏರು ಪೇರೇನು–ಹುಚ್ಚೆಂದೇ ಹೇಳಬೇಕು. ಆ ಊರಿನ ಜನರಲ್ಲಿ ಯಾರಿಗೂ ಧೈರ್ಯವಿಲ್ಲದಂತಹ ಕೆಲಸವನ್ನು ಆಕೆ ಮಾಡಿದಳು. ಅದೇನೆಂದರೆ, ಕೆಂಪು ಅಕ್ಷರ ಧರಿಸಿದವಳೊಡನೆ ಬಹಿರಂಗವಾಗಿ ಮಾತನಾಡುವುದು. ಮಿಸ್ಟ್ರೆಸ್ ಹಿಬ್ಬಿನ್ಸ್ ಬೆಲೆಬಾಳುವ ಉಡುಪನ್ನೂ ವೇಷಭೂಷಣಗಳನ್ನೂ ಧರಿಸಿಕೊಂಡು ಮೆರವಣಿಗೆಯನ್ನು ವೀಕ್ಷಿಸುವ ಸಲುವಾಗಿ ಬಂದಿದ್ದಳು. ಆಕೆಯ ಕೆಟ್ಟ ಸ್ವಭಾವ ಹೆಸರುವಾಸಿಯಾಗಿದ್ದುದರಿಂದ (ಮುಂದೆ ಅದರಿಂದ ಅವಳು ಪ್ರಾಣವನ್ನೂ ಕಳೆದುಕೊಳ್ಳಬೇಕಾಯಿತು), ಜನರೆಲ್ಲ ಆಕೆಯ ಬಟ್ಟೆ ಸೋಕಿದರೆ ತಮಗೆಲ್ಲಿ ಕೆಡಕಾಗುವುದೋ ಎನ್ನುವ ಭೀತಿಯಿಂದ ಪಕ್ಕಕ್ಕೆ ಸರಿದು ದಾರಿ ಕೊಟ್ಟರು. ಇತೀಚೆಗೆ ಹೆಸ್ಟರ್‌ಪ್ರೈನ್‌ಳನ್ನು ಕರುಣೆ

ಯಿಂದ ಕಾಣುತ್ತಿದ್ದ ಜನಕ್ಕೆ, ಅವಳೊಡನೆ ಮಿಸ್ಟ್ರೆಸ್ ಹಿಬ್ಬಿನ್ಸ್‌ಳು ನಿಂತಿರುವುದನ್ನು ಕಂಡು ಅವರ ಭೀತಿ ದ್ವಿಗುಣವಾಗಿ, ಬಳಿಯಲ್ಲಿ ನಿಂತಿದ್ದವರಲ್ಲೆಲ್ಲಾ ಗುಜುಗುಜು ಪ್ರಾರಂಭವಾಯಿತು.

'ಯಾವ ಮಾನವನಿಗೆ ಅರ್ಥವಾದೀತು ಈ ಸೋಜಿಗ! ಆ ಪಾದ್ರಿ! ಜನರೆಲ್ಲಾ ಆತನನ್ನು ಭೂಮಿಯ ಮೇಲಿರುವ ದೇವತೆಯೆಂದು ಭಾವಿಸಿದ್ದಾರೆ; ನಿಜವಾಗಿಯೂ ಹಾಗೆಯೇ ಕಾಣುತ್ತಾನೆಂದು ನಾನೂ ಹೇಳಬೇಕಾಗಿದೆ! ಸ್ವಲ್ಪ ಸಮಯದಲ್ಲಿ ಅವನು ಗಾಳಿ ಸವಾರಿಗಾಗಿ ಕಾಡಿನೊಳಕ್ಕೆ ಹೋಗಿದ್ದನೆಂದು ಈಗ ತಾನೇ ಅವನನ್ನು ಮೆರವಣಿಗೆಯಲ್ಲಿ ನೋಡಿದವರಿಗೆ ಹೇಗೆ ತಿಳಿದೀತು! ಹಹಹ! ಹೆಸ್ಟರ್ ಪ್ರೈನ್, ಅದರ ಅರ್ಥ ಏನೆನ್ನುವುದು ನಮಗೆ ಗೊತ್ತು! ಆದರೂ ನಿಜ ಹೇಳುವುದಾದರೆ ಇವನೇ ಆ ಮನುಷ್ಯನೇ ಎನಿಸುತ್ತಿದೆ. ನಿನ್ನನ್ನು ಅಂದು ಕಾಡಿನಲ್ಲಿ ಸಂಧಿಸಿದ ವ್ಯಕ್ತಿ ಇವನೇ ಎಂದು ಖಂಡಿತವಾಗಿ ಹೇಳಬಲ್ಲೆಯಾ ಹೆಸ್ಟರ್?' ಎಂದಳು ಮುದುಕಿ.

ಈ ಮುದುಕಿಯ ಬುದ್ಧಿ ಸ್ಥಿಮಿತದಲ್ಲಿಲ್ಲವೆಂದು ತಿಳಿದಿದ್ದರೂ ಅವಳು ತಮ್ಮಿಬ್ಬರ ರಹಸ್ಯವನ್ನು ಬಯಲು ಮಾಡಿದ್ದನ್ನು ಕಂಡು ಹೆಸ್ಟರ್ ಪ್ರೈನ್‌ಳಿಗೆ ತುಂಬ ಗಾಬರಿಯಾಯಿತು. 'ನೀವೇನು ಮಾತನಾಡುತ್ತಿರುವಿರೋ ನನಗೆ ತಿಳಿಯದು. ರೆವರೆಂಡ್ ಡಿಮ್ಸ್‌ಡೇಲರಂಥ ವಿದ್ವಾಂಸರೂ ಮತ್ತು ಪೂಜ್ಯರೂ ಆದವರ ವಿಷಯದಲ್ಲಿ ಲಘುವಾಗಿ ಮಾತನಾಡಲು ನನಗೆ ಸಮ್ಮತವಿಲ್ಲ' ಎಂದಳು ಹೆಸ್ಟರ್.

'ಛೆ ಛೆ ಹುಚ್ಚಿ! ಇಷ್ಟೊಂದು ಬಾರಿ ಕಾಡಿಗೆ ಹೋಗಿ ಬಂದು ಅದರ ಪರಿಚಯವಿರುವ ನನಗೆ, ಅಲ್ಲಿಗೆ ಬಂದಿದ್ದವರಾರೆಂದು ಹೇಳುವಷ್ಟೂ ಪರಿಜ್ಞಾನವಿಲ್ಲವೆ? ಆ ಚಿಹ್ನೆಯಿಂದ ನಿನ್ನನ್ನು ನಾನು ಅರಿತುಕೊಂಡಿದ್ದೇನೆ ಹೆಸ್ಟರ್. ಪ್ರತಿಯೊಬ್ಬರಿಗೂ ಕಾಣಿಸುವಂತೆ ಅದು ಬಿಸಿಲಲ್ಲಿ ಹೊಳೆಯುವುದಲ್ಲದೆ, ಕತ್ತಲಲ್ಲ ಕೆಂಪುಜ್ವಾಲೆಯಂತೆ ಉರಿಯುತ್ತದೆ ನೀನು ಬಹಿರಂಗವಾಗಿ ಅದನ್ನು ಧರಿಸುವುದರಿಂದ ಅದರ ವಿಚಾರವಾಗಿ ಯಾವ ಪ್ರಶ್ನೆಯೂ ಏಳುವುದಿಲ್ಲ. ಆದರೆ ಈ ಪಾದ್ರಿ! ನಿನ್ನ ಕಿವಿಯಲ್ಲಿ ಹೇಳುತ್ತೇನೆ ಕೇಳು! ತನ್ನ ಸೇವಕರಲ್ಲೊಬ್ಬನು ತಾನು ಒತ್ತಿರುವ ಚಿಹ್ನೆಯನ್ನು ಬಹಿರಂಗವಾಗಿ ಪ್ರದರ್ಶಿಸಲು ನಾಚಿಕೊಳ್ಳುವುದನ್ನು ಕರಿಯ ಮನುಷ್ಯ ಕಂಡಲ್ಲಿ, ಅದನ್ನು ಎಲ್ಲರೆದುರಿಗೆ ಬಹಿರಂಗ ಪಡಿಸುವ ತನ್ನದೇ ಆದ ವಿಧಾನವೊಂದನ್ನಿಟ್ಟುಕೊಂಡಿದ್ದಾನೆ! ಯಾವಾಗಲೂ ತನ್ನ ಎದೆಯ ಮೇಲೆಯೇ ಕೈ ಅದುಮಿಟ್ಟು

ಕೊಂಡು ಅವನು ಏನನ್ನು ಬಚ್ಚಿಡಲು ಪ್ರಯತ್ನ ಪಡುತ್ತಿದ್ದಾನೆಂಬುದನ್ನು ಬಲ್ಲೆಯ ಹೆಸ್ಟರ್ ಪ್ರೈನ್ !' ಎಂದಳು ಮಿಸ್ಟ್ರೆಸ್ ಹಿಬ್ಬನ್ಸ್.

'ಅದೇನು ಮಿಸ್ಟ್ರೆಸ್ ಹಿಬ್ಬನ್ಸ್? ನೀವು ನೋಡಿದ್ದೀರಾ?' ಪರ್ಲ್ ಉತ್ಸುಕಳಾಗಿ ಕೇಳಿದಳು.

'ಚಿಂತೆಯಿಲ್ಲ ಚಿನ್ನ! ಎಂದಾದರೂ ಒಂದು ದಿನ ನೀನೇ ನೋಡುವಿಯಂತೆ. ನೀನು ವಾಯುರಾಜನ ವಂಶಕ್ಕೆ ಸೇರಿದವಳೆಂನು ಅನ್ನುತ್ತಾರೆ. ಎಂದಾದರೂ ಒಂದು ರಾತ್ರಿ ನನ್ನೊಂದಿಗೆ ಸವಾರಿ ಬರುತ್ತೀಯಾ? ನಿನ್ನ ತಂದೆಯನ್ನು ನೋಡುವಿಯಂತೆ. ಆ ಪಾದ್ರಿ ಹಾಗೇಕೆ ತನ್ನ ಎದೆಯ ಮೇಲೆ ಕೈ ಅದುಮಿಟ್ಟುಕೊಳ್ಳುತ್ತಾನೆಂಬುದು ನಿನಗೇ ತಿಳಿಯುತ್ತದೆ' ಎಂದು ಮಿಸ್ಟ್ರೆಸ್ ಹಿಬ್ಬನ್ಸ್ ಉತ್ತರ ಕೊಟ್ಟಳು.

ಮಾರುಕಟ್ಟೆಗೆಲ್ಲಾ ಕೇಳಿಸುವಂತೆ ಕೀರಲು ದನಿಯಲ್ಲಿ ನಗುತ್ತಾ ಆ ಮುದುಕಿ ಅಲ್ಲಿಂದ ಹೊರಟು ಹೋದಳು.

ಈ ವೇಳೆಗೆ ಸಭಾಮಂದಿರದಲ್ಲಿ ಪ್ರಾರ್ಥನೆ ಮುಗಿದಿತ್ತು. ರೆವರೆಂಡ್ ಡಿಮ್ಸ್‌ಡೇಲ್ ತನ್ನ ಭಾಷಣವನ್ನು ಪ್ರಾರಂಭಿಸುತ್ತಿರುವುದು ಕೇಳಿಬರುತ್ತಿತ್ತು. ತಡೆಯಲಾರದ ಯಾವುದೋ ಒಂದು ಭಾವನೆ ಹೆಸ್ಟರ್‌ಳನ್ನು ನಿಂತಲ್ಲಿಯೇ ಕಟ್ಟಿಹಾಕಿತ್ತು. ಮುಂದೆಯೆಲ್ಲಾ ಜನಸಂದಣಿಯಿದ್ದುದರಿಂದ ವಧ್ಯವೇದಿಕೆಯ ಪಕ್ಕದಲ್ಲಿ ನಿಂತುಕೊಂಡಳು. ಅವಳು ನಿಂತಿದ್ದ ಸ್ಥಳಕ್ಕೆ ಉಪದೇಶದ ಪದಗಳು ಸ್ಪಷ್ಟವಾಗಿ ಕೇಳಿಸದಿದ್ದರೂ, ಪಾದ್ರಿಯ ನಿರರ್ಗಳವಾದ ವಾದಸರಣಿಯ ಲಹರಿಯ ವಿಚಿತ್ರದನಿ ಕೇಳಿಸುತ್ತಿತ್ತು.

ಅವನ ದನಿಯೇ ಆ ಪಾದ್ರಿಗೆ ಒಂದು ದೊಡ್ಡ ಆಸ್ತಿ. ಉಪದೇಶದ ಭಾಷೆ ಅರ್ಥವಾಗದಿದ್ದರೂ, ಆ ದನಿಯ ನಾದ ಮತ್ತು ಏರಿಳಿತಗಳಿಂದಲೇ ಕೇಳುವವರಿಗೆ ತಲೆದೂಗುವಂತಾಗುತ್ತಿತ್ತು. ಸಂಗೀತದಂತೆಯೇ ಸಂತೋಷ ದುಃಖ, ಮತ್ತೆಲ್ಲ ಭಾವನೆಗಳನ್ನೂ ಮಾನವ ಹೃದಯಕ್ಕೆ ಅರಿವಾಗುವಂತೆ ಆ ದನಿ ಉಸಿರುತ್ತಿತ್ತು. ಚರ್ಚಿನ ಗೋಡೆಗಳಿಂದ ಹೊರಬರುತ್ತಿದ್ದ ಆ ದನಿ ಸ್ಪಷ್ಟವಾಗಿರದಿದ್ದರೂ, ಹೆಸ್ಟರ್ ಪ್ರೈನ್ ಕಿವಿಗೊಟ್ಟು, ಬಹಳ ಜಾಗರೂಕತೆಯಿಂದ ಕೇಳುವಷ್ಟು ಆ ದನಿ ಅವಳ ಮೇಲೆ ಪರಿಣಾಮವನ್ನುಂಟುಮಾಡಿತ್ತು. ಅವಳ ಮನಸ್ಸೆಲ್ಲ ಆ ಸುಮಧುರ ನಾದದಲ್ಲಿ ಲೀನವಾಗಿ ಹೋಗಿತ್ತು. ಆ ದನಿಯಲ್ಲಿ ಆಗಾಗ ವೇದನೆ ಕಾಣುತ್ತಿತ್ತು. ಮಾನವ ವರ್ಗದ ಕ್ಷಮೆಯನ್ನು ಬೇಡುತ್ತಾ ತನ್ನ ರಹಸ್ಯವನ್ನೋ, ಪಾಪವನ್ನೋ ದುಃಖದಿಂದ ತೋಡಿಕೊಳ್ಳುತ್ತಿರುವಂತೆ ಕೇಳಿಸುತ್ತಿತ್ತು.

ಅಷ್ಟು ಕಾಲವೂ ಹೆಸ್ಟರ್ ಅಲುಗಾಡದೆ, ಪ್ರತಿಮೆಯಂತೆ ವಧ್ಯ ವೇದಿಕೆಯ ಬಳಿಯಲ್ಲಿ ನಿಂತಿದ್ದಳು. ಪಾದ್ರಿಯ ದನಿ ಅವಳನ್ನು ಅಲ್ಲಿ ಕಟ್ಟಿ ಹಾಕದಿದ್ದರೂ, ಅವಳು ಮೊದಲ ದಿನ ತನ್ನ ಕಳಂಕದ ದುಃಖವನ್ನು ಅನುಭವಿಸಿದ ಆ ಸ್ಥಳ ಸೂಜಿಗಲ್ಲಿಂತಹ ಆಕರ್ಷಣ ಶಕ್ತಿಯನ್ನು ಪಡೆದಿತ್ತು. ತನ್ನ ಜೀವಮಾನವೆಲ್ಲ ಈ ಸ್ಥಳಕ್ಕೆ ಸಂಬಂಧಿಸಿದುದೇ ಎಂಬೊಂದು ಭಾವನೆ, ಅಸ್ಪಷ್ಟವಾಗಿದ್ದರೂ ಅವಳ ಮನಸ್ಸಿನಲ್ಲೇ ಸುಳಿಯುತ್ತಿತ್ತು.

ಪರ್ಲ್ ತನ್ನ ತಾಯಿಯ ಬಳಿಯನ್ನು ಬಿಟ್ಟು ತನಗೆ ಇಷ್ಟ ಬಂದಂತೆ ಮಾರುಕಟ್ಟೆಯಲ್ಲಿ ಆಟವಾಡಿಕೊಳ್ಳುತ್ತಿದ್ದಳು. ತನ್ನ ಉತ್ಸಾಹದ ಕಿರಣದಿಂದ ಆ ಮಂಕಾದ ಜನಸಂದಣಿಗೆ ಸಂತಸದ ಬೆಳಕನ್ನೀಯುತ್ತಿದ್ದಳು. ಮನಬಂದಂತೆ ಕುಣಿಯುತ್ತಾ ಓಡಾಡುತ್ತಿದ್ದಳು. ಈ ಕುಣಿತ ಅವಳ ಆತ್ಮದ ಚಂಚಲತೆಯನ್ನು ಸೂಚಿಸುತ್ತಿತ್ತು. ಅವಳ ತಾಯಿಯ ಚಿತ್ತ ಸ್ವಾಸ್ಥ್ಯ ಚಂಚಲವಾಗಿದ್ದಂತೆ ಇಂದು ಅದು ಇಮ್ಮಡಿಯಾಗಿತ್ತು. ಪರ್ಲ್ ತನ್ನ ಮನಸ್ಸನ್ನು ಆಕರ್ಷಿಸಿದ್ದ ವಸ್ತುವನ್ನಾಗಲೀ ಅಥವಾ ಮನುಷ್ಯನನ್ನಾಗಲೀ, ತನ್ನದೇ ಎಂಬ ಭಾವನೆಯಿಂದ ಸ್ವೇಚ್ಛೆಯಾಗಿ ಹೋಗಿ ಹಿಡಿದುಕೊಂಡುಬಿಡುತ್ತಿದ್ದಳು. ರಾರಾಜಿಸುತ್ತಿರುವ ಸೌಂದರ್ಯದಿಂದ ಕೂಡಿದ ಈ ಮಗು ಹೀಗೆ ಕುಣಿಯುತ್ತಾ ಓಡಾಡುತ್ತಿರಲು, ಅದನ್ನು ನೋಡಿದ ಪ್ಯೂರಿಟನ್ನರು ನಕ್ಕರೂ ಸಹ, ಅದು ಪಿಶಾಚಿಯ ಮಗುವೆಂದು ಭಾವಿಸುವುದನ್ನು ಮಾತ್ರ ಬಿಡಲಿಲ್ಲ. ಓಡಿಹೋಗಿ ಅಲ್ಲಿ ನಿಂತಿರುವ ರೆಡ್‌ಇಂಡಿಯನ್ನರನ್ನು ನೋಡುತ್ತಾಳೆ; ಅಲ್ಲಿಂದ ಹಾರಿಕೊಂಡು ನಾವಿಕರ ಗುಂಪಿರುವ ಕಡೆ ಬರುತ್ತಾಳೆ. ಸಮುದ್ರದ ನೊರೆ ಚಿಕ್ಕ ಹೆಣ್ಣುಮಗುವಿನ ರೂಪ ತಾಳಿ ಬಂದಂತೆ ಇದ್ದ ಆ ಮಗುವನ್ನು, ಆ ನಾವಿಕರೆಲ್ಲಾ ಅಚ್ಚರಿಯಿಂದ ಎವೆಯಿಕ್ಕದೆ ನೋಡುತ್ತಿದ್ದರು.

ನಾವಿಕರ ಸರದಾರ ಆ ಮಗುವನ್ನು ಮುತ್ತಿಡುವ ಆಸೆಯಿಂದ ಅವಳನ್ನು ಹಿಡಿದುಕೊಳ್ಳಲು ಪ್ರಯತ್ನಿಸಿದ. ಅವಳನ್ನು ಹಿಡಿಯುವುದು ಹಾರುತ್ತಿರುವ ಹಕ್ಕಿಯನ್ನು ಹಿಡಿಯುವುದಕ್ಕಿಂತ ಕಷ್ಟವಾಗಿ ತೋರಿದುದರಿಂದ ತನ್ನ ಟೊಪ್ಪಿಗೆಗೆ ಸುತ್ತಿದ್ದ ಚಿನ್ನದ ಸರಪಳಿಯನ್ನು ಬಿಚ್ಚಿ ಮಗುವಿನೆಡೆಗೆ ಎಸೆದ; ಪರ್ಲ್ ತುಂಬ ಜಾಣತನದಿಂದ ಅದನ್ನು ತನ್ನ ಕುತ್ತಿಗೆಗೂ ನಡುವಿಗೂ ಸುತ್ತಿಕೊಂಡಳು. ಅವಳು ಹೀಗೆ ಅದನ್ನು ಧರಿಸಿರುವುದನ್ನು ನೋಡಿದರೆ ಆ ಸರಪಳಿ ಅವಳಿಗಾಗಿಯೇ ತಯಾರಿಸಲ್ಪಟಿತ್ತೇನೋ ಎಂಬ ಭಾವನೆಯುಂಟಾಗುತ್ತಿತ್ತು.

'ಅಲ್ಲಿ ಕೆಂಪು ಅಕ್ಷರವನ್ನು ಧರಿಸಿ ನಿಂತಿರುವಾಕೆ ನಿಮ್ಮ ತಾಯಿಯಲ್ಲವೆ. ನಾನು ಹೇಳುವ ಸಮಾಚಾರವನ್ನು ಆಕೆಗೆ ತಲುಪಿಸುವೆಯಾ?' ಎಂದ ನಾವಿಕರ ಸರದಾರ.

'ಸಮಾಚಾರ ನನಗೆ ಪ್ರಿಯವಾಗಿದ್ದಲ್ಲಿ ತಲುಪಿಸುತ್ತೇನೆ' ಎಂದಳು ಪರ್ಲ್.

'ಹಾಗಾದರೆ ಸರಿ. ಆ ಕಪ್ಪು ಮುಖದ ಗೂನು ಬೆನ್ನಿನ ಮುದಿ ವೈದ್ಯನ ಹತ್ತಿರ ನಾನು ಪುನಃ ಮಾತನಾಡಿದೆ. ಆಕೆ ಹೇಳಿದ ಮನುಷ್ಯನನ್ನು ಆತ ಹಡಗಿಗೆ ಕರೆತರಲು ಒಪ್ಪಿಕೊಂಡಿದ್ದಾನೆ. ಆದ್ದರಿಂದ ನಿಮ್ಮ ತಾಯಿಗೆ, ನೀವಿಬ್ಬರೂ ಹಡಗಿಗೆ ಬರುವುದೊಂದನ್ನುಳಿದು ಬೇರೆ ಯೋಚನೆ ಬೇಡ. ಇಷ್ಟನ್ನು ಆಕೆಗೆ ಹೇಳುತ್ತೀಯಾ ತುಂಟಮಗು?' ಎಂದ ನಾವಿಕ.

'ನನ್ನ ತಂದೆ ವಾಯುರಾಜನೆಂದು ಮಿಸ್ಟ್ರೆಸ್ ಹಿಬ್ಬನ್ಸ್ ಹೇಳಿದ್ದಾಳೆ. ನೀನು ನನ್ನನ್ನು ಹೀಗೆಲ್ಲಾ ಕರೆದರೆ ನಾನು ಆತನಿಗೆ ಹೇಳುತ್ತೇನೆ. ಆಗ ಆತ ನಿನ್ನ ಹಡಗನ್ನು ಬಿರುಗಾಳಿಯಿಂದ ಓಡಿಸಿಬಿಡುತ್ತಾನೆ,' ಎಂದು ತುಂಟ ನಗುವನ್ನು ಸೂಚಿಸುತ್ತಾ ಪರ್ಲ್ ಹೇಳಿದಳು.

ಬಳಸಿಕೊಂಡು ಓಡುತ್ತಾ ಪರ್ಲ್ ತನ್ನ ತಾಯಿಯನ್ನು ಸೇರಿ ನಾವಿಕನು ಹೇಳಿದ ಸುದ್ದಿಯನ್ನು ಮುಟ್ಟಿಸಿದಳು. ತಮ್ಮ ಅದೃಷ್ಟದ ಬಾಗಿಲು ತೆರೆಯುತ್ತಿರುವುದೆಂದು ಭಾವಿಸಿದ್ದ ಈ ಸಮಯದಲ್ಲಿ, ಈ ಸುದ್ದಿಯನ್ನು ಕೇಳಿ ಹೆಸ್ಟರ್‌ಳ ಹೃದಯ ಕುಸಿಯಿತು.

ಈ ಸುದ್ದಿಯನ್ನು ಕೇಳಿ ಮೊದಲೇ ಚಿತ್ತಸ್ವಾಸ್ಥ್ಯವನ್ನು ಕಳೆದುಕೊಂಡಿದ್ದ ಹೆಸ್ಟರ್, ಇನ್ನೂ ಒಂದು ಕಷ್ಟಕ್ಕೆ ಗುರಿಯಾಗಬೇಕಾಯಿತು. ಸುತ್ತಮುತ್ತಲ ಊರುಗಳಿಂದ ಅನೇಕ ಜನ ಬಂದಿದ್ದರು. ಈ ಕೆಂಪು ಅಕ್ಷರದ ವಿಷಯವಾಗಿ ಬಣ್ಣಕಟ್ಟಿದ ನೂರಾರು ಕಥೆಗಳನ್ನು ಕೇಳಿದ್ದರೂ, ಅವರು ಎಂದೂ ಅದನ್ನು ಕಣ್ಣಾರೆ ಕಂಡಿರಲಿಲ್ಲ. ಮಿಕ್ಕೆಲ್ಲ ನೋಟಗಳನ್ನೂ ನೋಡಿ ಮುಗಿಸಿದ ಜನ ಹೆಸ್ಟರ್‌ಳ ಸುತ್ತ ಗುಂಪು ಕಟ್ಟಿಕೊಂಡರು. ಅವರು ಎಷ್ಟೇ ಬುದ್ಧಿಯಿಲ್ಲದೆ ವರ್ತಿಸುತ್ತಿದ್ದರೂ ಅವಳಿಂದ ಕೆಲವು ಗಜ ದೂರದಲ್ಲಿಯೇ ನಿಂತಿದ್ದರು. ಅವರೆಲ್ಲರ ದೃಷ್ಟಿಯೂ ಆ ಕೆಂಪು ಅಕ್ಷರದ ಮೇಲೆ ಕೇಂದ್ರೀಕೃತವಾಗಿತ್ತು. ಜನರ ಈ ನೂಕುನುಗ್ಗಲನ್ನು ಕಂಡ ನಾವಿಕರೂ ವಿಷಯವನ್ನು ಅರಿತು ಗುಂಪಿನಲ್ಲಿ ನುಗ್ಗಿದರು. ಬಿಳಿಯ ಜನರೆಲ್ಲಾ ಹೀಗೆ ನುಗ್ಗುತ್ತಿರುವುದನ್ನು ಕಂಡ ರೆಡ್ ಇಂಡಿಯನ್ನರೂ ಅಲ್ಲಿಗೆ

ಬಂದು ತಮ್ಮ ಹಾವಿನಂತಹ ಕಪ್ಪು ಕಣ್ಣುಗಳಿಂದ ಹೆಸ್ಟರ್‌ಳ ಎದೆಯ ಮೇಲಿದ್ದ ಅಕ್ಷರವನ್ನೇ ನೋಡತೊಡಗಿದರು. ಈ ಚಿಹ್ನೆಯನ್ನು ಧರಿಸಿದ್ದ ಆಕೆ ಯಾರೋ ಬಹಳ ದೊಡ್ಡ ಮನುಷ್ಯಳಿರಬೇಕೆಂದು ಭಾವಿಸಿದರು. ಹೆಸ್ಟರ್‌ಳಿಗೆ ಹಳಬರಾಗಿ ಹೋಗಿದ್ದ ಆ ಊರಿನ ಜನರ ಕುತೂಹಲವೂ ಮತ್ತೆ ಇದರಿಂದ ಕೆರಳಿ, ಅವರೂ ಅಲ್ಲಿ ಬಂದು ಸೇರಿದುದರಿಂದ ಹೆಸ್ಟರ್ ಪ್ರೈನ್‌ಳಿಗೆ ಮತ್ತಷ್ಟು ವೇದನೆಯುಂಟಾಯಿತು. ತಾನು ಏಳು ವರ್ಷಗಳ ಹಿಂದೆ ಸೆರೆಮನೆಯಿಂದ ಹೊರಬಂದ ದಿನ ನೋಡಿದ ಮುದಿಮುಖಗಳೆಲ್ಲಾ ಹೆಸ್ಟರ್‌ಳಿಗೆ ಕಾಣಿಸಿದವು. ಆದರೆ ಅವರಲ್ಲೆಲ್ಲಾ ಚಿಕ್ಕವಳೂ ಕರುಣಾಳುವೂ ಆದ ಒಬ್ಬಾಕೆ ಮಾತ್ರ ಅಲ್ಲಿರಲಿಲ್ಲ; ಆಕೆಯ ಶವ ವಸ್ತ್ರಗಳನ್ನು ಹೆಸ್ಟರ್ ತಾನೇ ಸಿದ್ಧಪಡಿಸಿಕೊಟ್ಟಿದ್ದಳು. ಆ ಕೆಂಪು ಅಕ್ಷರವನ್ನು ಕಿತ್ತೊಗೆಯಬೇಕೆಂಬ ಕಾಲ ಸನ್ನಿಹಿತವಾಗಿರುವ ಈ ಸಮಯದಲ್ಲಿ ತಾನು ಎಲ್ಲರ ಕುತೂಹಲದ ಕೇಂದ್ರವಾದುದನ್ನು ಕಂಡು ಇದುವರೆಗೂ ಎಂದೂ ಅನುಭವಿಸದಷ್ಟು ನೋವನ್ನುಂಟುಮಾಡುವಂತೆ ಅವಳ ಎದೆಯಲ್ಲಿ ಕೊರೆಯತೊಡಗಿತು.

ಎಂದೆಂದಿಗೂ ಈ ಕಠಿಣ ಶಿಕ್ಷೆಗೊಳಗಾಗಿರಬೇಕಾದ ದುರ್ವಿಧಿ ತನ್ನದೆಂಬಂತೆ ಹೆಸ್ಟರ್ ಕಳಂಕದ ಈ ಮಾಂತ್ರಿಕವೃತ್ತದ ಮಧ್ಯದಲ್ಲಿ ನಿಂತಿರುವ ಸಮಯದಲ್ಲಿ, ಪಾದ್ರಿ ತನ್ನ ಉಪದೇಶದ ಮಾತುಗಳಿಂದ ಜನರನ್ನು ಮಂತ್ರಮುಗ್ಧರನ್ನಾಗಿಸಿ, ಪವಿತ್ರವಾದ ವೇದಿಕೆಯ ಮೇಲೆ ನಿಂತು ತನ್ನ ಮುಂದೆ ನೆರೆದಿದ್ದ ಜನಸಮೂಹವನ್ನು ನೋಡುತ್ತಿದ್ದ. ಚರ್ಚಿನ ಒಳಗಡೆ ಪುಣ್ಯಮೂರ್ತಿಯಾದ ಪಾದ್ರಿ! ಮಾರುಕಟ್ಟೆಯಲ್ಲಿ ಕೆಂಪು ಅಕ್ಷರವನ್ನು ಧರಿಸಿದ ಹೆಂಗಸು! ಆದರೆ ಅವರಿಬ್ಬರ ಹೃದಯವನ್ನು ಒಂದೇ ಚಿಂತೆ ಕೊರೆಯುತ್ತಿರುವುದನ್ನು ಯಾರಿಂದ ಊಹಿಸಲು ಸಾಧ್ಯ?

## ೨೩

ಉಕ್ಕುತ್ತಿರುವ ಕಡಲ ಅಲೆಗಳಂತೆ ಸಭಿಕರೆಲ್ಲರನ್ನೂ ತೇಲಿಸಿಕೊಂಡು ಧಾರಾಕಾರವಾಗಿ ಹರಿಯುತ್ತಿದ್ದ ದನಿ ಕಡೆಗೆ ನಿಂತಿತು. ಒಂದು ಕ್ಷಣ ಕಾಲ ಎಲ್ಲೆಲ್ಲೂ ಮೌನವಾವರಿಸಿತು. ಇಷ್ಟು ಹೊತ್ತೂ ಮಂತ್ರಮುಗ್ಧರಂತೆ ತಮ್ಮನ್ನು ತಾವೇ ಮರೆತುಕೊಂಡಿದ್ದ ಜನಸಮೂಹದಲ್ಲಿ ಈಗ ಗುಜುಗುಜು ಶಬ್ದ ಪ್ರಾರಂಭವಾಯಿತು. ಮರುಕ್ಷಣದಲ್ಲೇ ಚರ್ಚಿನಿಂದ ಹೊರಕ್ಕೆ ಜನರ ಗುಂಪು ಬರಲಾರಂಭಿಸಿತು. ಪಾದ್ರಿಯ ಉಪದೇಶದ ಸವಿನುಡಿಗಳಲ್ಲಿ

ಮುಳುಗಿ ಹೋಗಿದ್ದ ಈ ಜನರಿಗೆ ಈಗ ಅವನ ಭಾಷಣ ಮುಗಿದುಹೋಗಿದ್ದುದರಿಂದ, ಕೊಂಚ ಪ್ರಾಪಂಚಿಕ ವಿಷಯಗಳನ್ನು ಮಾತನಾಡಿಕೊಳ್ಳಲು ಅವಕಾಶವಾಯಿತು ; ಅದರ ಅವಶ್ಯಕತೆಯೂ ಇತ್ತು.

ಇಷ್ಟು ಹೊತ್ತೂ ಇದ್ದ ಅವರ ಏಕಾಗ್ರತೆಯೆಲ್ಲ ಮಾಯವಾಗಿ ಈಗ ಮಾತಿಗೆ ಮೊದಲಾಯಿತು. ಮಾರುಕಟ್ಟೆಯ ಮೂಲೆ ಮೂಲೆಗಳಿಂದಲೂ ಮಾತಿನ ಗೊಂದಲ ಆರಂಭವಾಯಿತು. ಎಲ್ಲರೂ ಪಾದ್ರಿಯನ್ನು ಕೊಂಡಾಡುತ್ತಿದ್ದರು. ಸಭಿಕರಲ್ಲಿ ಪ್ರತಿಯೊಬ್ಬನೂ ಇನ್ನೊಬ್ಬನೊಡನೆ, ತಾನು ಭಾಷಣವನ್ನು ಯಾವರೀತಿ ಅರ್ಥಮಾಡಿಕೊಂಡೆನೆಂದು ಹೇಳುವ ವರೆಗೂ ಸಮಾಧಾನವಿರಲಿಲ್ಲ. ಒಟ್ಟಿನಲ್ಲಿ ಅವರೆಲ್ಲರ ಅಭಿಪ್ರಾಯದಂತೆ, ಇದುವರೆಗೂ ಯಾವ ಮಾನವನೂ ಇಷ್ಟು ಅಮೋಘವಾದ ಭಾಷಣವನ್ನು ಮಾಡಿರಲಿಲ್ಲ. ಮಾನವ ವರ್ಗದ ವಿವಿಧ ಮತಗಳಿಗೂ ಮತ್ತು ದೇವರಿಗೂ ಇರುವ ಸಂಬಂಧವನ್ನು ಕುರಿತಾದದ್ದೇ ಅಂದಿನ ಭಾಷಣದ ವಸ್ತುವಂತೆ. ಅದರಲ್ಲಿಯೂ ಹೆಚ್ಚಾಗಿ ನ್ಯೂ ಇಂಗ್ಲೆಂಡಿಗೆ ಸಂಬಂಧಿಸಿದಂತೆಯೇ ಮಾತನಾಡಿದನಂತೆ. ಭಾಷಣದ ಉದ್ದಕ್ಕೂ ಅವನ ದನಿಯಲ್ಲಿ ಒಂದು ವಿಧವಾದ ಯಾತನೆ ಕಂಡುಬಂದಿತ್ತು. ಅದನ್ನು ಕೇಳಿದವರಿಗೆ ಅವನು ತಮ್ಮನ್ನು ಶೀಘ್ರದಲ್ಲಿಯೇ ತ್ಯಜಿಸಿ ಹೊರಟುಹೋಗುವನೆಂಬ ಭಾವನೆ ಖಂಡಿತವಾಗುತ್ತಿತ್ತು. ಹೌದು ; ತಮಗೆಲ್ಲಾ ಅಷ್ಟು ಪ್ರೀತಿಪಾತ್ರನಾದ ಪಾದ್ರಿ ಜನರೆಲ್ಲಾ ತುಂಬ ವಿಶ್ವಾಸದಿಂದ ಕಾಣುತ್ತಿದ್ದುದರ ಫಲವಾಗಿ ನಿಟ್ಟುಸಿರಿಡದೆ ಅವರನ್ನು ತ್ಯಜಿಸಿ ಹೋಗುವುದು ಅಸಾಧ್ಯವಾಗಿತ್ತು. ಅಕಾಲದ ಮೃತ್ಯುವಿಗೆ ತುತ್ತಾಗಿ, ಎಲ್ಲರನ್ನೂ ಕಣ್ಣೀರ ಕಡಲಲ್ಲಿ ಮುಳುಗಿಸಿ ಹೊರಟು ಹೋಗುವ ಸೂಚನೆ ಕಾಣುತ್ತಿತ್ತು! ಈ ಭಾವನೆಯಿಂದ ಅವನ ಭಾಷಣ ಜನಗಳ ಮನಸ್ಸಿನ ಮೇಲೆ ಮತ್ತಷ್ಟು ಪರಿಣಾಮಕಾರಿಯಾಯಿತು. ಆಕಾಶಕ್ಕೆ ಹಾರಿಹೋಗುವ ದೇವತೆ ಒಂದು ಕ್ಷಣಕಾಲ ತನ್ನ ಹೊಳೆಯುವ ರೆಕ್ಕೆಗಳನ್ನು ಆಡಿಸಿ ಅವರೆಲ್ಲರ ಮೇಲೆ ಸತ್ಯವರ್ಷವನ್ನು ಕರೆದಂತೆ ಆಗಿತ್ತು.

ಒಟ್ಟಿನಲ್ಲಿ ರೆವರೆಂಡ್ ಡಿಮ್ಸ್‌ಡೇಲ್ ಇಂದು ತನ್ನ ಕೀರ್ತಿಯ ಶಿಖರವನ್ನು ಮುಟ್ಟಿದ್ದ. ಅದೇ ಸಮಯದಲ್ಲಿ ಹೆಸ್ಟರ್ ಪ್ರೈನ್ ವಧ್ಯವೇದಿಕೆಯ ಪಕ್ಕದಲ್ಲಿ ನಿಂತಿದ್ದಳು. ಅವಳ ಎದೆಯ ಮೇಲೆ ಆ ಕೆಂಪು ಅಕ್ಷರ ಉರಿಯುತ್ತಿತ್ತು.

ಮತ್ತೆ ಚರ್ಚಿನಿಂದ ಹೊರಕ್ಕೆ ಬರುತ್ತಿದ್ದ ಸೈನಿಕರ ವಾದ್ಯಸಂಗೀತ ಕೇಳತೊಡಗಿತು. ಮೆರವಣಿಗೆ ಅಲ್ಲಿಂದ ಮುಂದುವರಿದು ಪುರಭವನಕ್ಕೆ

ಹೋಗಿ ಅಲ್ಲಿ ಭಾರಿ ಔತಣವಾದ ನಂತರ ಅಂದಿನ ಕಾರ್ಯಕ್ರಮಗಳು ಮುಕ್ತಾಯಗೊಳ್ಳುತ್ತಿದ್ದವು.

ಮತ್ತೊಮ್ಮೆ ಗವರ್ನರರೊಡಗೂಡಿ ಊರಿನ ಗಣ್ಯವ್ಯಕ್ತಿಗಳೆಲ್ಲಾ ಮೆರವಣಿಗೆಯಲ್ಲಿ ಹೊರಟರು. ಮಾರುಕಟ್ಟೆಯ ಮಧ್ಯಕ್ಕೆ ಅವರೆಲ್ಲ ಬಂದಾಗ ಜನರೆಲ್ಲ ಹರ್ಷಧ್ವನಿ ಮಾಡಿದರು. ಈ ಹರ್ಷಧ್ವನಿ, ಜನರಿಗೆ ಆಡಳಿತಗಾರರ ಮೇಲಣ ವಿಶ್ವಾಸದಿಂದ ಹೊರಟದ್ದಾದರೂ, ಅದರ ಜೊತೆಗೆ, ಇನ್ನೂ ಅವರ ಕಿವಿಯಲ್ಲಿ ಮೊಳಗುತ್ತಿದ್ದ ಭಾಷಣದ ಹೊನಲು ಮತ್ತಷ್ಟು ಉತ್ಸಾಹವನ್ನುಂಟುಮಾಡಿತ್ತು. ಚರ್ಚಿನ ಒಳಗಡೆ ಛಾವಣಿ ಹಾರುವಷ್ಟು ಶಬ್ದ ಬರುತ್ತಿತ್ತು; ಹೊರಗಡೆ ವಿಶ್ವವ್ಯಾಪಿಯಾಗಿತ್ತು. ಅವರೆಲ್ಲರ ಆತ್ಮಗಳೂ ಒಂದೇ ಆಗಿದ್ದಂತೆ ಹೊರಟಿತ್ತು, ಆ ಹರ್ಷಧ್ವನಿ. ನ್ಯೂ ಇಂಗ್ಲೆಂಡಿನಲ್ಲಿ ಎಂದಿಗೂ ಅಂತಹ ಹರ್ಷಧ್ವನಿಯಾಗಿರಲಿಲ್ಲ! ಇಂದು ಪಾದ್ರಿಗೆ ದೊರೆತಷ್ಟು ಗೌರವ ನ್ಯೂ ಇಂಗ್ಲೆಂಡಿನಲ್ಲಿ ಇನ್ನಾರಿಗೂ ಎಂದಿಗೂ ದೊರೆತಿರಲಿಲ್ಲ!

ಆದರೆ ಅದು ಅವನಲ್ಲಿ ಯಾವ ಪರಿಣಾಮವನ್ನುಂಟುಮಾಡಿತ್ತು? ಅವನ ತಲೆಯ ಸುತ್ತ ಒಂದು ದಿವ್ಯಕಾಂತಿ ಮೂಡಿರಲಿಲ್ಲವೆ?

ಸೈನಿಕರೂ, ನಗರಪಿತೃಗಳೂ ಮುಂದೆ ಸಾಗಿದ ಮೇಲೆ, ಎಲ್ಲರ ದೃಷ್ಟಿಯೂ ಹತ್ತಿರ ಬರುತ್ತಿದ್ದ ಪಾದ್ರಿಯ ಕಡೆಗೆ ತಿರುಗಿದವು. ಅವನನ್ನು ಕಂಡ ಕೂಡಲೇ ಜನರ ಹರ್ಷಧ್ವನಿ ಕುಗ್ಗಿಹೋಯಿತು. ಇಷ್ಟು ವಿಜಯ ಗಳಿಸಿದ್ದರೂ, ಎಷ್ಟು ವಿವರ್ಣವಾಗಿ ನಿತ್ರಾಣವಾಗಿ ಕಾಣುತ್ತಿದ್ದ ಅವನು! ಅವನು ಪವಿತ್ರವಾದ ಉಪದೇಶವನ್ನು ಮಾಡುವವರೆಗೂ ಅವನಲ್ಲಿದ್ದ ಶಕ್ತಿ —ಇಲ್ಲ ಸ್ಫೂರ್ತಿ—ಈಗ ಮಾಯವಾಗಿತ್ತು. ಆರಿಹೋಗುತ್ತಿರುವ ಬೆಂಕಿಯಂತೆ ಅವನ ಮುಖದ ಮೇಲಿನ ಕಾಂತಿ ಕಂದಿಹೋಗಿತ್ತು. ಅವನು ಜೀವಂತ ವ್ಯಕ್ತಿಯಂತೆ ಕಾಣುತ್ತಿರಲಿಲ್ಲ. ಮುಖದ ಮೇಲೆ ಕವಿದಿದ್ದ ಮೃತ್ಯುಛಾಯೆಯಿಂದ ಅವನು ನಡೆದು ಹೋಗುತ್ತಿರುವ ಜೀವಚ್ಛವವಾಗಿದ್ದ. ಆದರೂ ಬೀಳದೆ ನಡೆದುಹೋಗುತ್ತಿದ್ದ.

ಡಿಮ್ಸ್‌ಡೇಲನ ಈ ಸ್ಥಿತಿಯನ್ನು ಕಂಡು ರೆವರೆಂಡ್ ಜಾನ್ ವಿಲ್ಸನ್‌ರವರು ಸರ್ರನೆ ಅವನ ಸಹಾಯಕ್ಕೆ ಬಂದರು. ಪಾದ್ರಿ ನಡುಗುತ್ತಿದ್ದರೂ ತುಂಬ ನಿರ್ಧಾರದಿಂದ ಅವರ ಸಹಾಯವನ್ನು ನಿರಾಕರಿಸಿದ. ಆದರೂ ಅವನು ಇನ್ನೂ ನಡೆದುಹೋಗುತ್ತಲೇ ಇದ್ದ. ಆಗತಾನೇ ನಡೆಯಲು ಕಲಿತ ಮಗು ಕೈಚಾಚಿ ಕರೆಯುತ್ತಿರುವ ತಾಯಬಳಿಗೆ ತೂರಾಡಿಕೊಂಡು ಹೋಗುವಂತೆ ಇತ್ತು ಅವನ ನಡಗೆ. ಅವನಿಗರಿವಿಲ್ಲದಂತೆಯೇ ತನಗೆ

ಚಿರಪರಿಚಿತವಾದ ವಧ್ಯವೇದಿಕೆಯ ಎದುರಿಗೆ ಬಂದಿದ್ದ. ಪರ್ಲ್‌ಳ ಕೈ ಹಿಡಿದು ಹೆಸ್ಟರ್ ಪ್ರೈನ್ ಅಲ್ಲಿಯೇ ನಿಂತಿದ್ದಳು! ಅವಳ ಎದೆಯ ಮೇಲೆ ಆ ಕೆಂಪು ಅಕ್ಷರವಿತ್ತು! ವಾದ್ಯ ಸಂಗೀತದ ತಾಳಕ್ಕೆ ತಕ್ಕಂತೆ ಮೆರವಣಿಗೆ ಮುಂದುವರೆಯುತ್ತಿದ್ದರೂ ಪಾದ್ರಿ ಈ ಸ್ಥಳದಲ್ಲಿ ಕೊಂಚ ನಿಧಾನಿಸಿದ. ಸಂಗೀತವೇನೋ ಅವನನ್ನು ಮುನ್ನಡೆಯುವಂತೆ ಕರೆದೊಯ್ಯುತ್ತಿದ್ದರೂ, ಅವನು ಇಲ್ಲಿ ಕೊಂಚ ನಿಧಾನಿಸಿದ.

ಬೆಲಿಂಗ್ ಹ್ಯಾಮ್‌ರವರು ಅವನನ್ನೇ ಕಾತುರರಾಗಿ ನೋಡುತ್ತಿದ್ದರು. ಡಿಮ್ಸ್‌ಡೇಲನ ಸ್ಥಿತಿಯನ್ನು ಕಂಡು ಅವನು ಬಿದ್ದುಬಿಡುವುದು ಖಂಡಿತವೆಂದು ಭಾವಿಸಿ, ಅವರು ಮೆರವಣಿಗೆಯಲ್ಲಿ ತಮ್ಮ ಸ್ಥಾನವನ್ನು ತ್ಯಜಿಸಿ ಪಾದ್ರಿಗೆ ಸಹಾಯ ನೀಡಲು ಬಂದರು. ಆದರೂ ಆ ಪಾದ್ರಿಯ ನೋಟದಲ್ಲಿದ್ದ ಏನೋ ಒಂದು ವೈಚಿತ್ರ್ಯ ಅವರನ್ನು ಹಿಮ್ಮೆಟ್ಟುವಂತೆ ಮಾಡಿತು. ಜನಸಮೂಹ ಭೀತಿ ಪೂರ್ಣವಾದ ಅಚ್ಚರಿಯಿಂದ ಅವನನ್ನು ನೋಡುತ್ತಿದ್ದಿತ್ತು. ಈ ಶಕ್ತಿ ಪಾದ್ರಿಯ ದೈವೀಶಕ್ತಿಯ ಇನ್ನೊಂದು ರೂಪ ಎಂದು ಭಾವಿಸಿದರು ಆ ಜನರು. ಇಷ್ಟು ಪುಣ್ಯಪುರುಷನಾದ ಆತ ದಿವ್ಯ ತೇಜಸ್ಸಿನಲ್ಲಿ ಕರಗಿ ಮಾಯವಾಗಿ ಹೋಗಿದ್ದರೂ ಜನರು ಅದೊಂದು ಪವಾಡವೆಂದು ಭಾವಿಸುತ್ತಿರಲಿಲ್ಲ.

ಪಾದ್ರಿ ವಧ್ಯವೇದಿಕೆಯ ಕಡೆಗೆ ತಿರುಗಿ ತನ್ನೆರಡು ಕೈಗಳನ್ನೂ ಚಾಚಿದ.

'ಹೆಸ್ಟರ್ ಇಲ್ಲಿ ಬಾ! ಬಾ ನನ್ನ ಮುದ್ದು ಪರ್ಲ್!' ಎಂದು ಕೂಗಿದ.

ಅವನ ಮುಖ ಕಳೆಗುಂದಿದ್ದರೂ ಅದರಲ್ಲಿ ಒಂದು ವಿಧವಾದ ವಿಜಯೋತ್ಸಾಹವಿತ್ತು. ಆ ಮಗು ಹಕ್ಕಿಯಂತೆ ಹಾರಿಹೋಗಿ ಅವನ ಮೊಣಕಾಲನ್ನು ತಬ್ಬಿಕೊಂಡು ನಿಂತಳು. ತನಗೆ ಇಷ್ಟವಿಲ್ಲದಿದ್ದರೂ ವಿಧಿಯ ಸೆಳೆತದಿಂದ ಮುಂದುವರಿಯುತ್ತಿರುವವಳಂತೆ ಹೆಸ್ಟರ್ ಪ್ರೈನ್ ನಿಧಾನವಾಗಿ ಅವನ ಬಳಿಗೆ ಬಂದಳು. ಅದೇ ಕ್ಷಣದಲ್ಲಿ ಪಾದ್ರಿಯನ್ನು ಹಿಮ್ಮೆಟ್ಟಿಸಲು ರೋಜರ್ ಚಿಲಿಂಗ್‌ವರ್ತ್ ಜನಸಂದಣಿಯಿಂದ ನುಗ್ಗಿ ಬಂದ! ಧಾವಿಸಿ ಬಂದು ಪಾದ್ರಿಯ ಕೈ ಹಿಡಿದುಕೊಂಡ.

'ಹುಚ್ಚ! ಏನು ಮಾಡಬೇಕೆಂದಿರುವೆ? ಅವಳನ್ನು ಹಿಂದಕ್ಕೆ ಅಟ್ಟು! ಈ ಮಗುವನ್ನು ಓಡಿಸು! ಎಲ್ಲವೂ ಸರಿಹೋಗುತ್ತದೆ! ನಿನ್ನ ಹೆಸರಿಗೆ ಕಳಂಕ ತಂದುಕೊಂಡು ಅಪಮಾನಕ್ಕೀಡಾಗಿ ನಾಶವಾಗಬೇಡ!

ಈಗಲೂ ನಿನ್ನನ್ನು ನಾನು ಉದ್ಧರಿಸಬಲ್ಲೆ ! ನಿನ್ನ ಈ ಪವಿತ್ರವಾದ ವೃತ್ತಿಗೆ ಕಳಂಕ ತರುತ್ತೀಯೇನು ?' ಎಂದು ರೋಜರ್ ಚಿಲಿಂಗ್‌ವರ್ತ್ ಪಿಸು ಗುಟ್ಟಿದ.

'ನನಗೆ ಆಶೆ ತೋರಿಸುತ್ತೀಯಾ ? ಅದಕ್ಕೆ ಕಾಲ ಮೀರಿಹೋಗಿದೆ. ನಿನ್ನ ಶಕ್ತಿ ಮೊದಲಿನಂತಿಲ್ಲ ! ದೇವರ ದಯೆಯಿಂದ ಈಗ ನಿನ್ನಿಂದ ತಪ್ಪಿಸಿಕೊಂಡು ಹೋಗುತ್ತೇನೆ ನಾನು' ನಿರ್ಧಾರ ಸ್ವರದಲ್ಲಿ ನುಡಿದ ಪಾದ್ರಿ.

ಮತ್ತೆ ಹೆಸ್ಟರ್‌ಳ ಕಡೆಗೆ ಕೈಚಾಚಿದ.

'ಹೆಸ್ಟರ್ ಪ್ರೈನ್, ಏಳು ವರ್ಷಗಳ ಹಿಂದೆಯೇ ನಾನು ಮಾಡಿ ಕೊಳ್ಳಬೇಕಾಗಿದ್ದ ಪ್ರಾಯಶ್ಚಿತ್ತವನ್ನು ಈ ನನ್ನ ಕೊನೆಯ ಘಳಿಗೆಯಲ್ಲಾ ದರೂ ಮಾಡಿಕೊಳ್ಳುವಂತೆ ದಯಾಮಯನಾದ ಭಗವಂತನು ನನಗೆ ಒಳ್ಳೆಯ ಬುದ್ಧಿಯನ್ನೂ ದಯಪಾಲಿಸಿದ್ದಾನೆ. ನಿನ್ನ ಶಕ್ತಿಯಿಂದ ನನಗೆ ಆಸರೆ ಯಾಗು ಬಾ ! ಶಕ್ತಿಯೇನೋ ನಿನ್ನದು ; ಆದರೆ ಅದನ್ನು ದೇವರು ದಯ ಪಾಲಿಸಿರುವ ಬುದ್ಧಿಯಂತೆ ನಡೆಸಿಕೊಂಡು ಹೋಗುವುದು ನನಗೆ ಸೇರಿದ್ದು ! ಈ ಪಾಪದ ಮುದುಕ ಅದನ್ನು ತಪ್ಪಿಸಲು ತನ್ನೆಲ್ಲ ಶಕ್ತಿಯನ್ನೂ ಉಪ ಯೋಗಿಸುತ್ತಿದ್ದಾನೆ ! ಬಾ ಹೆಸ್ಟರ್, ಬಾ ! ನನ್ನನ್ನು ಆ ವಧ್ಯವೇದಿಕೆಯ ಮೇಲಕ್ಕೆ ನಡೆಸಿಕೊಂಡು ಹೋಗು !' ಎಂದು ಕೂಗಿಕೊಂಡ ಪಾದ್ರಿ.

ಜನಸಂದಣಿಯಲ್ಲಿ ಗೊಂದಲವೆದ್ದಿತು. ಪಾದ್ರಿಯ ಬಳಿಯಲ್ಲೇ ನಿಂತಿದ್ದ ಗಣ್ಯವ್ಯಕ್ತಿಗಳಿಗಾರಿಗೂ, ಅವನ ಈ ವರ್ತನೆ ಅರ್ಥವಾಗದೆ ಆಶ್ಚರಿಗೊಂಡು ಮೂಕರಾಗಿ ನೋಡುತ್ತಾ ನಿಂತಿದ್ದರು. ಅವನು ಹೆಸ್ಟರ್‌ಳ ಭುಜದ ಮೇಲೆ ತಲೆಯೊರಗಿಸಿದ್ದ. ಅವಳ ಕೈ ಅವನನ್ನು ಬಳಸಿತ್ತು. ಆ ಪಾಪದ ಮಗುವಿನ ಕೈಯನ್ನು ಪಾದ್ರಿ ಭದ್ರವಾಗಿ ಹಿಡಿದುಕೊಂಡೇ ಇದ್ದ. ಮೂವರೂ ವಧ್ಯವೇದಿಕೆಯ ಕಡೆಗೆ ನಡೆದರು. ಈ ರುದ್ರನಾಟಕದ ಪಾತ್ರ ಧಾರಿಯಾಗಿದ್ದ ಅವನಿಗೂ ಕೊನೆಯ ದೃಶ್ಯದಲ್ಲಿ ರಂಗದ ಮೇಲೆ ಬರುವ ಹಕ್ಕಿರುವವನಂತೆ ರೋಜರ್ ಚಿಲಿಂಗ್‌ವರ್ತ್ ಅವರನ್ನು ಹಿಂಬಾಲಿಸಿದ.

'ನೀನು ನನ್ನಿಂದ ತಪ್ಪಿಸಿಕೊಳ್ಳಲು ಅವಿತುಕೊಳ್ಳುವುದಕ್ಕೆ ಈ ಜಗತ್ತೆಲ್ಲಾ ಹುಡುಕಿದ್ದರೂ, ಈ ವಧ್ಯವೇದಿನೆಯೊಂದನ್ನುಳಿದು ಬೇರೆಲ್ಲೂ ಸ್ಥಳವಿರಲಿಲ್ಲ' ಎಂದು ವಕ್ರದೃಷ್ಟಿಯಿಂದ ಪಾದ್ರಿಯನ್ನು ನೋಡುತ್ತಾ ಹೇಳಿದ ರೋಜರ್ ಚಿಲಿಂಗ್‌ವರ್ತ್.

'ನನ್ನನ್ನು ಇಲ್ಲಿಗೆ ನಡೆಸಿಕೊಂಡು ಬಂದ ಆ ಭಗವಂತನಿಗೆ ನನ್ನ

ವಂದನೆಗಳು,' ಎಂದು ಪಾದ್ರಿ ಉತ್ತರಕೊಟ್ಟ.

ಆದರೂ ಅವನು ಕಂಪಿಸುತ್ತಾ ಹೆಸ್ಟರಳ ಕಡೆ ಕಾತುರತೆಯಿಂದ ನೋಡತೊಡಗಿದ. ಅವನ ತುಟಿಯ ಮೇಲೆ ಮಸಕಾಗಿ ನಗೆ ಮೂಡಿತ್ತು.

'ನಾವು ಅಂದು ಕಾಡಿನಲ್ಲಿ ಕನಸುಕಟ್ಟಿದೆವಲ್ಲ, ಅದಕ್ಕಿಂತ ಇದು ಉತ್ತಮವಲ್ಲವೆ ?' ಎಂದುಸಿರಿದ.

'ಅದೇನೋ ನಾನರಿಯೆ! ಉತ್ತಮವೆ ? ಹೌದು; ನಾವಿಬ್ಬರೂ ಸಾಯಬಹುದು. ನಮ್ಮ ಜೊತೆಗೆ ಈ ಪುಟ್ಟ ಮಗುವೂ ಸಹ' ಎಂದು ಸರ್ರನೆ ಮರುನುಡಿದಳು ಹೆಸ್ಟರ್.

ನಿಮ್ಮಿಬ್ಬರ ಗತಿ ಆ ದಯಾಮಯನಾದ ದೇವರ ಇಚ್ಛೆಯಿದ್ದಂತಾಗಲಿ! ನನ್ನ ಮಟ್ಟಿಗೆ ನಾನು ಆತನ ಇಚ್ಛೆಗನುಗುಣವಾಗಿ ನಡೆದುಕೊಳ್ಳುತ್ತೇನೆ. ನಾನು ಮೃತ್ಯುವಿನ ದವಡೆಯಲ್ಲಿರುವ ಮನುಷ್ಯ ಹೆಸ್ಟರ್. ಆದ್ದರಿಂದ ಬೇಗ ನನ್ನ ಕಳಂಕವನ್ನು ಒಪ್ಪಿಕೊಳ್ಳಬೇಕು' ಎಂದ ಪಾದ್ರಿ.

ಗಣ್ಯರಾದ ಆಡಳಿತವರ್ಗದವರು, ಅವನ ವೃತ್ತಿಸೋದರರಾದ ಪುಣ್ಯ-ಮೂರ್ತಿಗಳಾದ ಇತರ ಪಾದ್ರಿಗಳು, ಕಣ್ಣೀರು ತುಂಬಿಕೊಂಡು ಸಹಾನುಭೂತಿ ತೋರುತ್ತಿದ್ದ ಜನಸಮೂಹ ಎಲ್ಲರ ಕಡೆಗೂ ಡಿಮ್ಸ್‌ಡೇಲ್ ತಿರುಗಿ ನೋಡಿದ. ಹೆಸ್ಟರ್‌ಪ್ರೈನ್ ಅವನಿಗೆ ಆಸರೆಯಾಗಿದ್ದಳು. ಇನ್ನೊಂದು ಕೈಯಲ್ಲಿ ಪರ್ಲ್‌ಳ ಪುಟ್ಟ ಕೈಯನ್ನು ಹಿಡಿದಿದ್ದ. ಭಗವಂತನ ನ್ಯಾಯಾಲಯದಲ್ಲಿ ಅವನು ತನ್ನ ಅಪರಾಧವನ್ನು ಒಪ್ಪಿಸಿಕೊಳ್ಳುತ್ತಿರುವ ಈ ಸಮಯದಲ್ಲಿ ಬೆಳಗುತ್ತಿದ್ದ ಸೂರ್ಯನ ಕಾಂತಿ ಆ ಪಾದ್ರಿಯ ಆಕೃತಿ ಸ್ಪಷ್ಟವಾಗಿ ಕಾಣುವಂತೆ ಮಾಡಿತ್ತು.

ಪಾದ್ರಿ ಎಲ್ಲರಿಗೂ ಕೇಳುವಂತೆ ದೊಡ್ಡದಾದ ದನಿಯಲ್ಲಿ ದುಃಖಪೂರಿತವಾಗಿ ಹೇಳತೊಡಗಿದ : 'ನ್ಯೂ ಇಂಗ್ಲೆಂಡಿನ ಮಹಾಜನರೇ! ನೀವೆಲ್ಲರೂ ನನ್ನನ್ನು ತುಂಬಾ ಪ್ರೀತಿಸಿದ್ದೀರಿ; ನನ್ನನ್ನು ಪುಣ್ಯಮೂರ್ತಿಯೆಂದು ಭಾವಿಸಿದ್ದೀರಿ! ಆದರೆ ನಾನು ಈ ಜಗತ್ತಿನಲ್ಲೇ ಮಹಾ ಪಾಪಿ! ನಾನು ಬೀಳದಂತೆ, ನನಗೆ ಆಸರೆಯಾಗಿರುವ ಈಕೆಯೊಡನೆ ಈಗ ಏಳು ವರ್ಷಗಳ ಹಿಂದೆಯೇ ನಾನು ನಿಂತುಕೊಳ್ಳಬೇಕಾದ ಸ್ಥಳದಲ್ಲಿ ಕೊನೆಗೆ ಇಂದು ನಿಂತಿದ್ದೇನೆ! ಹೆಸ್ಟರ್ ಧರಿಸಿರುವ ಆ ಕೆಂಪು ಅಕ್ಷರವನ್ನು ನೋಡಿ! ಅದನ್ನು ಕಂಡು ನೀವೆಲ್ಲ ನಡುಗಿದ್ದೀರಿ! ಅವಳು ಶಾಂತಿಯನ್ನರಿಸಿಕೊಂಡು ಹೋದ ಸ್ಥಳಗಳಲ್ಲೆಲ್ಲಾ ಇದು ಅವಳ ವಿಷಯವಾಗಿ ಭೀತಿಯನ್ನುಂಟು ಮಾಡಿದೆ. ಆದರೆ ನಿಮ್ಮ ನಡುವೆಯೇ ಇದ್ದ ಒಬ್ಬನ ಪಾಪಪೂರಿತವಾದ

ಕಳಂಕದ ಚಿಹ್ನೆಯನ್ನು ಕಂಡು ನೀವು ಬೆದರಿಲ್ಲ !'

ಇಲ್ಲಿಂದ ಮುಂದಕ್ಕೆ ಅವನು ತನ್ನ ರಹಸ್ಯವನ್ನು ಸಂಪೂರ್ಣವಾಗಿ ಬಯಲು ಮಾಡುವಂತೆ ತೋರಲಿಲ್ಲ. ಆದರೂ ಅವನು ತನ್ನ ಮನಸ್ಸಿನೊಂದಿಗೂ, ದೇಹದ ನಿತ್ರಾಣದೊಂದಿಗೂ ಹೋರಾಡಿದ್ದ, ತನಗಿದ್ದ ಆಸರೆಯನ್ನು ತ್ಯಜಿಸಿ ಒಂದು ಹೆಜ್ಜೆ ಮುಂದೆ ನಿಂತುಕೊಂಡು ಧೈರ್ಯ ತಂದುಕೊಂಡು ಮಾತನ್ನು ಮುಂದುವರೆಸಿದ.

'ಆ ಕಳಂಕದ ಚಿಹ್ನೆ ಅವಳ ಮೇಲೆ ಇತ್ತು! ದೇವರ ಕಣ್ಣಿಗೆ ಅದು ಕಾಣಿಸಿತು! ದೇವತೆಗಳೆಲ್ಲಾ ಸತತವಾಗಿ ಅದರೆಡೆಗೆ ಬೆಟ್ಟುಮಾಡಿ ತೋರುತ್ತಿದ್ದರು ! ಪಿಶಾಚಿಗೂ ಅದು ತಿಳಿದುದರಿಂದ ತನ್ನ ಉರಿಯುತ್ತಿರುವ ಬೆಟ್ಟನಿಂದ ಸತತವಾಗಿ ಅದನ್ನು ಕೆದಕುತ್ತಿತ್ತು ! ಆದರೆ ಅವನು ಮಾತ್ರ ಮಿಕ್ಕ ಮಾನವರೆದುರಿಗೆ ತುಂಬ ಜಾಣ್ಮೆಯಿಂದ ಅದನ್ನು ಬಚ್ಚಿಟ್ಟು ಸಂಭಾವಿತನಂತೆ ತಿರುಗುತ್ತಿದ್ದ ! ಆದರೆ ಈಗ ಸಾವೊದಗಿದ ಘಳಿಗೆಯಲ್ಲಿ ನಿಮ್ಮ ಮುಂದೆ ನಿಂತಿದ್ದಾನೆ ! ಹೆಸ್ಟರ್‌ಳ ಎದೆಯ ಮೇಲಿರುವ ಕೆಂಪು ಅಕ್ಷರವನ್ನು ಮತ್ತೊಮ್ಮೆ ನೋಡಿ ! ಅದೆಷ್ಟು ಘೋರವಾಗಿದ್ದರೂ, ಆ ವ್ಯಕ್ತಿಯ ಎದೆಯ ಮೇಲಿರುವ ಕೆಂಪು ಗುರುತಿನ ನೆರಳಿಗೆ ಸಮನಲ್ಲ ! ಆ ಗುರುತೂ ಸಹ ಅವನ ಎದೆಯನ್ನು ದಹಿಸುತ್ತಿರುವ ಯಾತನೆಗೆ ಸಾಟಿಯಾಗಲಾರದು ! ಪಾಪಿಯೊಬ್ಬನನ್ನು ಕುರಿತು ದೇವರಿತ್ತ ತೀರ್ಪನ್ನು ವಿರೋಧಿಸುವವರು ಯಾರಾದರೂ ಇಲ್ಲಿದಿರೇನು ? ನೋಡಿ ! ಅದರ ಘೋರವಾದ ಸಾಕ್ಷ್ಯವನ್ನು ನೋಡಿ !'

ಕಂಪಿಸುತ್ತಾ, ತನ್ನ ಉಡುಪನ್ನು ಎದೆಯ ಬಳಿ ಹರಿದುಕೊಂಡ. ಅದು ಎಲ್ಲರಿಗೂ ಕಾಣಿಸಿತು ! ಈ ದೃಶ್ಯವನ್ನು ಕಂಡ ಜನ ಭೀತಿಯಿಂದ ಒಂದು ಕ್ಷಣ ದಂಗುಬಡಿದವರಂತೆ ನಿಂತರು. ಪಾದ್ರಿಯ ಮುಖದಮೇಲೆ ವಿಜಯೋತ್ಸಾಹ ಲಾಸ್ಯವಾಡುತ್ತಿತ್ತು. ಹಾಗೆಯೇ ವಧ್ಯವೇದಿಕೆಯ ಮೇಲೆ ಕುಸಿದು ಬಿದ್ದ ! ಹೆಸ್ಟರ್ ಅವನ ತಲೆಯೆತ್ತಿ ತನ್ನ ಎದೆಗೊರಗಿಸಿಕೊಂಡಳು. ರೋಜರ್ ಚಿಲಿಂಗ್‌ವರ್ತ್ ಅವನ ಪಕ್ಕದಲ್ಲಿಯೇ ಮಂಡಿಯೂರಿ ಕುಳಿತ. ಅವನ ಮುಖದಲ್ಲಿ ಜೀವಕಳೆ ಮಾಯವಾಗಿತ್ತು.

'ನನ್ನಿಂದ ತಪ್ಪಿಸಿಕೊಂಡುಬಿಟ್ಟೆ ! ಕಡೆಗೂ ನನ್ನಿಂದ ತಪ್ಪಿಸಿಕೊಂಡುಬಿಟ್ಟೆ!' ಎಂದು ಮತ್ತೆ ಮತ್ತೆ ಹೇಳಿಕೊಂಡ ರೋಜರ್ ಚಿಲಿಂಗ್‌ವರ್ತ್.

'ಭಗವಂತನು ನಿನ್ನನ್ನು ಮನ್ನಿಸಲಿ ! ನೀನೂ ತುಂಬ ಪಾಪ ಮಾಡಿದ್ದೀಯೆ !' ಎಂದ ಪಾದ್ರಿ.

ಕಾಂತಿಹೀನವಾದ ತನ್ನ ದೃಷ್ಟಿಯನ್ನು ಆ ತಾಯಿ ಮಕ್ಕಳ ಕಡೆಗೆ ತಿರುಗಿಸಿದ.

'ಪರ್ಲ್! ನನ್ನ ಮುದ್ದು ಪರ್ಲ್! ಈಗ ನನಗೆ ಮುತ್ತು ಕೊಡುತ್ತೀಯ? ಅಂದು ಕಾಡಿನಲ್ಲಿ ಕೊಡಲಿಲ್ಲ? ಈಗಲಾದರೂ ಕೊಡುವಿಯಲ್ಲವೆ?' ಎಂದ ಕ್ಷೀಣಸ್ವರದಲ್ಲಿ. ಮನಸ್ಸಿನ ಭಾರ ಹಗುರವಾದುದರಿಂದ, ಈಗ ಅವನು ಮಗುವಿನ ಜೊತೆಗೆ ವಿನೋದವಾಗಿ ಮಾತನಾಡುವಂತಾಗಿತ್ತು.

ಪರ್ಲ್ ಅವನ ತುಟಿಗೆ ಮುದ್ದಿಟ್ಟಳು. ಇಲ್ಲಿಗೆ ಕಟ್ಟು ಮುರಿಯಿತು. ತನ್ನ ತಂದೆಯ ಕಪೋಲಗಳ ಮೇಲೆ ಕಣ್ಣೀರಿನ ಕೋಡಿ ಹರಿಸಿದಳು. ಇನ್ನೆಂದಿಗೂ ಮಾನವ ವರ್ಗದೊಂದಿಗೆ ಹೋರಾಡದೆ, ತಾನೂ ಅದರೊಡನೆ ಬೆರೆತು ಹೆಂಗಸಾಗಿ ಬಾಳುವೆನೆಂದು ಪ್ರಮಾಣ ಮಾಡಿದಂತಿತ್ತು ಅವಳ ಕಣ್ಣೀರಿನ ಧಾರೆ.

'ನಾನು ಹೋಗಿ ಬರುತ್ತೇನೆ, ಹೆಸ್ಟರ್!' ಎಂದ ಪಾದ್ರಿ.

'ನಾವು ಮತ್ತೆ ಸಂಧಿಸುವುದಿಲ್ಲವೆ? ನಾವಿಬ್ಬರೂ ಜೊತೆಯಲ್ಲಾಗಿ ಅಮರ ಬಾಳ್ವೆಯನ್ನು ಸಾಗಿಸುವುದಕ್ಕಾಗುವುದಿಲ್ಲವೆ? ದಿಟವಾಗಿಯೂ ನಾವು, ಒಬ್ಬರಿಗಾಗಿ ಮತ್ತೊಬ್ಬರು ತುಂಬ ದುಃಖಿಸಿದ್ದೇವೆ! ಹೊಳೆಯುತ್ತಿರುವ ನಿಮ್ಮ ಕಣ್ಣುಗಳಿಗೆ ಮುಂದಾಗುವುದೆಲ್ಲ ಗೋಚರವಾಗುತ್ತಿದೆಯೆ? ನಿಮಗೇನು ಕಾಣುತ್ತಿರುವುದೆಂಬುದನ್ನು ಹೇಳುವಿರಾ?' ಎಂದು ಮುಖಕ್ಕೆ ಮುಖವಿಟ್ಟು ಕೇಳಿದಳು ಹೆಸ್ಟರ್.

'ಹುಷ್....ಹೆಸ್ಟರ್, ಸುಮ್ಮನಿರು. ನಾವು ಕಾನೂನನ್ನು ಮುರಿದದ್ದು, ಇಂದು ಘೋರವಾಗಿ ಬಯಲಾದ ನಮ್ಮ ಅಪರಾಧ—ಇವೆರಡೇ ಇನ್ನು ಮೇಲೆ ನಿನ್ನ ಮನಸ್ಸಿನಲ್ಲಿ ಉಳಿಯಲಿ! ಒಬ್ಬರ ಆತ್ಮಕ್ಕೆ ಮತ್ತೊಬ್ಬರು ಗೌರವವೀಯದೆ, ದೇವರನ್ನು ಮರೆತದ್ದರಿಂದ, ಅಮರರಾಗಿ ನಾವಿಬ್ಬರೂ ಮತ್ತೆ ಸೇರುವುದು ಸಾಧ್ಯವಿಲ್ಲವೆನಿಸುತ್ತದೆ ನನಗೆ. ಆ ಭಗವಂತನಿಗೆ ಗೊತ್ತು; ಆತ ಕರುಣಾನಿಧಿ! ನನ್ನ ವಿಷಯದಲ್ಲಂತೂ ಆತ ತುಂಬ ದಯಾಳುವಾಗಿದ್ದಾನೆ. ನನ್ನೆದೆಯ ಮೇಲೆ ಸದಾ ಈ ಯಾತನೆಯನ್ನು ಹೊತ್ತಿರುವಂತೆ ಮಾಡಿದ! ಆ ಯಾತನೆ ಸದಾಕಾಲವೂ ಉತ್ಕಟಾವಸ್ಥೆಯಲ್ಲಿರುವಂತೆ ಮಾಡಲು ಆ ಭಯಂಕರನಾದ ಮುದುಕನನ್ನು ಕಳುಹಿಸಿದ! ಕೊನೆಯಲ್ಲಿ ನನ್ನ ಅಪರಾಧವನ್ನೊಪ್ಪಿಕೊಂಡು, ಮನಶ್ಶಾಂತಿ ಪಡೆದು ಈ ಸ್ಥಳದಲ್ಲಿ ಮೃತ್ಯುವನ್ನಪ್ಪುವಂತೆ ಮಾಡಿದ! ಈ ಎರಡು ಯಾತನೆಗಳಲ್ಲಿ

ಯಾವುದಿಲ್ಲದಿದ್ದರೂ, ನನ್ನ ಆತ್ಮ ನಾಶವಾಗುತ್ತಿತ್ತು! ಆ ಭಗವಂತನ ಹೆಸರು ಧನ್ಯವಾಗಲಿ! ಆತನ ಇಚ್ಛೆ ನೆರವೇರಿತು! ಹೋಗಿಬರುತ್ತೇನೆ!' ಎಂದು ಕಂಪಿಸುವ ಸ್ವರದಲ್ಲಿ,ನಿರ್ಧಾರದಿಂದ ನುಡಿದ ಪಾದ್ರಿ.

ಪಾದ್ರಿಯ ಬಾಯಿಂದ ಹೊರಟ ಈ ಕೊನೆಯ ಮಾತುಗಳು ನಿಂತ ಕ್ಷಣವೇ ಆದುವರೆಗೂ ನಿಶ್ಶಬ್ದವಾಗಿದ್ದ ಜನಸಮೂಹದಲ್ಲಿ ಕೋಲಾಹಲ ಪ್ರಾರಂಭವಾಯಿತು.

## ೨೪

ಈ ಘಟನೆ ನಡೆದು ಅನೇಕ ದಿನಗಳು ಕಳೆದವು. ಜನರ ಮನಸ್ಸಿನಲ್ಲಿ ಈ ಘಟನೆಯ ವಿವರಗಳು ಸರಿಯಾಗಿ ಉಳಿಯಲಿಲ್ಲ. ಅದರ ವಿಷಯವಾಗಿ ನಾನಾವಿಧ ಕತೆಗಳು ಹುಟ್ಟಿದುವು.

ಹೆಸ್ಟರ್ ಪ್ರೈನ್‌ಳು ಧರಿಸಿದ್ದ ಕೆಂಪು ಅಕ್ಷರದಂತೆಯೇ ಪಾದ್ರಿಯ ಎದೆಯ ಮೇಲಿನ ಮಾಂಸಖಂಡಗಳಲ್ಲಿ ಒಂದು ಕೆಂಪು ಅಕ್ಷರ ಅಚ್ಚೊತ್ತಿದ್ದು ದನ್ನು ನೋಡಿದೆವೆಂದು ಅನೇಕರು ಹೇಳಿದರು. ಅದು ಹೇಗೆ ಉಂಟಾಯಿತೆಂಬ ವಿಷಯದಲ್ಲಿ ಅನೇಕ ಕತೆಗಳು ಹುಟ್ಟಿಕೊಂಡವು. ಆದರೂ ಅವೆಲ್ಲಾ ಜನರು ಊಹೆ ಮಾಡಿದುದವೆಂದು ಕಾಣುತ್ತದೆ. ಹೆಸ್ಟರ್ ಪ್ರೈನ್‌ಳು ತನ್ನ ಕಳಂಕವನ್ನು ಹೊತ್ತ ದಿನವೇ, ರೆವರೆಂಡ್ ಡಿಮ್ಸ್‌ಡೇಲನೂ ಪಶ್ಚಾತ್ತಾಪ ಪಡಲು ಪ್ರಾರಂಭಿಸಿ, ಅನೇಕ ವಿಧದಲ್ಲಿ ದೇಹದಂಡನೆ ಮಾಡಿಕೊಳ್ಳಲು ತೊಡಗಿದನೆಂದು ಕೆಲವರು ಹೇಳತೊಡಗಿದರು. ಮತ್ತೆ ಕೆಲವರು, ಮಾಂತ್ರಿಕ ನಾದ ರೋಜರ್ ಚಿಲಿಂಗ್‌ವರ್ತ್‌ನು ತನ್ನ ವಿಷಪೂರಿತ ಔಷಧಿಗಳ ಜೊತೆಗೆ ಮಾಟಮಾಡಿ, ಅವನ ಎದೆಯ ಮೇಲೆ ಆ ಗುರುತು ಮೂಡುವಂತೆ ಮಾಡಿದ ನೆಂದು ಹೇಳತೊಡಗಿದರು. ಆ ಪಾದ್ರಿಯ ಮನೋಭಾವವನ್ನೂ, ಉದಾತ್ತ ಧ್ಯೇಯಗಳನ್ನೂ ಅರಿತ ಉಳಿದವರು, ಸತತವಾಗಿ ಅವನ ಎದೆಯಲ್ಲಿ ಕೊರೆ ಯುತ್ತಿದ್ದ ಯಾತನೆಯಿಂದ ಆ ಗುರುತು ಮೂಡಿತೆಂದೂ; ಆ ಅಕ್ಷರ ಹೊರಗೆ ಗೋಚರವಾದ ಕೂಡಲೇ, ದೇವರು ವಿಧಿಸಿದ ಈ ಶಿಕ್ಷೆಗೆ ಅವನು ಗುರಿಯಾಗಬೇಕಾಯಿತೆಂದೂ ಹೇಳುತ್ತಿದ್ದರು. ಈ ಮೂರು ಊಹೆಗಳಲ್ಲಿ ಯಾವುದು ನಿಜವೆಂಬುದನ್ನು ಓದುಗರೇ ಅರಿತುಕೊಳ್ಳಬೇಕು.

ಒಂದು ಆಚ್ಚರಿಯ ಸಂಗತಿಯೆಂದರೆ, ಅಂದು ಒಂದು ಕ್ಷಣವೂ ತಪ್ಪದೆ ಡಿಮ್ಸ್‌ಡೇಲನನ್ನೇ ನೋಡುತ್ತಿದ್ದೆವೆಂದು ಹೇಳುತ್ತಿದ್ದ ಕೆಲವರು, ಅವನ ಎದೆಯ ಮೇಲೆ ಯಾವ ವಿಧವಾದ ಚಿಹ್ನೆಯೂ ಇರಲಿಲ್ಲವೆಂದು

ಖಂಡಿತವಾಗಿ ಹೇಳುತ್ತಿದ್ದರು. ಅಷ್ಟೇ ಅಲ್ಲ; ಪಾದ್ರಿಯ ಅಂತ್ಯ ನುಡಿಗಳಲ್ಲಿ ಹೆಸ್ಟರ್ ಪ್ರೈನ್‌ಳ ಅಪರಾಧಕ್ಕೂ ಅವನಿಗೂ ಯಾವ ಸಂಬಂಧವಿರುವುದೂ ತೋರಲಿಲ್ಲವೆಂದು ಅವರು ಹೇಳುತ್ತಿದ್ದರು. ಮತ್ತೆ ಈ ಗಣ್ಯರಾದ ಸಾಕ್ಷಿಗಳ ಮಾತಿನಂತೆ ಹೇಳುವುದಾದರೆ—ತಾನು ಸಾಯುವೆನೆಂದು ಅರಿತುಕೊಂಡ ಪಾದ್ರಿ, ಜನರೆಲ್ಲಾ ತನ್ನನ್ನು ದೇವತೆಯೆಂದು ಭಾವಿಸಿರುವುದನ್ನು ಅರಿತು, ಈ ಜಗತ್ತಿನ ಮೇಲ್ಮೆಯೆಲ್ಲಾ ಎಷ್ಟು ಕ್ಷಣಿಕವೆಂದು ತೋರಿಸುವ ಸಲುವಾಗಿ ಹೆಸ್ಟರ್‌ಳ ತೋಳುಗಳಲ್ಲಿ ಕುಸಿದು ಬಿದ್ದನಂತೆ. ಮಾನವ ವರ್ಗದ ಆತ್ಮೋದ್ಧಾರಕ್ಕಾಗಿ ದುಡಿದ ಈ ಪಾದ್ರಿ ಸಾಯುವಾಗಲೂ, ನಾವೆಲ್ಲರೂ ಪಾಪಿಗಳೇ ಎಂದು ಬೋಧಿಸುವುದಕ್ಕಾಗಿ ಈ ಕೆಲಸ ಮಾಡಿದನಂತೆ. ಅವನು ಹೀಗೆ ಮಾಡಿದುದು, ಮಾನವರಲ್ಲೆಲ್ಲಾ ತುಂಬ ಪುಣ್ಯಪುರುಷನಾದವನು ಭಗವಂತನ ಕೃಪೆಯನ್ನು ಚೆನ್ನಾಗಿ ಅರಿತುಕೊಳ್ಳಬಲ್ಲನೆಂದು ಬೋಧಿಸುವುದಕ್ಕಾಗಿ. ಈ ವಿಷಯದ ಸತ್ಯಾಸತ್ಯತೆಗಳನ್ನು ಕುರಿತು ನಾವು ಚರ್ಚಿಸುವುದು ಬೇಡ. ಡಿಮ್ಸ್‌ಡೇಲನ ಕತೆಯಿಂದ ನಾವು ಅರಿತುಕೊಳ್ಳಬೇಕಾದುದೇನೆಂದರೆ, ಈ ಪಾದ್ರಿಯಂಥ ಜನ ಎಷ್ಟು ಹೀನಕೃತ್ಯ ಮಾಡಿದ್ದರೂ, ಆತನಿಗೆ ಆಪ್ತರಾದವರು ಅವನ ಗುಣವನ್ನು ಕೊಂಡಾಡಿ, ಅವನನ್ನು ಮೇಲೆತ್ತಿ ಹಿಡಿಯಲೆತ್ನಿಸುತ್ತಾರೆಂಬುದು.

ನಾವು ಇದುವರೆಗೂ ವಿಶದಪಡಿಸಿರುವ ಘಟನೆಗಳೆಲ್ಲಾ, ಅನೇಕರ ಸಾಕ್ಷ್ಯದ ಆಧಾರದ ಮೇಲೆ ಬರೆದಿರುವ ಹಳೆಯ ಹಸ್ತಪ್ರತಿಯೊಂದಕ್ಕೆ ಸೇರಿದುದು. ಈ ಸಾಕ್ಷ್ಯವನ್ನಿತ್ತವರಲ್ಲಿ ಅನೇಕರು ಹೆಸ್ಟರ್ ಪ್ರೈನ್‌ಳನ್ನು ಸ್ವತಃ ನೋಡಿದ್ದವರು. ಒಟ್ಟಿನಲ್ಲಿ ಈ ಪಾದ್ರಿಯ ದುರಂತದ ಕತೆಯಿಂದ ನಾವು ಒಂದು ನೀತಿಯನ್ನು ಕಲಿಯಬೇಕಾಗಿದೆ. ಅದೇನೆಂದರೆ: 'ಸತ್ಯವಂತರಾಗಿರಬೇಕು! ನಾವು ಎಂತಹ ಹೀನಕೃತ್ಯಗಳನ್ನು ಮಾಡಿದ್ದರೂ, ಅದನ್ನು ಜಗತ್ತಿಗೆ ಸಂಪೂರ್ಣವಾಗಿ ತೋರ್ಪಡಿಸಿಕೊಳ್ಳದಿದ್ದರೂ ಸಹ, ಸ್ವಲ್ಪ ಮಟ್ಟಿಗೆ ಅದರ ಕುರುಹನ್ನಾದರೂ ತೋರಿಸಬೇಕು.'

ಡಿಮ್ಸ್‌ಡೇಲನ ಮರಣಾನಂತರ ರೋಜರ್ ಚಿಲಿಂಗ್‌ವರ್ತ್‌ನಲ್ಲಿ ತುಂಬ ಮಾರ್ಪಾಟಾಯಿತು. ಬುಡಸಹಿತ ಕಿತ್ತು ಬಿಸಿಲಿನಲ್ಲಿ ಒಗೆದ ಎಳೆಯ ಗಿಡದಂತೆ, ಅವನ ದೈಹಿಕ ಮತ್ತು ಮಾನಸಿಕ ಶಕ್ತಿಗಳೆರಡೂ ಮಾಯವಾಗಿ ಸೊರಗಿಹೋದ. ಸೇಡು ತೀರಿಸಿಕೊಳ್ಳುವುದೊಂದೇ ಈ ನಿರ್ಭಾಗ್ಯನ ಗುರಿಯಾಗಿತ್ತು. ಅದು ಮುಗಿದ ಕೂಡಲೇ ಅವನು ಮಾಡಬೇಕಾಗಿದ್ದ ಪೈಶಾಚಿಕ ಕೃತ್ಯಗಳು ಮತ್ತಾವುವೂ ಉಳಿದಿರಲಿಲ್ಲ. ತನ್ನ

ಕರ್ಮಕ್ಕೆ ತಕ್ಕ ಪ್ರತಿಫಲವನ್ನನುಭವಿಸುವುದೊಂದೇ ಅವನಿಗೆ ಉಳಿದದ್ದು. ಆದರೆ ನಮಗೆ ಇದುವರೆಗೆ ಪರಿಚಿತರಾದ ರೋಜರ್ ಚಿಲಿಂಗ್‌ವರ್ತ್ ಮತ್ತು ಅವನ ಜೊತೆಗಾರರಿಗೂ ನಮ್ಮ ಕರುಣೆ ಸಲ್ಲತಕ್ಕದಲ್ಲ. ರಾಗ ದ್ವೇಷಗಳೆರಡರ ತಳಹದಿಯೂ ಬೇರೆ ಬೇರೆಯಲ್ಲ ಎಂಬುದನ್ನು ಅರಿತಾಗ ನಮಗೆ ತುಂಬ ಸೋಜಿಗವಾಗುತ್ತದೆ. ರಾಗದಂತೆಯೇ ದ್ವೇಷವೂ ಬೆಳೆದು ಬಂದಾಗ, ಒಬ್ಬ ವ್ಯಕ್ತಿಯ ಮನಸ್ಸಿಗೆ ಯೋಚಿಸಲು ಪ್ರಿಯವಾದ ವಸ್ತು ಸಿಗಬೇಕಾದರೆ ಅವನು ದ್ವೇಷಿಸುವ ಇನ್ನೊಬ್ಬ ವ್ಯಕ್ತಿಯಿಂದಲೇ. ಪರಸ್ಪರ ಪ್ರೇಮಿಗಳಲ್ಲಿ ಒಬ್ಬ ಮಾಯವಾದಾಗ ಇನ್ನೊಬ್ಬನಿಗೆ ವಿಷಾದವಾಗುವಂತೆಯೇ ಪರಸ್ಪರ ದ್ವೇಷಿಗಳಲ್ಲೂ ವಿಷಾದವಾಗುತ್ತದೆ. ವೇದಾಂತದ ದೃಷ್ಟಿಯಿಂದ ಹೇಳುವುದಾದರೆ, ರಾಗ ದ್ವೇಷಗಳೆರಡೂ ಒಂದೇ ಆದರೂ, ಅವೆರಡರಲ್ಲಿರುವ ವ್ಯತ್ಯಾಸವೆಂದರೆ, ಒಂದು ದಿವ್ಯಪ್ರಭೆಯಿಂದ ರಾರಾಜಿಸುತ್ತದೆ; ಮತ್ತೊಂದು ನಸುಕಿನಲ್ಲಿ ಕೆಂಡಕಾರುತ್ತಿರುತ್ತದೆ. ಆಧ್ಯಾತ್ಮಿಕ ಪ್ರಪಂಚದಲ್ಲಿ, ವೈದ್ಯ ಮತ್ತು ಪಾದ್ರಿ—ಇಬ್ಬರೂ ಯಾತನೆಗೊಳಗಾದವರಾದುದರಿಂದ—ಇವರಿಬ್ಬರ ಇಹಲೋಕದ ದ್ವೇಷ, ಪ್ರೀತಿಯಾಗಿ ಪರಿವರ್ತನೆಯಾಗಿದ್ದಿರಬಹುದು.

ಪಾದ್ರಿಯು ಮರಣಹೊಂದಿದ ವರ್ಷದಲ್ಲೇ, ರೋಜರ್ ಚಿಲಿಂಗ್‌ವರ್ತ್‌ನೂ ತೀರಿಕೊಂಡ. ಇಲ್ಲಿ ಮತ್ತು ಇಂಗ್ಲೆಂಡಿನಲ್ಲಿ, ಎರಡು ಕಡೆಗಳಲ್ಲೂ ಇದ್ದ ತನ್ನ ಭಾರಿ ಆಸ್ತಿಯೆಲ್ಲಾ, ಹೆಸ್ಟರ್ ಪ್ರೈನ್‌ಳ ಮಗಳಾದ ಪರ್ಲ್‌ಳಿಗೆ ಸೇರತಕ್ಕದ್ದೆಂದು ಉಯಿಲು ಬರೆದಿಟ್ಟದ್ದ.

ಇದುವರೆಗೂ ಎಲ್ಲರೂ ಪಿಶಾಚಿಯ ಮಗುವೆಂದು ಕರೆಯುತ್ತಿದ್ದ ತುಂಟ ಹುಡುಗಿ ಪರ್ಲ್ ಈಗ ಆ ದೇಶದಲ್ಲೇ ಭಾರಿ ಆಸ್ತಿವಂತೆಯಾದಳು. ಇದರಿಂದ ಆ ತಾಯಿ ಮಕ್ಕಳ ವಿಷಯದಲ್ಲಿ ಜನರ ಭಾವನೆ ತುಂಬ ಬದಲಾಯಿತು. ಅವರಿಬ್ಬರೂ ಮುಂದೆ ಇಲ್ಲಿಯೇ ನೆಲಸಿದ್ದ ಪಕ್ಷದಲ್ಲಿ, ಪರ್ಲ್ ವಯಸ್ಸಿಗೆ ಬಂದಾಗ ಆ ಪ್ಯೂರಿಟನ್ನರಲ್ಲೇ ಒಬ್ಬನನ್ನು ಕೈಹಿಡಿಯುತ್ತಿದ್ದಳೋ ಏನೋ. ಆದರೆ ವೈದ್ಯನು ತೀರಿಕೊಂಡ ಕೆಲದಿವಸಗಳಲ್ಲಿಯೇ ಹೆಸ್ಟರ್ ಪ್ರೈನ್ ತನ್ನ ಮಗಳೊಂದಿಗೆ ಮಾಯವಾದಳು. ಅನೇಕ ವರ್ಷಗಳು ಕಳೆದರೂ ಅವರಿಬ್ಬರ ಗತಿಯೇನಾಯಿತೆಂದು ಸರಿಯಾಗಿ ಯಾರಿಗೂ ತಿಳಿಯಲಿಲ್ಲ. ಕೆಂಪು ಅಕ್ಷರದ ಕತೆ ಬರಬರುತ್ತಾ ಒಂದು ದಂತಕತೆಯಾಯಿತು. ಆದರೂ ಅದು ಉಂಟುಮಾಡಿದ್ದ ಭೀತಿಯ ಪರಿಣಾಮ ಹೋಗಿರಲಿಲ್ಲ. ಪಾದ್ರಿ ಸತ್ತ ಆ ವಧ್ಯವೇದಿಕೆ, ಸಮುದ್ರತೀರದಲ್ಲಿದ್ದ ಹೆಸ್ಟರ್

ಪ್ರೈನ್‌ಳ ಗುಡಿಸಲು—ಇವೆರಡೂ ಇನ್ನೂ ಭೀತಿಯನ್ನುಂಟುಮಾಡುತ್ತಿದ್ದವು. ಸಮುದ್ರ ತೀರದಲ್ಲಿದ್ದ ಈ ಗುಡಿಸಲ ಬಳಿ ಒಂದು ದಿನ ಮಧ್ಯಾಹ್ನ ಕೆಲವು ಮಕ್ಕಳು ಆಟವಾಡುತ್ತಿದ್ದಾಗ, ಬೂದಿಬಣ್ಣದ ಉಡುಪು ಧರಿಸಿದ್ದ, ಎತ್ತರವಾಗಿದ್ದ ಒಬ್ಬ ಹೆಂಗಸು ಗುಡಿಸಲ ಬಾಗಿಲನ್ನು ಸಮೀಪಿಸುತ್ತಿರುವುದು ಕಾಣಿಸಿತು. ಇಷ್ಟು ವರ್ಷಗಳಲ್ಲಿ ಒಮ್ಮೆಯೂ ಆ ಬಾಗಿಲನ್ನು ಯಾರೂ ತೆಗೆದಿರಲಿಲ್ಲ. ಆಕೆ ಬೀಗವನ್ನು ತೆಗೆದಳೋ, ಅಥವಾ ಕೊಳೆತ ಮರದ ಆ ಬಾಗಿಲು ಹಾಗೆಯೇ ತೆರೆದುಕೊಂಡಿತೋ ತಿಳಿಯದು. ಅಂತೂ ಆಕೆ ಒಳಕ್ಕೆ ಹೋದಳು.

ಹೊಸಿಲಿನ ಮೇಲೆ ಒಂದು ಕ್ಷಣ ನಿಂತು ತಿರುಗಿ ನೋಡಿದಳು. ತಾನು ಹಿಂದೆಲ್ಲ ಕಷ್ಟವನ್ನನುಭವಿಸಿದ್ದ ಈ ಮನೆ, ಒಬ್ಬಂಟಿಗಳಾಗಿದ್ದುದರಿಂದ ಅವಳಿಗೆ ಬಿಕೋ ಎನಿಸಿ ಗಾಬರಿಯಾಗಿರಬೇಕು. ಅವಳು ಹಾಗೆ ನಿಧಾನಿಸಿದ್ದು ಒಂದು ಕ್ಷಣಮಾತ್ರ—ಅಷ್ಟು ಕಾಲದಲ್ಲಿ ಅವಳೆದೆಯ ಮೇಲಿದ್ದ ಕೆಂಪು ಅಕ್ಷರ ಕಾಣಿಸಿತು.

ಹೆಸ್ಟರ್ ಪ್ರೈನ್ ಹಿಂದಿರುಗಿ, ಇಷ್ಟುದಿನ ತ್ಯಜಿಸಿದ್ದ ತನ್ನ ಕಳಂಕದ ಚಿಹ್ನೆಯನ್ನು ಮತ್ತೆ ಹೊತ್ತುಕೊಂಡಳು! ಆದರೆ ಪರ್ಲ್ ಎಲ್ಲಿ? ಇನ್ನೂ ಬದುಕಿದ್ದ ಪಕ್ಷಕ್ಕೆ ಈ ವೇಳೆಗೆ ಅವಳು ಯೌವ್ವನದ ಹೆಂಗಸಾಗಿರಬೇಕು. ಅವಳೇನು ಬದುಕಿರುವಳೋ ಅಥವಾ ಸತ್ತಳೋ—ಸರಿಯಾಗಿ ಯಾರಿಗೂ ತಿಳಿಯಲಿಲ್ಲ. ಆದರೆ ಹೆಸ್ಟರ್ ಪ್ರೈನ್ ಆ ಕೆಂಪು ಅಕ್ಷರವನ್ನು ಧರಿಸಿರುವುದು ನೋಡಿದರೆ, ದೂರ ದೇಶದಲ್ಲಿದ್ದ ತನ್ನ ಪ್ರಿಯವಾದ ವಸ್ತುವಿನ ಗುರುತಾಗಿ ಧರಿಸಿರುವಳೆಂಬ ಸೂಚನೆ ಕಂಡುಬರುತ್ತಿತ್ತು. ಕಂಡು ಕೇಳರಿಯದ ಯಾವುದೋ ದೂರದೇಶದಿಂದ ಪತ್ರಗಳು ಬರುತ್ತಿದ್ದವು. ಶ್ರೀಮಂತರು ಮಾತ್ರ ಕೊಂಡುಕೊಳ್ಳಲು ಸಾಧ್ಯವಾದಂತಹ ಕೆಲವು ವಸ್ತುಗಳು—ಹೆಸ್ಟರ್‌ಳಿಗೆ ಅವುಗಳನ್ನು ಉಪಯೋಗಿಸುವ ಇಚ್ಛೆಯಿಲ್ಲದಿದ್ದರೂ—ಅವಳ ಗುಡಿಸಲಲ್ಲಿದ್ದವು. ಇನ್ನೊಮ್ಮೆ ಹೆಸ್ಟರ್ ತುಂಬ ಕುಶಲತೆಯಿಂದ ಕಸೂತಿ ಮಾಡಿ ಪುಟ್ಟ ಮಗುವಿನ ಅಂಗಿ ಹೊಲೆಯುತ್ತಿರುವುದು ಕಂಡು ಬಂದಿತು.

ಒಟ್ಟಿನಲ್ಲಿ ಹೇಳುವುದಾದರೆ, ಪರ್ಲ್ ಜೀವಂತವಾಗಿದ್ದುದಲ್ಲದೆ, ಮದುವೆಯಾಗಿ, ಸೌಖ್ಯವಾಗಿ ಬಾಳುತ್ತಿದ್ದಳು. ಒಬ್ಬೊಂಟಿಗಳಾದ ತಾಯಿಯನ್ನೂ ತನ್ನ ಬಳಿಯಲ್ಲೇ ಇಟ್ಟುಕೊಳ್ಳಬೇಕೆಂದು ಅವಳ ಇಚ್ಛೆಯಾಗಿತ್ತು.

ಆದರೆ ಹೆಸ್ಟರ್‌ಳ ನಿಜ ಜೀವನ ನ್ಯೂ ಇಂಗ್ಲೆಂಡಿನಲ್ಲಿಯೇ ಸಾಗಬೇಕಾಗಿತ್ತು; ಪರ್ಲ್‌ಳಿದ್ದ ಆ ದೂರದೇಶದಲ್ಲಲ್ಲ. ಇಲ್ಲಿ ಪಾಪ ಮಾಡಿದ್ದಳು;

ಇಲ್ಲಿ ಕಷ್ಟ ಅನುಭವಿಸುತ್ತಿದ್ದಳು; ಇಲ್ಲೇ ಅವಳ ಪ್ರಾಯಶ್ಚಿತ್ತವೂ ಆಗಬೇಕಿತ್ತು. ಆದ್ದರಿಂದ ಅವಳು ಹಿಂದಿರುಗಿ ಬಂದು ತಾನಾಗಿಯೇ ಮನಃಪೂರ್ವಕವಾಗಿ ಆ ಕೆಂಪು ಅಕ್ಷರವನ್ನು ಮತ್ತೊಮ್ಮೆ ಧರಿಸಿದಳು. ಮುಂದೆ ಎಂದೂ ಅದು ಅವಳ ಎದೆಯಿಂದ ಕದಲಲಿಲ್ಲ. ವರ್ಷಗಳುರುಳಿದಂತೆ, ಜನ ಅದನ್ನು ಹೇಯವಾದ ಕಾಣುವುದು ತಪ್ಪಿ, ಅದನ್ನು ಕಂಡು ವ್ಯಸನಪಡುತ್ತಿದ್ದುದಲ್ಲದೆ, ಗೌರವವನ್ನೂ ಸೂಚಿಸುತ್ತಿದ್ದರು. ಹೆಸ್ಟರ್ ಪ್ರೈನ್ ಸ್ವಾರ್ಥರಹಿತಳಾಗಿ ಬಾಳುತ್ತಿದ್ದುದರಿಂದ, ಜನ ತಮ್ಮ ಸುಖದುಃಖಗಳನ್ನೆಲ್ಲಾ ಅವಳ ಮುಂದೆ ತೋಡಿಕೊಂಡು, ಆಕೆಯ ಸಲಹೆ ಕೇಳುತ್ತಿದ್ದರು. ಆದರಲ್ಲಿಯೂ, ಏನಾದರೂ ತಪ್ಪನ್ನೋ, ಪಾಪವನ್ನೋ ಮಾಡಿದ್ದ ಹೆಂಗಸರು ಹೆಸ್ಟರ್‌ಳಲ್ಲಿಗೆ ಬಂದು, ತಾವು ದುಃಖಿಗಳಾಗಿರುವುದಕ್ಕೆ ಕಾರಣವನ್ನೂ, ಅದಕ್ಕೆ ಪರಿಹಾರವನ್ನೂ ಕೇಳುತ್ತಿದ್ದರು ತಕ್ಕ ಸಲಹೆ ನೀಡಿ ಹೆಸ್ಟರ್ ಅವರನ್ನು ಸಮಾಧಾನ ಪಡಿಸಿ ಕಳುಹಿಸುತ್ತಿದ್ದಳು. ಅಷ್ಟೇ ಅಲ್ಲ, ಗಂಡು-ಹೆಣ್ಣಿನ ಸಂಬಂಧ ಪರಸ್ಪರ ಸುಖದಾಯಕವಾಗಿರುವ ದಾರಿಯನ್ನು ಕಾಲ ಒದಗಿದಾಗ ದೇವರೇ ತೋರಿಸುತ್ತಾನೆಂಬ ಆಶ್ವಾಸನೆಯನ್ನೂ ನೀಡುತ್ತಿದ್ದಳು. ಚಿಕ್ಕವಳಾಗಿದ್ದಾಗ ಹೆಸ್ಟರ್, ತಾನೇ ಆ ಪ್ರವಾದಿಯಾಗಬಹುದೆಂದು ಭಾವಿಸಿದ್ದಳು. ಆದರೆ ಪಾಪಕಲುಷಿತಳಾದ ತನಗೆ ಆ ಪುಣ್ಯವಿಲ್ಲವೆಂಬುದನ್ನು ಅರಿತುಕೊಂಡು ಎಷ್ಟೋ ಕಾಲವಾಗಿತ್ತು. ಆದರೂ ಅದನ್ನು ಬೋಧಿಸುವ ದೇವತೆ, ಸೌಂದರ್ಯವತಿಯೂ, ಗುಣವಂತೆಯೂ ಮತ್ತು ಬುದ್ಧಿವಂತಳಾದ ಹೆಂಗಸೇ ಆಗಬೇಕು. ಆ ಬೋಧೆ ದುಃಖಪೂರಿತ ಅನುಭವದ ಜ್ಞಾನದಿಂದಲ್ಲ; ಉಲ್ಲಾಸಲಹರಿಯಿಂದ ಹೊರಟಿದ್ದಾಗಿರಬೇಕು. ಆಗ ಪವಿತ್ರಪ್ರೇಮ ಕೊನೆಯವರೆಗೂ ಹೇಗೆ ಸುಖವನ್ನು ಕೊಡುವುದೆಂಬುದನ್ನು ಜಗತ್ತು ಕಂಡೀತು.

ಹೀಗೆಲ್ಲಾ ಹೇಳುತ್ತಾ ಹೆಸ್ಟರ್ ಪ್ರೈನ್ ತನ್ನೆದೆಯ ಮೇಲಿರುವ ಕೆಂಪು ಅಕ್ಷರದ ಕಡೆಗೆ ದೃಷ್ಟಿ ಹೊರಳಿಸುತ್ತಾಳೆ. ಹೀಗೆಯೇ ಅನೇಕ ವರ್ಷಗಳು ಉರುಳಿದನಂತರ, ಸ್ಮಶಾನ ಭೂಮಿಯಲ್ಲಿದ್ದ ಹೂತುಹೋಗಿರುವ ಸಮಾಧಿಯೊಂದರ ಪಕ್ಕದಲ್ಲಿ ಮತ್ತೊಂದು ಹಳ್ಳವನ್ನು ತೋಡಲಾಯಿತು. ಈ ಇಬ್ಬರ ದೇಹದ ಧೂಳು ಸಹ ಒಂದರೊಡನೊಂದು ಬೆರೆಯಬಾರದೆಂಬಂತೆ, ಆ ಎರಡು ಸಮಾಧಿಗಳ ಮಧ್ಯೆ ಸ್ಥಳ ಬಿಟ್ಟಿತ್ತು. ಆದರೂ ಅವೆರಡರಿಂದಲೂ ಒಂದೇ ಕಲ್ಲನ್ನು ನೆಟ್ಟಿದ್ದರು. ಅಕ್ಕಪಕ್ಕದಲ್ಲಿದ್ದ ಗೋರಿಯ ಕಲ್ಲುಗಳಿಗೆಲ್ಲಾ ವಿವಿಧವಾದ ಚಿತ್ರಣಗಳೂ ಬರಹಗಳೂ ಇದ್ದರೂ ಇದು ಮಾತ್ರ ತುಂಬ ಸಾಮಾನ್ಯವಾಗಿ ಕಾಣುತ್ತಿತ್ತು. ಅದರ ಮೇಲೆ ಎರಡು ಕತ್ತಿಗಳ ಗುರುತಿನಂತೆ

ಕಾಣುವ ಚಿಹ್ನೆಯೊಂದು ಇಂದಿಗೂ ಕಾಣುತ್ತದೆ. ಆದರ ಅರ್ಥ ಹೀಗೆ ಮಾಡಬಹುದು —

'ಮುಂಕುಕವಿದ ಪ್ರದೇಶದಲ್ಲಿ 'ಎ' ಎಂಬ ಅಕ್ಷರ ಕೆಂಪಗೆ ಮೆರೆಯುತ್ತಿದೆ.'



# ನಮ್ಮ ಪ್ರಕಟನೆಗಳು

† ಹಂಸಗೀತೆ—ತ. ರಾ. ಸು.

† ಗೆದ್ದವರು ಯಾರು ?—ದೇವುಡು

† ಆಕಾಶದೀಪ—ಅಡಿಗ

† ತೊಟ್ಟಿಲು ತೂಗಿತು—ತ. ರಾ. ಸು.

| | | | |
|---|---|---|---|
| ಚಂದನದ ಗೊಂಬೆ—ತ. ರಾ. ಸು. | ೧ | ೮ | ೦(೧.೫೦) |
| ಚಕ್ರತೀರ್ಥ—ತ. ರಾ. ಸು. | ೧ | ೮ | ೦(೧.೫೦) |
| ಮೊದಲ ಹೆಜ್ಜೆ—ತ್ರಿವೇಣಿ | ೧ | ೪ | ೦(೧.೨೫) |
| ಜಯಂತಿ—ಎಸ್. ಅನಂತನಾರಾಯಣ | ೧ | ೨ | ೦(೧.೧೩) |
| ಸಿಡಿಲ ಮೊಗ್ಗು—ತ. ರಾ. ಸು. | ೨ | ೦ | ೦(೨.೦೦) |
| ಕಾತ್ಯಾಯಿನಿ—ನಿರಂಜನ | ೧ | ೪ | ೦(೧.೨೫) |
| ಕೆಂಪು ಅಕ್ಷರ—ಅನುವಾದ : ಬಾಲು | ೦ | ೧೫ | ೦(೦.೯೪) |

**ಬರಲಿರುವ ಕೃತಿಗಳು**

ಮರೀಚಿಕೆ—ಅನುವಾದ : ವಿಶ್ವನಾಥ ಮಿರ್ಲೆ

ಅಶ್ರುತೀರ್ಥ—ತ. ರಾ. ಸು.

* ವಿಜಯನಾರಾಯಣ—ತ. ರಾ. ಸು.

* ಹೊಯ್ಸಳೇಶ್ವರ—ತ. ರಾ. ಸು.

* ('ಸಿಡಿಲಮೊಗ್ಗು' ವಿನ ೨ ಮತ್ತು ೩ ನೆಯ ಭಾಗಗಳು)

ಚಂದ್ರಾಯುಧ—ತ. ರಾ. ಸು.

† ಈ ಕೃತಿಗಳು ಮುಗಿದಿವೆ

**ನವ್ಯ ಸಾಹಿತ್ಯ ಪ್ರಕಾಶನ, ರಾಮಸ್ವಾಮಿ ಸರ್ಕಲ್, ಮೈಸೂರು.**